( ೨೧ನೇ ಪ್ರಕಟನೆ )

ಆರನೇಯ ವರುಷದ ೧-೨ನೇ ಪುಷ್ಪ

# ಕೈ ಹಿಡಿದ ಕಾವೇರಿ

(ಸ್ವತಂತ್ರ ಸಾಮಾಜಿಕ ಕಾದಂಬರಿ)

ಬರೆದವರು : ಎಂ. ಹರಿದಾಸರಾಯ

ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

ಪ್ರಕಾಶಕರು :
ಎಂ. ಎಚ್. ರಾವ್
ಸರ್ವೋದಯ ಸಾಹಿತ್ಯಮಾಲೆ
ಹುಬ್ಬಳ್ಳಿ

ಮುದ್ರಕರು :
ಎಸ್. ವ್ಹಿ. ಶ್ರೀಷಿ
ರಾಯಲ್ ಪ್ರಿಂಟಿಂಗ್ ಪ್ರೆಸ್
ಹುಬ್ಬಳ್ಳಿ

ಮೊದಲನೇಯ ಆವೃತ್ತಿ
೧೫, ನವಂಬರ್, ೧೯೫೩

ಬೆಲೆ : ೨—೪—೦

# ಅರಿಕೆ

ಇದೇ ಅಗಸ್ಟ್ ೧೯೫೩ರಿಂದ ಸರ್ವೋದಯ ಸಾಹಿತ್ಯ ಮಾಲೆಯು ತನ್ನ ಆರನೇಯ ವರುಷಕ್ಕೆ ಕಾಲಿಟ್ಟಿದೆ. ಈ ನೂತನ ವರುಷದ ಕಾಣಿಕೆಯಾಗಿ "ಕೈ ಹಿಡಿದ ಕಾವೇರಿ" ಎಂಬ ಸ್ವತಂತ್ರ ಸಾಮಾಜಿಕ ಕಾದಂಬರಿಯನ್ನು ನಮ್ಮ ಚಂದಾದಾರರ ಕೈಗೆ ಅರ್ಪಿಸಲು ಸಂತೋಷವೆನಿಸುತ್ತದೆ. ಅಗಸ್ಟ್ ಮತ್ತು ನವಂಬರದ ಈ ಎರಡು ಪುಷ್ಪಗಳು ಈ ಒಂದೇ ಗ್ರಂಥದಲ್ಲಿ ಕೂಡಿವೆ. ಕೆಲವು ಅನಾನುಕೂಲತೆಗಳ ಮೂಲಕ ಇದು ಸ್ವಲ್ಪ ತಡವಾಗಿ ಪ್ರಕಟವಾಗುತ್ತಿದೆ. ಚಂದಾದಾರರು ಕ್ಷಮಿಸಬೇಕೆಂದು ಪ್ರಾರ್ಥನೆ.

ಗ್ರಂಥಮಾಲೆಯು ಈ ಆರ್ಥಿಕ ಮುಗ್ಗಟ್ಟಿನ ಕಾಲ ಪರಿಸ್ಥಿತಿಯಲ್ಲಿ ತುಂಬಾ ತೊಂದರೆಗೊಳಗಾಗಿದೆ. ಈಗಿನ ವಾತಾವರಣದಲ್ಲಿ ಬಡವರು ಹೊಟ್ಟೆ ಬಟ್ಟೆ ಹೊರೆಯುಕೊಂಡು ಪ್ರಾಣಧಾರಣ ಮಾಡಿಕೊಂಡಿರುವುದೇ ಕಠಿಣ. ಹಾಗಿರುವಾಗ ಆ ಹೋರಾಟವನ್ನು ಇದಿರಿಸಿ ಅದರ ಜೊತೆಗೆ ಇಂಥ ಗ್ರಂಥ ಮಾಲೆಯೊಂದನ್ನು ಕೊರಳಿಗೆ ಹಾಕಿಕೊಂಡು ಬಂದ ವಿಪತ್ಪರಂಪರೆಗಳನ್ನೆಲ್ಲ ಸಹಿಸಿ ಈಸುವುದು ಕಷ್ಟಕಾರಣವೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಆದರೂ "ಬಂದದ್ದು ಬರಲಿ ಗೋವಿಂದನ ದಯೆಯೊಂದಿರಲಿ" ಎಂಬ ನಮ್ಮ ಕನ್ನಡ ನಾಣ್ನುಡಿ, ಜಾಣ್ನುಡಿಯಂತೆ ಇಷ್ಟರ ವರೆಗೂ ಇದನ್ನು ನಡೆಸಿಕೊಂಡು ಬರಲಾಗಿದೆ ಮತ್ತು ಆ ಪರಮೇಶ್ವರನ ಕೃಪೆಯಿಂದ ಇನ್ನಾದರೂ ಸಾಗಿಸಿಕೊಂಡು ಬರುವುದರಲ್ಲಿ ಏನೂ ಸಂದೇಹವಿಲ್ಲ.

ಇಷ್ಟರವರೆಗೆ ಕೆಲವು ವರುಷ ಮೂರು ತಿಂಗಳೊಂದರಂತೆ ತಪ್ಪದೆ ವರುಷಕ್ಕೆ ನಾಲ್ಕು ಗ್ರಂಥಗಳನ್ನು ಪ್ರಕಟಿಸಲಾಗಿದೆ. ಒಮ್ಮೊಮ್ಮೆ ದೊಡ್ಡ ಗ್ರಂಥಗಳನ್ನು ಮುದ್ರಿಸಿದಾಗ ಮೂರುತಿಂಗಳಿಗೊಂದರಂತೆ ಮುದ್ರಿಸಲು ಅನಾನುಕೂಲವಾಗುತ್ತದೆ. ಅಂಥ ಸಂದರ್ಭಗಳಲ್ಲಿ ಎರಡು ಅಥವಾ ಮೂರು ಪುಷ್ಪಗಳನ್ನು ಒಂದೇ ಗ್ರಂಥವಾಗಿ ಕೊಡಲಾಗುವುದು. ಸಾಧ್ಯವಾದಷ್ಟು ಮಟ್ಟಿಗೆ ಅಧಿಕ ಪುಟಗಳನ್ನು, ಅಂದವಾದ ಮತ್ತು ಉತ್ತಮವಾದ ಪುಸ್ತಕಗಳನ್ನು ನೀಡಲು ಯತ್ನಿಸುತ್ತೇವೆ.

ಗ್ರಂಥಮಾಲೆಗೆ ಸಹಾಯ ಸಲ್ಲಿಸಿದ ಹೊಸಪೇಟೆಯ ಒಕ್ಕಲುತನ ಖಾತೆಯ ಶ್ರೀ ಎಚ್. ನರಸಿಂಹಮೂರ್ತಿ, ಅಳ್ನಾವರದ ಸ್ಟೇಶನ

ಮಾಸ್ತರ್ ಶ್ರೀ ಎಂ. ಎನ್. ಕೆ. ಮೂರ್ತಿ, ರಾವ್ ಸಾಹೇಬ ಪಾಟೀಲ್ ಸಾಹುಕಾರ್ ಶ್ರೀ ಬಿ. ವಿ. ತೇಗೂರ, ಅ. ಸ್ಟೇಶನ್ ಮಾಸ್ತರ್ ಎನ್ ಬಿ. ಬಾಗಲಕೋಟ ಮೊದಲಾದವರಿಗೆ ನಾನು ಕೃತಜ್ಞನಾಗಿದ್ದೇನೆ. ಆಗಾ. ಇನ್ನಿತರ ಅನೇಕ ಮಹನಿಯರೂ, ಮಿತ್ರರೂ ನೆರವಾಗಿದ್ದಾರೆ. ಸ್ಥಳಾಭಾವ ದಿಂದ ಅವರೆಲ್ಲರ ಹೆಸರನ್ನು ಮುದ್ರಿಸಲು ಸಾಧ್ಯವಾಗಿಲ್ಲ. ಅವರೆಲ್ಲರ ಉಪ ಕಾರವನ್ನು ನಾನು ಸ್ಮರಿಸುತ್ತೇನೆ. ಮತ್ತು ದೇವರು ಅವರಿಗೆ ಆಯುರಾ ರೋಗ್ಯ ಯಶ ಸಂಪದಭಿವೃದ್ಧಿಗಳನ್ನು ಕೊಡಲಿಯೆಂದು ಪ್ರಾರ್ಥಿಸುತ್ತೇನೆ.

'ಕೈ ಹಿಡಿದ ಕಾವೇರಿ' ಕಾದಂಬರಿ ಒಂದು ಕಲ್ಪನಾ ಚಿತ್ರ. ನೈಜ ಸನ್ನಿವೇಶಗಳ ವರ್ಣನೆಯ ದೃಷ್ಟಿಯಿಂದ ಊರುಗಳ ಹೆಸರನ್ನು ಸೂಚಿ ಲಾಗಿದೆ. ಇದರ ಪಾತ್ರಗಳೂ ಕವಿಸೃಷ್ಟಿ. ಆದರೆ ಜನಜೀವನದಲ್ಲಿ ಆ ಊರು ಸ್ಥಳಗಳಲ್ಲಿ ಇಂಥ ವ್ಯಕ್ತಿ, ವಾತಾವರಣ, ಘಟನಾ ತರಂಗಗಳು ನಡೆದಿ ರಲು ಸಾಕು. ಹಾಗಿದ್ದರೆ ಅದು ಆಕಸ್ಮಿಕವೆಂದು ಭಾವಿಸಬೇಕಲ್ಲದೆ ಯಾರನ್ನೂ ಉದ್ದೇಶಿಸಿ ಇದನ್ನು ಬರೆದಿಲ್ಲವೆಂದು ಅರಿತುಕೊಳ್ಳಬೇಕಾಗಿ ಪ್ರಾರ್ಥನೆ.

ಕಾದಂಬರಿ ಸ್ವಲ್ಪ ಅವಸರದಿಂದಲೇ ಮುದ್ರಣ ಹೊಂದಿತು. ಅದರಿಂದ ಕೆಲವೆಡೆ ಅಚ್ಚಿನ ದೋಷಗಳೂ, ಪುನರುಕ್ತಿಗಳೂ ಉಳಿದು ಕೊಂಡಿವೆ. ಪ್ರಾಂತೀಯ 'ದೇಸಿ' ಶಬ್ದಾರ್ಥಗಳನ್ನು ಕೊಡಲೂ ಸಾಧ್ಯವಾಗಲಿಲ್ಲ. ಆದ ದೇವರು ನಡೆಸಿವರೆ ಮುಂದಿನ ಮುದ್ರಣದಲ್ಲಿ ಈ ನ್ಯೂನತೆಗಳನ್ನು ಪರಿ ರಿಸಿಕೊಳ್ಳಲಾಗುವುದು. ಈಗ ಸಹೃದಯರು ಕ್ಷಮಿಸಬೇಕು.

ಹುಬ್ಬಳ್ಳಿ
೧೫, ನವೆಂಬರ್ ೫೩

ಎಂ. ಹರಿದಾಸರಾಯ
( ಸಂ. ಮತ್ತು ಪ್ರಕಾಶಕ )

# ಕೈ ಹಿಡಿದ ಕಾವೇರಿ

## ೧ನೇ ಅಧ್ಯಾಯ

ಕಗ್ಗತ್ತಲೆ. ರಸ್ತೆಯ ಬದಿಯಲ್ಲಿ ನೆಟ್ಟ ದೀಪಸ್ತಂಭಗಳಲ್ಲೂ ದೀಪವಿಲ್ಲ. ದೂರದಲ್ಲೊಂದು ದೀವಿಗೆ ಈಗ ಮಾತ್ರ ಮಿನುಗತೊಡಗಿದೆ. ಅದು, ರಸ್ತೆಯ ಮೇಲೆ ಮೆಲ್ಲಗೆ ತೇಲಿ ಬರುವಂತೆ ತೋರಿತು. ಬರಬರುತ್ತಾ ಅದರ ಪ್ರಕಾಶವೂ ಹೆಚ್ಚಾಯಿತು. ಗೆಜ್ಜೆಗಳ ಘಂಟಾನಾದವೂ ಕೇಳಿಸತೊಡಗಿತು ಕಲ್ಲುಗಳ ಮೇಲೆ ಗಾಲಿಗಳು ಉರುಳುತ್ತಾ ಬರುವ ಸಪ್ಪಳ! ಸ್ವಲ್ಪ ಹೊತ್ತಿನ ಮೇಲೆ ಎತ್ತಿನ ಗಾಡಿಯೊಂದು ಓಡುತ್ತ ಓಡುತ್ತ ಬಂದು ರಸ್ತೆಯ ಬದಿಯಲ್ಲಿ ನಿಂತಿತು. ಗಾಡಿ ಹೊಡೆಯುವವನು ಅವುಗಳ ಬೆನ್ನು ಚಪ್ಪರಿಸಿ, ಕತ್ತರಿಯಿಂದ ಇಳಿದು, ಬಗ್ಗಿ, ಗಾಡಿಯ ಮುಂದೆ ಬಂದನು. ಎತ್ತುಗಳು ಮುನ್ನಡೆಯವಂತೆ ನೊಗವನ್ನು ಕೈಯಲ್ಲಿ ತಡೆ ಹಿಡಿದು, "ಅಯ್ಯಾ! ಇಳಿಯಿರಿ! ಇಳಿಯಿರಿ!" ಎಂದು ನುಡಿದನು.

"ರಾಮಾ! ಕುದುರೆ ಸಾರಾಟನಂತೆ ಬಂದೆವಲ್ಲ!" ಎಂದು ಹೇಳುತ್ತ ಗಾಡಿಯೊಳಗಿನಿಂದ ಎಳೆ ವಯಸ್ಸಿನ ಹುಡುಗನೊಬ್ಬ ಇಳಿದ.

"ಕಳೆದ ವರುಷ ಸುಬ್ರಮ್ಮಣ್ಯ ಜಾತ್ರೆಯಲ್ಲಿ ತೆಗೆದುಕೊಂಡ ಎತ್ತುಗಳಪ್ಪಯ್ಯಾ! ನಾಲ್ಕು ಪರು ಹಾಕಿದ ಎಳೆಗರುಗಳು! ಕುದುರೆಗಳಂತೆ ನಡೆಯುದೆ ಅವಕ್ಕೆ ಥಾಡಿ! ಆದರೆ ಯಾವಾಗಲೂ ಹೀಗೆ ಹೊಡೆದರೆ ಯಾಕಾದಾವು!" ಎಂದು ರಾಮಗೌಡ ನುಡಿದು, ನೊಗಕ್ಕೆ ಕಟ್ಟಿದ ಎತ್ತುಗಳ ಕೊರಳಪಟ್ಟಿ ಬಿಚ್ಚಿದ. ಆ ಮೇಲೆ ನೊಗವನ್ನು ಎತ್ತಿ ಹಿಡಿದ. ಎತ್ತುಗಳೆರಡು ಈಚೆ ಆಚೆ ಸರಿದವು. ನೊಗದ ಮೂಗು ನೆಲಕ್ಕೊರಗುವಂತೆ ಮೆಲ್ಲನೆ ಇಟ್ಟು, ಪುನಃ ಎತ್ತುಗಳ ಮೂಗುದಾರಕ್ಕೆ ಬಿಗಿದ ಹಗ್ಗಗಳನ್ನು ಆ ನೊಗಕ್ಕೆ ಕಟ್ಟಿದ. ಗಾಡಿಯ ಮೇಲೆ ಇರಿಸಿದ್ದ ಬೈಹುಲ್ಲಿನ ಸೂಡಿಗಳನ್ನು ಎಳೆದು ತಂದು, ಬಿಚ್ಚಿ, ಅವುಗಳ ಮುಂದೆ ಹರಡಿದ. ಎತ್ತುಗಳು ಬಗ್ಗಿ ನಾಲಿಗೆ ಚಾಚಿ, ಭತ್ತದ ಈ ಒಣ ಹುಲ್ಲನ್ನು ಬಾಯೊಳಗೆ ಎಳೆದು ತುರುಕಿಸಿಕೊಂಡು ಜಗಿಯತೊಡಗಿದುವು.

ರಾಮುಗೌಡ ಪುನಃ ಬಗ್ಗಿ ಗಾಡಿಯ ಕತ್ತರಿಯ ಕೆಳಗೆ ಕಟ್ಟಿದ್ದ ಕಂದೀಲನ್ನು ಬಿಚ್ಚಿ, ಈಚೆ ಬಂದು "ಅಯ್ಯಾ! ಇನ್ನು ಹೋಗೋಣ" ಎಂದ.

ಮುಂದೆ ಹುಡುಗ. ಹಿಂದಿನಿಂದ ಲಾಟಾನು ಹಿಡಿದುಕೊಂಡು ರಾಮುಗೌಡ ಅನುಸರಿಸಿದ. ರಸ್ತೆಯ ಅಂಚಿನಲ್ಲಿ ಸಾಲು ಮರಗಳ ಆಚೆ ಪಾಗಾರ. ಈ ಗೋಡೆ ದಾಟಲು ಒಂದು ಸಣ್ಣ ರೀಪು ಹೊಡೆದ ಬಾಗಿಲು. ಒಳಮಗ್ಗುಲಿನಲ್ಲಿ ಅದರ ಚಿಲುಕ. ಇಬ್ಬರೂ ಅದನ್ನು ಎಳೆದು ಸರಿಸಿ, ಮುಂದೆ ಬಂದರು. ಲಾಟಾನಿನ ಮಂದಪ್ರಕಾಶ ಮನೆಬಾಗಿಲಿನ ಮೇಲೆಯೇ ಬಿತ್ತು. ಆ ಹುಡುಗ "ಡಾಕ್ಟರ್! ಓ ಡಾಕ್ಟರರೇ!" ಎಂದು ಕರೆದ. ಒಳಗಿಂದ ಉತ್ತರ ಬರಲಿಲ್ಲ. ನೆರೆಹೊರೆಯಲ್ಲಿದ್ದ ನಾಯಿಗಳು ಗಟ್ಟಿಯಾಗಿ ಬೊಗಳತೊಡಗಿದುವು. ರಾಮುಗೌಡ ಬಾಗಿಲ ಬಳಿ ಬಂದು ಲಾಟಾನನ್ನು ಎತ್ತಿ ಹಿಡಿದು ನೋಡಿದ. ಸರಪಣಿ ನೇತಾಡುತಿತ್ತು. "ಅಯ್ಯಾ, ಇದು ಮಧ್ಯ ರಾತ್ರಿ; ಗಾಢನಿದ್ದೆಯ ಸಮಯ! ಹೀಗೆ ಕರೆದರೆ ಆಗಲಿಕ್ಕಿಲ್ಲ"ಎಂದು ನುಡಿದು, "ಹೊಜ್ಜಾ! ಹೋಯಿ! ಹೋ! ಓ ಚಾಮಿ! ಯಾರಿದ್ದೀರಿ ಒಳಗೆ?" ಎಂದು ಕೂಗಿದ.

"ಯಾರು? ಯಾರು?" ಎಂದು ಒಳಗಿನಿಂದಲೇ ಯಾರೋ ಕೇಳಿದರು.

"ನಾವು ಚಾಮಿ ನಾವು!"

"ನಾವಂದರೆ ಯಾರು?" ಎಂದು ಕೇಳುತ್ತ ಬಾಗಿಲು ತೆರೆದು ಯಾರೋ ನೋಡಿದರು. ಲಾಟಾನಿನ ಬೆಳಕು ಸ್ವಲ್ಪ ಆ ಮೋರೆಗೆ ಚೆಲ್ಲಿತು. ಕರೆಯಲು ಬಂದ ಹುಡುಗನು ತಕ್ಷಣ ಗುರುತು ಹಿಡಿದು "ನಾನು ಕಂಪೌಂಡರರೇ! ಬಂಗಾಡಿ ಗೋಪಾಲರಾಯರ ಮಗ—ಅರವಿಂದ!" ಎಂದ.

ಕಂಪೌಂಡರ್ "ಬನ್ನಿ ಒಳಗೆ ಬನ್ನಿ" ಎಂದು ಕರೆದ. ಅರವಿಂದ ಲಾಟಾನನ್ನು ತಾನು ತೆಗೆದುಕೊಂಡು ಹೊಸ್ತಿಲು ದಾಟಿದ. ಅಲ್ಲೇ ಪಕ್ಕದಲ್ಲಿದ್ದ ಮೇಜಿನ ಮೇಲೆ ಅದನ್ನಿಟ್ಟು "ಡಾಕ್ಟರರಿಲ್ಲ?" ಎಂದು ಪ್ರಶ್ನಿಸಿದ.

"ಇಲ್ಲ. ಗೆಳೆಯರು ಬಂದು ಇಸ್ಪೀಟು ಆಟಕ್ಕೆ ಎಳೆದುಕೊಂಡು ಹೋದರು. ಇಷ್ಟರೊಳಗೆ ಬರಬೇಕಾಗಿತ್ತು. ಯಾಕೋ ಇನ್ನೂ ಬಂದಿಲ್ಲ."

"ಬರಲಿಕ್ಕಿಲ್ಲ?"

"ಹೇಗೆ ಹೇಳಲಿ ಹೇಳಿ! ಒಮ್ಮೊಮ್ಮೆ ಆಟದಲ್ಲಿ ಬೆಳಗಾಗುವುದೂ ಉಂಟು. ಇಲ್ಲದಿದ್ದರೆ ಅಲ್ಲೇ ಮಲಗಿಕೊಂಡರೂ ಮಲಗಿಕೊಂಡರೇ."

ಅರವಿಂದ ಯೋಚಿಸಿ "ಕಂಪೌಂಡರರೇ, ದಯಮಾಡಿ ಡಾಕ್ಟರರನ್ನು ಕರೆದುಕೊಂಡು ಬನ್ನಿ. ಬಹಳ ಉಪಕಾರ ಮಾಡಿದಂತಾಗುತ್ತದೆ."

"ಅವರು ಯಾರ ಮನೆಯಲ್ಲಿದ್ದಾರೆಂತ ಹುಡುಕಲಿ ಹೇಳಿ. ಅದೂ ಮಧ್ಯರಾತ್ರಿ ಸಮಯ. ನನಗೂ ತಲೆ ತೂಕಡಿಸುತ್ತಿದೆ!''

ಅರವಿಂದ ದೀನ ದನಿಯಿಂದ "ಕಂಪೌಂಡರರೇ, ನಿಮ್ಮೊಂದಿಗೆ ಬೇಕಾದರೆ ನಾನೂ ಬರುತ್ತೇನೆ. ಅವರೆಲ್ಲಿದ್ದಾರೆಂದು ನೋಡೋಣ. ನೀವು ಮನೆ ಹೆಸರು ಹೇಳಿದರೆ ನಾನೇ ಹೋಗಿ ಕರೆಯುತ್ತೇನೆ. ಹೇಗಾದರೂ ಮಾಡಿ. ಮನೆಯಲ್ಲಿ ನನ್ನಕ್ಕನಿಗೆ ಕಸ್ತಿ ಕಾಯಿಲೆ. ರಾತ್ರಿ ಬೆಳಗಾಗುತ್ತದೋ ಇಲ್ಲವೋ....'' ಎಂದು ಗದ್ಗದಿತನಾದ. ಅವನ ಕಣ್ಣುಗಳೂ ಒದ್ದೆಯಾದುವು. ಕಂಪೌಂಡರನ ಮನಸ್ಸು ತಳಮಳಿಸಿತು.

"ಆಗಲಿ, ನೋಡಿ ಬರುತ್ತೇನೆ. ಹೇಗೂ ಎಬ್ಬಿಸಿ ನಿದ್ದೆಗೆಡಿಸಿದಿರಿ. ಇಲ್ಲಿ ಉಳಿದರೂ ಇನ್ನು ನಿದ್ದೆ ಬರುವಂತಿಲ್ಲ" ಎಂದು ಗೊಣಗಿದ. ಮೇಜಿನ ಡ್ರಾವರ್ ಎಳೆದು, ಕೈಹಾಕಿ, ಬ್ಯಾಟರಿ ಹೊರತೆಗೆದು ಅದರಲ್ಲಿ ಬೆಳಕಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ಅಟ್ಟದ ಮೇಲೆ ಹಿಡಿದು ನೋಡಿದ. ಒಂದೆರಡು ಮಂಗಳೂರು ಹಂಚುಗಳೂ ರೀಪುಗಳೂ ಕಾಣಿಸಿದುವು. ಆ ಮೇಲೆ ಅಲ್ಲೇ ಕಟಾಂಜನಕ್ಕೆ ಒರಗಿಸಿದ್ದ ಸೈಕಲ್ಲನ್ನು ಹೊರಗಿಟ್ಟು, "ನೀವು ಇಲ್ಲೇ ಇರಿ. ನಾನು ನೋಡಿ ಬರುತ್ತೇನೆ" ಎಂದು ನುಡಿದು ಹೊರಟು ಹೋದ.

ಅರವಿಂದ ಅಲ್ಲೇ ಇದ್ದ ಒಂದು ಕುರ್ಚಿಯನ್ನು ಎಳೆದು ಕುಳಿತು "ರಾಮಾ! ಹೊರಗೆ ನಿಂತಿಯೇನು! ಒಳಗೆ ಬಾ!'' ಎಂದು ಕರೆದ. ರಾಮುಗೌಡ ಬಂದು ಗೋಡೆಗೊರಗಿ ಕುಳಿತುಕೊಂಡ. ಮೇಜಿನ ಮೇಲಿನ ದೀಪದ ಕಿರಣಗಳು ಅವನ ಮೈ ಮೋರೆಯನ್ನು ಬೆಳಗಿಸಿದುವು. ಅವನು ಸ್ವಲ್ಪ ಎಣ್ಣೆಗಪ್ಪಿನ ಜೀವ. ತಲೆಯ ಮೇಲೆ ಒಂದು ಪಂಚೆಯನ್ನು ಸುತ್ತಿಕೊಂಡಿದ್ದ. ಕಿವಿಯಲ್ಲಿ ಒಂಟೆಗಳು ಮಿನುಗುತ್ತಿದ್ದುವು. ಮೈ ಮೇಲೆ ಒಂದು ಕೆಂಬಣ್ಣದ ಜಿಬ್ಬ. ಅವನು ಉಟ್ಟ ಬಟ್ಟೆ ಕಾಣದಿದ್ದರೂ ಅದೊಂದು ಬ್ಯಾರಿಗಳ ಅಡ್ಡ ಮುಂಡು. ಅದರ ಹಿಂಬದಿಯಲ್ಲಿ ಬಣ್ಣ. ಉಳಿದ ಕಡೆಗಳಲ್ಲಿ ಚಚ್ಚೌಕ ನೀಲ ಗೀಟುಗಳು. ರಾಮುಗೌಡ ತಲೆಯ ಮೇಲಿನ ಪಂಚೆಬಿಚ್ಚಿ ತೊಡೆಯ ಮೇಲೆ ಹಾಕಿಕೊಂಡು, ಅದರೊಳಗಿರಿಸಿದ ಬೀಡಿ ಕಟ್ಟನ್ನು

ತೆಗೆದ. ಅದು ಅರವಿಂದನ ದೃಷ್ಟಿಗೂ ಬಿತ್ತು. ಅವನು ಎದ್ದು ಅವನ ಬಳಿ ಬಂದು "ನನಗೂ ಒಂದು ಕೊಡು"ಎಂದು ಹೇಳಿ ಕೈ ಚಾಚಿದ.

"ಅಯ್ಯೋ ! ನೀವು ಬೀಡಿ ಎಳೆಯುತ್ತೀರೇನು? ನನಗೆ ಗೊತ್ತೇ ಇರಲಿಲ್ಲ!"

"ಅಭ್ಯಾಸವಿಲ್ಲ ರಾಮಾ ! ಬೇಸರವಾದಾಗ ಅಪರೂಪಕ್ಕೊಮ್ಮೆ ಎಳೆಯುತ್ತೇನೆ"

ಆದರೆ ಬೀಡಿ ಎಳೆಯಲು ರಾಮುಗೌಡನ ಹತ್ತಿರ ಬೆಂಕಿಪೆಟ್ಟಿಗೆಯೂ ಇರಲಿಲ್ಲ. ಅಂಗಿ ಕಿಸೆಗೆ ಕೈ ತುರುಕಿಸಿದ. ಸೊಂಟಕ್ಕೆ ಕೈ ಹಾಕಿದ. ಎದ್ದು ತಲೆಗೆ ಸುತ್ತಿದ ಪಂಚೆಯನ್ನು ಕೊಡಹಿದ. ನೆಲಕ್ಕೆ ಬಿದ್ದ ಸದ್ದೇನೂ ಆಗ ಲಿಲ್ಲ. "ರಸ್ತೆಯಲ್ಲಿ ಎಲ್ಲೋ ಬಿದ್ದು ಹೋಯ್ತಯ್ಯಾ" ಎಂದು ಹೇಳಿ ಅವನು ಮೋರೆ ಸಣ್ಣಗೆ ಮಾಡಿಕೊಂಡ.

"ಲಾಟಾನು ಇದೆಯಲ್ಲ'' ಎಂದು ಹೇಳಿ ಅರವಿಂದ ಅವನ್ನು ಎಡಗೈ ಯಲ್ಲಿ ಎತ್ತಿಕೊಂಡು, ಬಲಗೈಯಲ್ಲಿ ಬುರುಡೆ ಏರಿಸಿದ. ಬೀಡಿಯ ಒಂದು ತುದಿಯನ್ನು ಉರಿಗಿಟ್ಟು, ಇನ್ನೊಂದು ತುದಿಯಿಂದ ಚೀಪಿದ. ಒಳಗೆ ಎಳೆದು ಕೊಂಡ ಉಸಿರನ್ನು ಹೊರಗೆ ಬಿಟ್ಟಾಗ ಫಕ್ಕನೇ ದೀಪ ನೊಂದಿಹೋಯಿತು. "ಹಾ! ಹಾ!'' ಎಂದು ಏಕಕಾಲದಲ್ಲಿ ಇಬ್ಬರ ಬಾಯಿಗಳಿಂದಲೂ ಹಾಹಾ ಕಾರ ಹೊರಬಿತ್ತು. ಅರವಿಂದ ಮೇಜಿನ ಮೇಲೆ ಲಾಟಾನನ್ನು ಕುಕ್ಕಿಟ್ಟ. ಬೀಡಿಯ ಕುಡಿಗೆ ಮಾತ್ರ ಬೆಂಕಿ ಹಿಡಿದಿತ್ತು. ಅದರಿಂದಲೇ ರಾಮುಗೌಡನೂ ಹೊತ್ತಿಸಿಕೊಂಡ. ಇಬ್ಬರೂ ಕತ್ತಲೆಯಲ್ಲೇ ಕುಳಿತು ಬೀಡಿ ಸೇದತೊಡಗಿ ದರು ಬಂದಾಗ ಡಾಕ್ಟರನಿಲ್ಲ, ದೀಪವೂ ಆರಿಹೊಯ್ತು ! ಇದನ್ನು ಕಂಡು ಏನೋ ಅಪಶಕುನಗಳಾದ ಹಾಗೆ ಅರವಿಂದನಿಗೆ ಭಾಸವಾಯಿತು. ಮತ್ತು ಅದೇ ಕಾಲಕ್ಕೆ ರಾಮುಗೌಡನೂ ಅದೇ ರೀತಿ ಚಿಂತಿಸಿದ. ಇಬ್ಬರ ಮನಸ್ಸು ಮನೆಯ ಕಡೆಗೇ ಓಡಿತು. ಏನಾಯಿತೋ ಏನೋ ಎಂದು ಇಬ್ಬರೂ ತಲ್ಲಣ ಗೊಂಡರು. ಮುಸುಕಿದ ಆ ಕತ್ತಲೆ ಅವರ ಭೀತಿಯನ್ನು ಇನ್ನಷ್ಟು ಹೆಚ್ಚಿಸು ತ್ತಿತ್ತು. ಮನೆಯ ಪಕ್ಕದ ಮರಗಳಲ್ಲಿ ಗಬ್ಬಲಗಳು ಚೀರಾಡುತಿದ್ದುವು. ಇಲ್ಲಿ ಅಲ್ಲಿ ನಾಯಿಗಳು ಕಚ್ಚಾಡುತ್ತಿದ್ದುವು. ಮೋಟಾರ ಲಾರಿಯೊಂದು ಬುಸು ಗುಟ್ಟುತ್ತಾ ದಕ್ಷಿಣಕ್ಕೆ ಹೋಯಿತು. ದುಃಖದ ಅಲಗುಗಳು ಆ ಎರಡು ಹೃದ

ಯಗಳನ್ನು ನಟ್ಟುವು. ಹೀಗಾಗಿ ಸ್ವಲ್ಪಹೊತ್ತಿನ ವರೆಗೆ ಯಾರ ನಾಲಿಗೆಯೂ ಅಲುಗಾಡಲಿಲ್ಲ. ಬೇಸರದ ಭಾರವನ್ನು ಸಹಿಸಲಾರದೆ ಅರವಿಂದ ಕೇಳಿದ: "ರಾಮಾ! ಗಾಡಿ ಈಗಲೇ ಕಟ್ಟೋಣವೇ? ಅಥವಾ ಬೆಳಗಾದ ಮೇಲೆಯೇ?"

"ಡಾಕ್ಟರರು ಬಂದರೆ ಈಗಲೇ ಹೊಡಿಯೋಣ, ಅಯ್ಯಾ!"

"ಎತ್ತುಗಳಿಗೆ ಆಯಾಸವಾದೀತಲ್ಲ!"

"ಆಗುತ್ತದೆ. ಆದರೆ ಇಂಥ ಪ್ರಸಂಗಗಳಲ್ಲಿ ಅದನ್ನೆಲ್ಲ ಅಷ್ಟು ನೋಡಲಿಕ್ಕಾಗುತ್ತದೇನಯ್ಯಾ! ಹೋಗುವಾಗ ಇಳಿಜಾರು ರಸ್ತೆ. ಅಷ್ಟು ಆಯಾಸವಾಗುವುದಿಲ್ಲ. ಅಲ್ಲದೆ ಹೋಗುವಾಗ ಅವು ಮನೆ ನೆನಸಿಕೊಂಡು ಬೇಗ ಬೇಗ ಹೆಜ್ಜೆ ಇಡುತ್ತವೆ."

"ಈ ಮೂಕ ಪ್ರಾಣಿಗಳಿಗೆ ಅಷ್ಟು ಗೊತ್ತಾಗುತ್ತದಲ್ಲ!"

"ಮೂಕ ಪ್ರಾಣಿ! ಒಳ್ಳೇ ಹೇಳಿದಿರಿ. ಅದಕ್ಕೆ ಎಲ್ಲ ಗೊತ್ತಾಗುತ್ತದೆ. ನಿಜವಾಗಿ ನೋಡಿದರೆ ಅದರ ಪಶು ಭಾಷೆಯೇ ನಮಗೆ ಅರ್ಥವಾಗುವುದಿಲ್ಲ. ನಮ್ಮ ಹಾಗೆ ಅದಕ್ಕೆ ಮಾತನಾಡಲು ದೇವ್ರು ಬಿಟ್ಟಿಲ್ಲ. ನಿಜ. ಆದರೆ ಅಷ್ಟರಿಂದಲೇ ಅದು ಮೂಕ ಪ್ರಾಣಿಯಲ್ಲ. ನಾವು ಹೆಸರು ಹಿಡಿದು ಕರೆದಾಗ ಜನರು ಓಡಿ ಬರುವಂತೆ ಅದೂ ಬರುತ್ತದೆ. ಹುರುಳಿ, ಹಿಂಡಿ, ಹುಲ್ಲು ಹಾಕುವ ಹೊತ್ತಿಗೆ ಹಾಕದಿದ್ದರೆ ಕೂಗಿ ಕರೆಯುತ್ತವೆ. ಕೊಂಬುಗಳನ್ನು ಪಟಪಟ ಹೊಡೆದು ನಮ್ಮ ಲಕ್ಷ ಸೆಳೆಯುತ್ತವೆ. ಮನೆಯವರು ಯಾರು, ಹೊರಗಿನವರು ಯಾರು ಎಂದು ಕಂಡು ಹಿಡಿವ ಸೂಕ್ಷ್ಮ ಬುದ್ಧಿಯೂ ಅದಕ್ಕುಂಟು ಕಳೆದ ಸಲ ನಾನೂ ಗುಲಾಂಬ್ಯಾರಿಯೂ ಕೂಡಿ ಬಂಟ್ವಾಳಕ್ಕೆ ಭತ್ತ ಸಾಗಿಸುತ್ತಿದ್ದೆವಯ್ಯಾ! ಬರುವಾಗ ನಮ್ಮ ಬ್ಯಾರಿ, ನೋಡಬೇಕೆಂದು ಬಯಸಿ, ನನ್ನ ಗಾಡಿ ಏರಿ, ಹೊಡೆಯಲುತೊಡಗಿದ. ಆದರೆ ಏನೇನು ಮಾಡಿದರೂ ಅವು ಕೇಳಲಿಲ್ಲ ಬ್ಯಾರಿಯ ಮೋರೆ ಸಣ್ಣದಾಯ್ತು. ನಾನು ಹೋದೆ. ತಕ್ಷಣ ನಾಯಿಮರಿಗಳ ಹಾಗೆ ನನ್ನ ಹಿಂದೆ ಬಂದುವು. ಏಷ್ಟಾದರೂ ಗೋವಿನ ಸಂತಾನವಲ್ಲವಯ್ಯಾ! ನಂದಿ!" ಎಂದು ರಾಮುಗೌಡ ಕೈಮುಗಿದ. ಅದು ಅರವಿಂದನಿಗೆ ತೋರಲಿಲ್ಲ. ಆದರೆ ಗೌಡ ವರ್ಣಿಸಿದ ನಂದೀ ಪುರಾಣ ಕೇಳಿ ಅವನ ಮನಸ್ಸು ಸ್ವಲ್ಪ ಹಗುರವಾಯಿತು. ಅಷ್ಟರಲ್ಲಿ ಹೊರಗೆ ಕಂಪೌಂಡ

ರನ ದನಿಯೂ ಕೇಳಿಸಿದುದರಿಂದ ಹೋದಜೀವ ಮರಳಿ ಬಂದಂತಾಯಿತು.

"ಹಾಂ! ಕತ್ತಲೆಯಲ್ಲೇ ಕುಳಿತುಬಿಟ್ಟಿರಾ? ದೀಪವೇನಾಯ್ತು?" ಎಂದು ಕೇಳುತ್ತ ಕಂಪೌಂಡರ್ ಬಂದ.

"ಗಾಳಿಗೆ ಆರಿಹೋಯ್ತು!'' ಎಂದು ಅರವಿಂದ ನುಡಿದು "ಡಾಕ್ಟರ್ ಬಂದರೇನು?" ಎಂದು ಕೇಳಿದ.

"ಬಂದಿದ್ದೇನ್ರಿ! ಬಂದಿದ್ದೇನೆ!'' ಎಂದು ಡಾಕ್ಟರ್ ನುಡಿದು, "ನಿಮಗೆಲ್ಲ ಹಗಲಿಗೆ ಬರಲೇನಾಗುತ್ತದೆ? ಮಧ್ಯರಾತ್ರಿ ಬಂದು ನನ್ನನ್ನು ಏಕೆ ಪೀಡಿಸುತ್ತೀರಿ?" ಎಂದೂ ಗೊಣಗುಟ್ಟಿದ.

ಅರವಿಂದನೆದೆಗೆ ಮುಳ್ಳಿರಿದಂತಾಯಿತು. ಅವನು ಉತ್ತರಕೊಡಲಿಲ್ಲ.

ಕಂಪೌಂಡರ್ ದೀಪ ಹಚ್ಚಿದ ಬಳಿಕ ಡಾಕ್ಟರ್ ಕುಳಿತು "ಏನು? ಯಾರಿಗೆ ಕಾಯಿಲೆ?'' ಎಂದು ಕೇಳಿದ. ಅರವಿಂದ ವಿವರಿಸಿದ ಮೇಲೆ "ಬಾಟ್ಲಿ ತಂದಿದ್ದೀರಾ?" ಎಂಬ ಪ್ರಶ್ನೆ ಬಂತು. "ತಂದಿದ್ದೇನೆ. ಆದರೆ ನಿಮ್ಮನ್ನು ಕರೆದುಕೊಂಡು ಬರಲು ತಂದೆಯವರು ಹೇಳಿದ್ದಾರೆ" ಎಂದು ಉತ್ತರವಿತ್ತ.

"ತಂದೆಯವರು ಬೇಕಾದ್ದು ಹೇಳುತ್ತಾರೆ! ಈ ಘೋರರಾತ್ರಿ ಯಾರು ಬರಬೇಕು? ಅದೂ ಇಲ್ಲೇ ಇದೆಯೇ? ಒಂದು ಮೈಲೇ? ಎರಡು ಮೈಲೇ? ಹಾಗಿದ್ದರೆ ಫಕ್ಕನೇ ಸೈಕಲ್ಲಿನಲ್ಲಾದರೂ ಹೋಗಿ ಬರಬಹುದಿತ್ತು. ಬಂಗಾಡಿ ಅಂದರೆ ಬಂಗಾಲ. ಹನ್ನೆರಡು ಮೈಲು! ಹೋಗಲು ಹನ್ನೆರಡು! ಬರಲು ಹನ್ನೆರಡು! ಮೋಟಾರಾದರೂ ಇದೆಯಾ?'' ಎಂದು ಡಾಕ್ಟರ್ ಎರಡೂ ಕೈಗಳನ್ನು ನೀಡಿ ಅಣಕಿಸಿದ.

"ಮೋಟಾರಲ್ಲ ನಿನಗೆ! ವಿಮಾನ'' ಎಂದು ಅರವಿಂದ ಅಂತರಂಗದೊಳಗೇ ಪ್ರತ್ಯುತ್ತರವಿತ್ತು, ಬಹಿರಂಗವಾಗಿ "ಗಾಡಿ ತಂದಿದ್ದೇವೆ'' ಎಂದ.

"ಗಾಡಿ! ಲಗಾಡಿ'' ಎಂದು ಡಾಕ್ಟರನ ಭಾಷ್ಯವೂ ಆಯಿತು.

ರಾಮುಗೌಡ ಅದನ್ನು ಕೇಳಿ ಅಲ್ಲಿಂದೆದ್ದು ಹೊರಗೆ ಹೋದ. ಡಾಕ್ಟರನಾಡಿದ ಮಾತುಕೇಳಿ ಅವನಿಗೆ ಸಿಟ್ಟು ಬಂದಿತು. ಇನ್ನಿತರ ಸಂದರ್ಭಗಳಲ್ಲಾಗುತಿದ್ದರೆ ಅವನು ಸರಿಯಾದ ಉತ್ತರವನ್ನು ಕೊಡುತಿದ್ದನೋ ಏನೊ! ಆದರೆ ಇದು ಅದಕ್ಕೆ ತಕ್ಕ ವೇಳೆಯಲ್ಲವೆಂದರಿತು ಹೊರಗೆ ಬಂದ. ಅರ

ವಿಂದ ಡಾಕ್ಟರನನ್ನು ದಿಟ್ಟಿಸಿ "ಕರೆದುಕೊಂಡು ಬರಬೇಕೆಂದು ಅಪ್ಪಯ್ಯ ಸಾರಿ ಸಾರಿ ಹೇಳಿದ್ದಾರೆ. ಎಷ್ಟು ಚಾರ್ಜು ಮಾಡಿದರೂ ಕೊಡುತ್ತೇವೆಂದು ಹೇಳಿರುವರು. ದೇವರು ನಿಮಗೆ ಕಲ್ಯಾಣ ಮಾಡುತಾನೆ'' ಎಂದು ಹೇಳಿದ.

ಡಾಕ್ಟರ್ ಅರವಿಂದನ ಕಡೆ ತೋರು ಬೆರಳುತೋರಿ ನುಡಿದ: "ಇಪ್ಪತ್ತೈದು ರೂಪಾಯಿ 'ವಿಜಿಟ್' ಫೀ ಕೊಡಬೇಕು. ಔಷಧ, ಇಂಜೆಕ್ಷನ್‌ಗಳ ಚಾರ್ಜು ಬೇರೆ".

"ಆಗಲಿ! ಆಗಲಿ!" ಎಂದು ಅರವಿಂದ ತಲೆ ಅಲ್ಲಾಡಿಸಿದ.

ಡಾಕ್ಟರನೆದ್ದು ಒಳಗೆ ಹೋಗಿ ಸಾಹೇಬರಂತೆ ಕೋಟು, ಉದ್ದನ ಪ್ಯಾಂಟು, ಕಾಲು ಚೀಲ, ಬೂಟುಗಳನ್ನು ಧರಿಸಿ ಸಿದ್ಧನಾದ. ಮೇಜಿನ ಹಿಂಬದಿ ಔಷಧದ ಕಪಾಟುಗಳಿದ್ದುವು. ಅವುಗಳ ಬೀಗ ತೆಗೆದು ಕೆಲವು ಔಷಧಗಳನ್ನು ಕೈ ಪೆಟ್ಟಿಗೆಯೊಳಗೆ ತುರುಕಿಸಿ "ಇದನ್ನು ಹಿಡಿದುಕೊಳ್ಳಿ''ಎಂದ. ಅರವಿಂದ ಅದನ್ನು ಹೊರಗೆ ತಂದಾಗ ಅಲ್ಲೇ ನಿಂತಿದ್ದ ರಾಮುಗೌಡ ಅದನ್ನು ಹಿಡಿದು ಹೊರಟ. ''ನಾರಾಯಣ! ನಾನು ಬೇಗನೇ ಬರುತ್ತೇನೆ'' ಎಂದು ಡಾಕ್ಟರ್ ಕಂಪೌಂಡರನಿಗೆ ಹೇಳಿ ಗೇಟು ದಾಟಿದ.

ಮಲೆನಾಡಿನ ಗಾಡಿ ಬಹಳ ಗಟ್ಟಿಮುಟ್ಟು. ಬೋಳುಗಾಡಿಗಳೇ ಕಡಿಮೆ. ಕಮಾನುಗಳೇ ಹೆಚ್ಚು. ಹಿಂಬದಿ ಬಾಗಿಲು. ತಳಕ್ಕೆ ದಪ್ಪ ಸಾಗುವಾನಿ. ಮತ್ತಿ, ಬೀಟೆ ಮೊದಲಾದ ಗಟ್ಟಿ, ಬಾಳಿಕೆಯ ರೀಪುಗಳನ್ನು ಹೊಡೆದಿರುತ್ತಾರೆ. ಅಕ್ಕ ಪಕ್ಕದ ಬದಿಗಳಲ್ಲಿ ಅಂತಹ ಮರದ ಗೂಟಗಳನ್ನು ಬಡಿದು ನಿಲ್ಲಿಸಿ, ಬೆತ್ತದ ಸರಳುಗಳನ್ನು ಹುರಿಹಗ್ಗದಿಂದ ಅಡ್ಡ ಕಟ್ಟುವರು. ಇದರ ಮೇಲೆ ಬೆತ್ತದ ಕಮಾನು. ಈ ಅಸ್ಥಿಪಂಜರಕ್ಕೆ ಹೆಣೆದ ಚಾಪೆಯ ಹೊದಿಕೆ. ಚಾಪೆಯಲ್ಲಿ ಎಳ್ಳು ಸುರಿಯುವಷ್ಟು ರಂಧ್ರಗಳಿರುವುದಿಲ್ಲ. ಅದಕ್ಕೆ ಡಾಂಬರ್ ಬಳಿಯುವವರೂ ಇದ್ದಾರೆ. ಮಳೆ ಬಂದರೆ ಗಾಡಿಯೊಳಗೆ ನೀರಿನ ಸೆಳಕುಗಳು ಬೀಳದಂತೆ ಈ ರೀತಿ ಮಾಡುವರು. ಹಾಗೆಂದು ಮಳೆಗಾಲದಲ್ಲಿ ಈ ಗಾಡಿಗಳನ್ನು ಹೊಡೆಯುವವರೇ ಇಲ್ಲ. ರಸ್ತೆಗಳು ಅದಕ್ಕೆ ಅನುಕೂಲವಿಲ್ಲ. ಅಲ್ಲಲ್ಲಿ ಸಣ್ಣ ನದಿಗಳೂ ಅವುಗಳ ಕೈಗಳೂ ತುಂಬಿಹರಿಯುತ್ತಿರುತ್ತವೆ. ಅವುಗಳನ್ನು ದಾಟಲಾಗುವುದಿಲ್ಲ. ಮಲೆನಾಡಿನಲ್ಲಿ

ಸುರಿವ ಜಿರಾಪರ್ತಿ ಮಳೆಯಲ್ಲಿ ಎತ್ತುಗಳೂ ಬಹಳಕಾಲ ಬಾಳಿ ಬದುಕಲಾರವು. ಆ ಜಡಿಮಳೆಯ ವೇಳೆ ವ್ಯಾಪಾರ-ವ್ಯವಹಾರವೂ ಅತ್ಯಲ್ಪ. ಜನರೂ ಗದ್ದೆಯ ಬೇಸಾಯದ ಉದ್ಯೋಗಗಳಲ್ಲಿ ನಿರತರಾಗುವರು. ಆದುದರಿಂದ ಬೇಸಿಗೆ ಕಾಲದಲ್ಲೇ ಈ ಗಾಡಿಗಳ ಸಂಚಾರ. ಅವು ಸವಾರಿ ಗಾಡಿಗಳೂ ಅಲ್ಲ. ಸರಕಿನ ಗಾಡಿಗಳು. ಅನಾದಿಕಾಲದಿಂದ ರೈತರೂ ಜಮೀನುದಾರರೂ ನಡೆಸುತ್ತಿರುವ ದೇಶೀ ಲಾರಿ. ಮಲೆನಾಡಿನ ಹಳ್ಳಿಗಳಿಂದ ಭತ್ತ, ಅಕ್ಕಿ, ಅಡಿಕೆ, ತೆಂಗು, ಎಳ್ಳು ಮೊದಲಾದ ದವಸ-ಧಾನ್ಯಗಳನ್ನೂ ಒಳ್ಳೇ ಮೆಣಸು, ಏಲಕ್ಕಿ, ಸೀಗೇಕಾಯಿ ಇತ್ಯಾದಿ ಕಾಡುತ್ಪತ್ತಿಗಳನ್ನೂ ಬೆಳ್ತಂಗಡಿ, ಬಂಟ್ವಾಳ, ಪುತ್ತೂರು, ಮಂಗಳೂರು ಪೇಟೆ ಪಟ್ಟಣಗಳಿಗೆ ಸಾಗಿಸುತ್ತವೆ ಬರುವಾಗ ಅಲ್ಲಿಂದ ಎಣ್ಣೆ, ಚಿಮುಣಿ ಎಣ್ಣೆ, ಸಾಬೂನು, ನೀರುಳ್ಳಿ, ಬೆಳ್ಳುಳ್ಳಿ, ಸೀರೆ, ಧೋತರ ಇತ್ಯಾದಿ ಸಾಮಾನುಗಳನ್ನೂ ಉಪ್ಪು, ಮೆಣಸು. ಬೆಲ್ಲ, ಕೋತಂಬರಿ, ಸಾಸಿವೆ, ಮೆಂತೆ ಮೊದಲಾದ ಸಾಂಬಾರ ಜಿನಸುಗಳನ್ನೂ ತರುತ್ತವೆ. ಎರಡು, ಮೂರು, ಆರುಗಾಡಿಗಳು ಒಟ್ಟೊಟ್ಟಿಗೆ ಪ್ರಯಾಣ ಮಾಡುವುದು ರೂಢಿ. ರಾತ್ರಿಕಾಲದಲ್ಲಿ ಅವುಗಳ ಪ್ರಯಾಣ. ಹತ್ತಿಪ್ಪತ್ತು ಮೈಲುಗಳಿಗೊಂದು ಪಯಣ. ಹಗಲಿಗೆ ರಸ್ತೆಯ ಬದಿಯಲ್ಲಿ ಮರಗಿಡಗಳ ನೆರಳಿನಲ್ಲಿ ಆಶ್ರಯ. ಅಲ್ಲೇ ಮೂರು ಕಲ್ಲು ಊರಿ ಗಂಜಿ ಬೇಯಿಸಿ, ಚಟ್ನಿ ಅರೆದು, ಗಾಡಿಯವರು ಹೊಟ್ಟೆ ತುಂಬಿಸಿಕೊಳ್ಳುವರು ಡಬ್ಬಿಯಲ್ಲಿ ಹುರುಳಿ ಬೇಯಿಸಿ ಎತ್ತುಗಳಿಗೆ ತಿನ್ನಿಸುವರು. ಒಣ ಹುಲ್ಲನ್ನು ಅವುಗಳ ಮುಂದೆ ಹಾಕಿ, ತಾವು ಗಾಡಿಯ ಕೆಳಗೆ ಮಲಗಿ ಗೊರಕೆ ಹೊಡೆಯುವರು. ಅವರಲ್ಲಿ ಅನೇಕರು ಜಮೀನುದಾರರ ಗಾಡಿಯನ್ನು ನಡೆಸುವ ಅವರ ಒಕ್ಕಲು ಆಳುಗಳು. ಕೆಲವರದು ಬಿಟ್ಟಿ-ಬೇಗಾರಿ ಕೆಲಸ. ಊಟಕ್ಕೆ ಗಾಡಿ ಹೊರಡುವಾಗಲೇ ಉಪ್ಪು, ಹುಳಿ, ಒಣ ಮೆಣಸಿನಕಾಯಿ, ಅಕ್ಕಿ, ತೆಂಗು ಕೊಟ್ಟು, ಮತ್ತೆ ಮೇಲೆ ಬೀಡಿ, ಕಾಫಿಗಳಿಗೆಂದು ಚಿಲ್ಲರೆ ದಿನಮಜೂರಿ ಕೊಡುವವರುಂಟು. ಅಂತಹ ಒಕ್ಕಲುಮಗ ಸಿಗದೇ ಇದ್ದಾಗ, ಸಂಬಳಕ್ಕೊಬ್ಬ ಗೌಡನನ್ನೋ ಬ್ಯಾರಿಯನ್ನೋ ನೇಮಿಸಿಕೊಳ್ಳುವರು. ಆದರೆ ತಮ್ಮ ಸ್ವಂತ ಗಾಡಿಯನ್ನು ನಡೆಸುವ ಗೌಡರೂ ಬ್ಯಾರಿಗಳೂ ಅನೇಕರಿದ್ದಾರೆ. ದಿನಕ್ಕೆ, ಒಂದು ಪಯಣಕ್ಕೆ, ಒಮ್ಮೆ ಬೆಳ್ತಂಗಡಿ ಅಥವಾ ಬಂಟ್ವಾ

ಳಕ್ಕೆ ಅಕ್ಕಿ ಸಾಗಿಸಲು ಇಂತಿಷ್ಟು ಎಂಪು ಮೊದಲೇ ಕೇಕ ಮಾಡಿರುವರು.

ರಾಮುಗೌಡನದು ಅಂತಹ ಗಾಡಿ. ಆದರೆ ಈ ಸಲ ಸವಾರಿಗೆ ಅವನು ಅಣಿಗೊಳಿಸಿದ್ದ. ಗಾಡಿಯೊಳಗೆ ಒಣ ಹುಲ್ಲನ್ನು ಹರಡಿ, ಅದರ ಮೇಲೆ ಅರವಿಂದ ಕೊಟ್ಟಿದ್ದ ಸುಂದರ ಜಮುಖಾನೆ ಹಾಸಿದ್ದ. ಹೀಗಾಗಿ ಸಾಹೇಬರ ದುಸ್ತುಧರಿಸಿದ್ದ ಡಾಕ್ಟರನಿಗೂ ಅದು "ಹಂಸತೂಲಿಕಾತಲ್ಪ" ಎಂದನ್ನಿಸಿತು. ಆದರೆ ಗಾಡಿ ಹೊರಟ ಮೇಲೆ ಆ ಭಾವನೆ ಉಳಿಯಲಿಲ್ಲ. ಗಾಡಿ ಚಲಿಸಿದಾಗ ಗಡಗಡ ನಡುಗುತ್ತಿತ್ತು. ಒಳಗೆ ಕುಳಿತವರ ಸರ್ವಾಂಗಗಳೂ ಅದುರುತ್ತಿದ್ದುವು. ಗಾಡಿ ಪಯಣವೇ ಹಾಗೆ. ಅದರ ಮೇಲೂ ರಸ್ತೆ ಚನ್ನಾಗಿರದಿದ್ದರೆ ಅದರ ಸುಖವನ್ನು ವರ್ಣಿಸಿ ಫಲವಿಲ್ಲ, ಅವರು ಹೊರಟ ರಸ್ತೆಯು ಅಂತಹ ರಸ್ತೆಗಳ ಒಂದು ದಿವ್ಯಮಾದರಿ! ಮಣೆಯೊಳಗೆ ಸುಸುಳಿ ಹೋಗುವ ಹೆಬ್ಬಾವಿನಂತೆ ಬೆಳ್ತಂಗಡಿಯಿಂದ ಮಲೆನಾಡಿನೊಳಗೆ ಈ ರಸ್ತೆ ಹತ್ತುಹನ್ನೆರಡು ಮೈಲುಗಳ ವರೆಗೆ ನೀಡಿಕೊಂಡಿದೆ. ಬೆಳ್ತಂಗಡಿಯಿಂದ ಹೊರಟಾಗ ರಸ್ತೆ ಕಣ್ಣಿಗೆ ಸೊಗಸಾಗಿಯೇ ಕಾಣುತ್ತದೆ. ಸಾಕಷ್ಟು ಅಗಲವಾಗಿದೆ. ಅಲ್ಲಲ್ಲಿ ನೀರು ಹೋಗಲು ಸಂಕಗಳನ್ನು ಕಟ್ಟಿರುವರು. ಆದರೆ ಬಂಗಾಡಿ ಕಡೆ ಹೋದಂತೆ ರಸ್ತೆ ಕಿರಿದಾಗುತ್ತದೆ. ಇದಿರಿಗೆ ಮತ್ತೊಂದು ಗಾಡಿ ಬಂದರೆ ದಾಟಿಹೋಗುವುದು ಕಠಿನ. ಕೆಲವೆಡೆ ಮನುಷ್ಯನಿಗೂ ನಿಲ್ಲಲು ಎಡೆ ಲಭಿಸಲಾರದು. ಗುಡ್ಡಗಾಡುಗಳಿಂದ ಹರಿದುಬರುವ ಹಳ್ಳಗಳಿಗೆ ಕಬ್ಬಿಣ, ಕಾಂಕ್ರೀಟ್‌ಗಳ ಸೇತುವೆಗಳೊತ್ತಟ್ಟಿಗಿರಲಿ, ನಾಲ್ಕು ಮರಗಳನ್ನು ಕಡಿದು ಹಾಸಿ ಸಾಮಾನ್ಯ ಸಂಕಗಳನ್ನೂ ರಚಿಸಿಲ್ಲ. ಅನೇಕ ಕಡೆಗಳಲ್ಲಿ ಆ ನೀರು ಹರಿವ ತೋಡುಗಳೇ ರಸ್ತೆಯ ಭಾಗವಾಗಿರುತ್ತವೆ. ಗುಡ್ಡಗಳ ನಡುವಿನ ಕಣಿವೆ, ಬಿದಿರಮೆಳೆ, ಘೋರಾರಣ್ಯ, ಮತ್ತು ಇಬ್ಬದಿ ವ್ಯಾಪಿಸಿರುವ ಗದ್ದೆಗಳ ಮಧ್ಯೆ ಈ ಹಾದಿ ಹಾದುಹೋಗಿದೆ. ಒಬ್ಬೊಬ್ಬರು ಈಗಲೂ ಹಗಲಿನಲ್ಲಿ ಕೂಡಾ ಪ್ರಯಾಣ ಮಾಡಲಾರರು. ಅಂದಬಳಿಕ ರಾತ್ರಿಯ ಮಾತೇ ಬೇರೆ. ಒಮ್ಮೊಮ್ಮೆ ರಸ್ತೆಗಳಲ್ಲಿ ಹಾವು, ಹುಲಿ, ಕಾಡುಹಂದಿಗಳೂ ಕಾಣಿಸಿಕೊಳ್ಳುವುದುಂಟು. ಇಬ್ಬದಿಯಲ್ಲಿರುವ ಕಾಡುಗಳಲ್ಲಿ ಹುಲಿ-ಹುಲ್ಲೆ, ನರಿ-ಹರಿಣ ಇತ್ಯಾದಿ ವನ್ಯಮೃಗಗಳ ಕೂಗೂ ಕೇಳಿಸುತ್ತದೆ. ಮಳೆಗಾಲವಿರಲಿ, ಬೇಸಿಗೆಯಿರಲಿ ಅಕ್ಕಪಕ್ಕದ ಮರಗಳಲ್ಲಿ ಕುಳಿತ ಜಿಟಿ,

ಹುಳಗಳ ಝೇಂಕಾರ ಮೌನವನ್ನು ಜುಂಮ್ಮೆನಿಸುತ್ತದೆ.

ಆದರೆ ಈ ಗಾಡಿಯಲ್ಲಿ ಕುಳಿತವರಲ್ಲಿ ಭಯಪಡುವವರು ಯಾರು? ರಾಮುಗೌಡನಂತೂ ಗಾಡಿಕಾರ; ನಿಶಾಚರ. ಎಳೆವಯಸ್ಸಿನಿಂದಲೂ ಇವೇ ವೃತ್ತಿ. ಮೊದಲು ಧನಿಯರಲ್ಲಿ ಸಂಬಳಕ್ಕಿದ್ದ. ತಿಂಗಳು ತಿಂಗಳು ಅವನು ಸಂಬಳದ ಹಣವನ್ನು ತೆಗೆದುಕೊಳ್ಳಲಿಲ್ಲ. ವರುಷಕ್ಕೊಮ್ಮೆ ಲೆಕ್ಕವಾಗುತ್ತಿತ್ತು. ಅದನ್ನು ನಂಬಿಗಸ್ಥರಾದವರಿಗೆ ಬಡ್ಡಿಗೆ ಕೊಟ್ಟ. ಬಡ್ಡಿಗೆಬಡ್ಡಿ ಕೂಡಿ ಗಂಟಾಯ್ತು. ಖಾದ್ರಿ ಬ್ಯಾರಿ ಸತ್ತಮೇಲೆ ಅವನ ಮಗ ಒಂದು ಗಾಡಿ ತನಗಾಗಿ ಇಟ್ಟುಕೊಂಡು ಇನ್ನೊಂದನ್ನು ಮಾರಬಯಸಿದ. ರಾಮು ಗೌಡನು ಕೇಳಿದುದರಿಂದ ಅದನ್ನು ಸ್ವಲ್ಪ ಸಲೀಸಾಗಿಯೇ ಕೊಟ್ಟ. ಗಾಡಿ ಸಣ್ಣದು. ಎತ್ತುಗಳೂ ಹಳಬ. ಆದರೂ ರಾಮುಗೌಡ ಅನೇಕ ವರುಷಗಳ ವರೆಗೆ ಅದನ್ನೇ ಉಪಯೋಗಿಸಿದ. ಬಂಟ್ವಾಳಕ್ಕೆ ಅವನ ಗಾಡಿ ಹೋದುದು ಕಡಿಮೆಯಾದರೂ ಬಂಗಾಡಿಯಿಂದ ಬೆಳ್ತಂಗಡಿಗೆ,ಬೆಳ್ತಂಗಡಿಯಿಂದ ಬಂಗಾಡಿಗೆ ಸದಾ ಓಡಾಡುತಿತ್ತು. ಅದರಿಂದ ಕೈಯಲ್ಲಿ ಸ್ವಲ್ಪ ಕಾಸೂ ಆಯಿತು. ಗುರುವಾಯನಕೆರೆಯಿಂದ ಆ ಗಾಡಿಗೊಂದು ಗಿರಾಕಿಯೂ ಬಂತು. ನಷ್ಟ ಮಾಡಿಕೊಳ್ಳದೆ ರಾಮುಗೌಡ ಮಾರಿದ. ಆ ಮೇಲೆ ಈ ದೊಡ್ಡಗಾಡಿ ಸಿಕ್ಕಿತು. ಹೊಸ ಎತ್ತುಗಳೂ ಬಂದುವು. ಅನೇಕ ವರುಷಗಳ ವರೆಗೆ ಈ ರಸ್ತೆಯಲ್ಲಿ ಅವು ಅತ್ತಿಂದಿತ್ತ ಓಡಿದುವು! ಕಳೆದ ವರುಷ ಅವುಗಳನ್ನು ಮಾರಿ ಈ ಎಳೆಗರುಗಳನ್ನು ತಂದ. ಈಗ ಇವು ಈ ರಸ್ತೆಯಲ್ಲಿ ಓಡಾಡುತ್ತಿವೆ. ಆದುದರಿಂದ ಈ ರಸ್ತೆ ಅವನಿಗೆ ಹೊಸದಲ್ಲ. ಅವನ ನಲ್ವತ್ತು ವರುಷದ ಇಷ್ಟರವರೆಗಿನ ಜೀವಮಾನದಲ್ಲಿ ಬಹುಭಾಗವೂ ಈ ರಸ್ತೆಯಲ್ಲೇ ಕಳೆದಿದೆ. ರಸ್ತೆಯ ಅಂಕುಡೊಂಕು, ಏರುತಗ್ಗು, ಹಳ್ಳಹೊಳೆಗಳು, ಕಲ್ಲುಮುಳ್ಳುಗಳು, ಮರಮುಟ್ಟುಗಳು ಅವನ ಜೀವಕ್ಕೆ ಅಂಟಿಕೊಂಡ ಇನ್ನಿತರ ಜೀವವಿಶೇಷಗಳು. ದಾರಿಯಲ್ಲಿರುವ ಮುರ, ಮುಂಜುಟ, ನಾವೂರು, ಇಂದಬೆಟ್ಟು, ಬಂಗಾಡಿ ಪೇಟೆ ಊರುಗಳನ್ನೂ ಅಲ್ಲಿರುವ ಮನೆ-ಮನುಷ್ಯರನ್ನೂ ಅವನು ಬಲ್ಲ. ಹುಲಿ-ಹಂದಿಗಳೂ ಅವನಿಗೆ ಹುಲ್ಲೆ ಸಮಾನ. ಹಿಂದೊಮ್ಮೆ ಸಾಂಬಾರ ಜಿನಸುಗಳನ್ನು ಹೇರಿಕೊಂಡು ಅವನೊಬ್ಬನೇ ಬೆಳ್ತಂಗಡಿಯಿಂದ ಬಂಗಾಡಿಗೆ ಹೊರಟಿದ್ದ. ಎಲ್ಲೋ ಅವನಿಗೆ ನಿದ್ದೆ ಬಂದುಬಿಟ್ಟಿತು.

ಗಾಡಿಯ ಕತ್ತರಿಯಲ್ಲೇ, ನೊಗದ ಕಡೆ ಕಾಲುಚಾಚಿ ಮಲಗಿಕೊಂಡ. ರೂಢಿಬದ್ಧ ಎತ್ತುಗಳು ತಾವೇ ಹೋಗುತ್ತಿದ್ದುವು. ಹೀಗೆ ಅವು ಎಷ್ಟು ಕಾಲ ಮತ್ತು ಮೈಲು ನಡೆದು ಹೋದುವೊ ಏನೋ! ಫಕ್ಕನೆ ಒಂದೆಡೆ ಹೌಹಾರಿ ನಿಂತು ಬುಸುಗುಟ್ಟತೊಡಗಿದುವು. ಆಗ ರಾಮುಗೌಡನಿಗೆ ಎಚ್ಚರವಾಯಿತು. ಎದ್ದು ನೋಡಿದಾಗ ರಸ್ತೆಯಲ್ಲೇ, ಇದಿರಿಗೆ, ಅನತಿ ದೂರದಲ್ಲಿ ವಜ್ರಗಳಂತೆ ಮಿನುಗುತ್ತಿದ್ದ ಎರಡು ಜ್ಯೋತಿಗಳನ್ನು ಕಂಡ. ಅದು ಹುಲಿಯೆಂದು ಅರೆಕ್ಷಣದಲ್ಲಿ ತಿಳಿಯಿತು. ಎತ್ತುಗಳು ಬೆದರಿ ಹಿಮ್ಮೆಟ್ಟತೊಡಗಿದುವು. ಅವುಗಳ ಕೊರಳ ಗೆಜ್ಜೆಯ ನಾದಕ್ಕೂ ಹೆದರಿ ಆ ಹುಲಿ ರಸ್ತೆಯ ಅಂಚಿನ ಕಾಡಿಗೆ ನುಸುಳಲಿಲ್ಲ. ರಾಮುಗೌಡನಿಗೆ ಯಾವ ದೈವದೇವರು ಬುದ್ಧಿ ಮತ್ತು ಧೈರ್ಯಕೊಟ್ಟನೋ! ಕೂಡಲೇ ಗಾಡಿಯಿಂದ ಇಳಿದು ಒಂದು ಹುಲ್ಲಿನ ಸೂಡಿಯನ್ನು ಎಳೆದು, ಅದಕ್ಕೆ ಬೆಂಕಿಕೊಟ್ಟ. ಬೆಂಕಿ ಪ್ರಜ್ವಲಿಸಿದ ಕೂಡಲೇ ಅದನ್ನು ಬೀಸುತ್ತ "ಹಿಡಿಯೋ ಹಿಡಿ! ಹಿಡಿಯೋ ಹಿಡಿ!'' ಎಂದು ಆರ್ಭಟಿಸಿದ. ಹುಲಿ ಹೆದರಿ ರಸ್ತೆಯ ಮಗ್ಗುಲಿನ ಕಾಡಿಗೆ ಹಾರಿ, ಮಾಯವಾಯಿತು. ಅವನ ಈ ಧೈರ್ಯ ಸಾಹಸಗಳ ಸುದ್ದಿ ಮಂಗಳೂರಿನ ಪತ್ರಿಕೆಗಳಲ್ಲಿ ಪ್ರಕಟವಾಗಿಲ್ಲವೇನೋ ನಿಜ. ಹಾಗಿದ್ದರೂ ಹೇಗೋ ಏನೋ ಈ ರಸ್ತೆಯಲ್ಲಿ ತಿರುಗುವ ಎಲ್ಲ ಗಾಡಿಕಾರರಿಗೂ ಗೊತ್ತಾಗಿದೆ. ಅಕ್ಕಪಕ್ಕದ ಊರುಗಳ ಮರಿಮಕ್ಕಳೂ ನಾರಿಯರೂ ಅದನ್ನು ಬಣ್ಣಿಸಿ ಹೇಳತೊಡಗಿದರು. ಹುಲಿಯೊಡನೆ ಹೊಡೆದಾಡಿ ಓಡಿಸಿದನೆಂದು ಕೆಲವರು, ಹುಲಿಯ ಬಾಲಕ್ಕೆ ಬೆಂಕಿ ತಗುಲಿತೆಂದು ಹಲವರು ಹೊಗಳಿದುದೂ ಉಂಟು. ಅದೇನಿದ್ದರೂ ಗಾಡಿಕಾರರಲ್ಲಿ ರಾಮುಗೌಡನಿಗೆ ಅಂದಿನಿಂದ ಮಾನಮರ್ಯಾದೆ ಜಾಸ್ತಿ. ಪಯಣಕ್ಕೆ ಹೊರಟಾಗ ಅವನ ಗಾಡಿಗೇ ಅಗ್ರಸ್ಥಾನ ಕೊಡತೊಡಗಿದರು.

ಅರವಿಂದ ಇದನ್ನೆಲ್ಲ ಬಲ್ಲ. ಆದರೆ ಅವನ ನಿರ್ಭೀತಿಗೆ ರಾಮುಗೌಡನ ಸಾಮಿಪ್ಯವೇ ಕಾರಣವಲ್ಲ. ಅವನು ಮಲೆನಾಡಿನಲ್ಲೇ ಹುಟ್ಟಿಬೆಳೆದವನು. ಈ ರಸ್ತೆಯಲ್ಲೂ ನೂರಾರು ಸಲ ಸಂಚರಿಸಿದವನೇ. ಅವನು ಬೆಳ್ತಂಗಡಿ "ಹಾಯರ್ ಎಲಿಮೆಂಟರಿ'' ಶಾಲೆಯಲ್ಲಿ ಕಲಿಯುತ್ತಿದ್ದಾಗ ವಾರಾಂತ್ಯದಲ್ಲಿ ಯಾವಾಗಲೂ ಮನೆಗೆ ತೆರಳುತ್ತಿದ್ದ. ರಾಮುಗೌಡನಂತೆ ನಿಶಾಚರನಲ್ಲ

ದಿದ್ದರೂ ಕತ್ತಲೆಯಲ್ಲಿ ಕಾಲಿಡದವನಲ್ಲ. ಆದರೆ ಡಾಕ್ಟರನ ಮಾತುಬೇರೆ. ಬಂಗಾಡಿಗೆ ಬರಲು ಮೊದಲು ಅವನು ಸ್ವಲ್ಪ ಅಸಮ್ಮತಿ ವ್ಯಕ್ತಪಡಿಸಿದ್ದ. ಅದು ಅರೆನಿದ್ದೆಯ ಮರುಳಿನಿಂದಲೋ, ಅಪರಾತ್ರಿಯ ಅಭಿಪ್ರಾಯದಿಂದಲೋ ಅಥವಾ ಕಾಡುನಾಡು ಹಾವು-ಹುಲಿಗಳ ಭಯದಿಂದಲೋ, ಊಹಿಸುವದು ಕಠಿನ. ಗಾಡಿಯಲ್ಲಿ ಬಂದು ಕುಳಿತ ಮೇಲೆ ಅದನ್ನೇನೂ ಹೇಳಲಿಲ್ಲ. ಹೇಳುವಂತೆಯೂ ಇರಲಿಲ್ಲ. ಏಕೆಂದರೆ ಮೊದಲೇ ಅವನು ನಿಶೆಯ ತೆಕ್ಕೆಯಲ್ಲಿದ್ದ. ಗಾಡಿ ಬೆಳ್ತಂಗಡಿಯಿಂದ ಒಂದೆರಡು ಮೈಲು ದಾಟುವುದರೊಳಗೆ ಕಾಲುಚಾಚಿ ಮಲಗಿಕೊಂಡ. "ಡಾಕ್ಟರ್! ಡಾಕ್ಟರ್! ಏಳಿ! ಏಳಿ!" ಎಂದು ಅರವಿಂದ ಕರೆದಾಗಲೇ ಎಚ್ಚರ.

"ಹಾಂ! ಹಾಂ!" ಎಂದು ತಡವರಿಸುತ್ತ ಡಾಕ್ಟರ್ ಎದ್ದು ಕುಳಿತ. ಎರಡೂ ಕೈಗಳನ್ನು ತಿಕ್ಕಿ, ಕಣ್ಣುಗಳನ್ನೊರಸಿಕೊಂಡು ಇಳಿಯತೊಡಗಿದ. ಹೊರಗೆ ನಸುಬೆಳಗಾಗಿತ್ತು. ರೈತರ ಗುಡಿಸಲುಗಳನ್ನೇರಿದ ಕೋಳಿಗಳು ಕೆಲೆಯುತ್ತಿದ್ದುವು. ಗಾಡಿ ನಿಂತಸ್ಥಳದ ಪಕ್ಕದ ಮನೆಯಲ್ಲಿ ಸೇರಿಗಾರನೊಬ್ಬ "ಪೆ, ಪೇ, ಪೈ, ಪ್ಯೇ" ಎಂದು ನಾಗಸ್ವರ ಊದತೊಡಗಿದ.

## ೨ನೇಯ ಅಧ್ಯಾಯ

ಗಾಡಿಯ ಗೆಜ್ಜೆ ಸಪ್ಪಳ ಕೇಳಿದ ಗೋಪಾಲರಾಯರು ಮನೆಯಿಂದ ನಾಲ್ಕು ಮಾರು ದೂರಬಂದು "ನಮಸ್ಕಾರ ಡಾಕ್ಟರರೇ! ನಮಸ್ಕಾರ!" ಎಂದು ಹೇಳಿ ಇದಿರ್ಗೊಂಡರು.

"ನಮಸ್ಕಾರ ಸ್ವಾಮಿ!" ಎಂದು ಡಾಕ್ಟರನೂ ಕೈಜೋಡಿಸಿದ.

"ನಿಮಗೆ ತುಂಬಾ ತೊಂದರೆ ಕೊಟ್ಟೆವು. ಬೆಳ್ತಂಗಡಿಯಲ್ಲಿ? ಬಂಗಾಡಿಯಲ್ಲಿ? ಗಾಡಿಯಲ್ಲಿ ಏನಾದರೂ ಸ್ವಲ್ಪ ನಿದ್ದೆ ಬಂತಾ? ಅಥವಾ ರಾತ್ರಿಯಿಡೀ ಜಾಗರಣೆಯೇ ಆಯಿತಾ? ಏನು ಮಾಡೋಣ ಹೇಳಿ! ಈಗ ಪ್ರಾಣಹೋಗುತ್ತದೆಂತಾದರೆ ಇಲ್ಲೊಬ್ಬ ಡಾಕ್ಟರನಿಲ್ಲ. ಹೀಗಾಗಿ ನಮ್ಮಿಂದ ನಿಮ್ಮಂತಹರಿಗೆಲ್ಲ ತೊಂದರೆ" ಎಂದು ಬಿಸುಸುಯ್ದರು.

ಡಾಕ್ಟರ್ ಮುಗುಳು ನಗುತ್ತ ಹೇಳಿದ: "ತೊಂದರೆ ಏನು ಸ್ವಾಮಿ! ನಮ್ಮ ಉದ್ಯೋಗವೇ ಇದು!"

"ಹಂ! ಹಂ! ಅದು ಬರಾಬರಿ!'' ಎಂದು ಅವರು ತಲೆ ಅಲ್ಲಾಡಿಸಿ ನರು.

ಆದರೆ ಅರವಿಂದ ಮಾತ್ರ ತೀಕ್ಷ್ಣದೃಷ್ಟಿಯಿಂದ ಡಾಕ್ಟರನನ್ನು ನೋಡಿದ. ರಾತ್ರಿಯಲ್ಲಿ ಅವನಾಡಿದ್ದ ಮಾತುಗಳು ಅವನ ಸ್ಮರಣೆಗೆ ಬಂದುವು. ಹೊರಡಲು ಮನಸ್ಸಿಲ್ಲದ ಡಾಕ್ಟರ್ "ಹಗಲಿಗೇನು ಬರಲು ಧಾಡಿ? ರಾತ್ರಿ ಬಂದು ನನ್ನನ್ನೇಕೆ ಪೀಡಿಸುತ್ತೀರಿ?'' ಎಂದಾಡಿದ್ದ. ಒತ್ತಾಯಕ್ಕೆ ಒಳಗಾಗಿಯೋ ದುಡ್ಡಿನ ಆಶೆಯಿಂದಲೋ ಅವನು ಬಂದಿರಬೇಕೆಂದು ಅರವಿಂದನ ಮನೀಷೆ. ಅದರಿಂದ ಡಾಕ್ಟರನ ಮೇಲೆ ಒಂದು ರೀತಿಯ ತಿರಸ್ಕಾರವುಂಟಾಗಿದೆ. ಗಾಡಿಯಲ್ಲಿ ಕುಳಿತ ಮೇಲೆ ಅವನು ಡಾಕ್ಟರನೊಡನೆ ವಿಶೇಷ ಮಾತನಾಡಿರಲಿಲ್ಲ. ರಾಮುಗೌಡನ ಹಿಂದೆ ಕುಳಿತು, ಕತ್ತಲೆಯಲ್ಲಿ ಕರಿಕಂಬಳಿಯ ಮುಸುಕು ಹಾಕಿಕೊಂಡು ನಿಂತಿದ್ದ ಮರಗಳನ್ನೂ ಮಿನುಗುವ ತಾರಾಲೋಕವನ್ನೂ ನಿರೀಕ್ಷಿಸುತ್ತಿದ್ದ. ಸ್ವಲ್ಪಹೊತ್ತಿನ ಮೇಲೆ ಅವನಿಗೂ ತೂಕಡಿಕೆ ಬಂತು. ಆದರೆ ಗಾಡಿಯಲ್ಲಿ ಕೈಕಾಲು ಚಾಚಿಕೊಂಡು ಡಾಕ್ಟರನು ಮಲಗಿದ್ದುದರಿಂದ ಅರವಿಂದ ಕಾಲುನೀಡಿ ತಾನೂ ಮಲಗಿಕೊಳ್ಳಲಿಲ್ಲ. ಗಾಡಿಯ ಕಮಾನಿಗೆ ಒರಗಿ, ಇನ್ನೆರಡು ಕಾಲುಗಳನ್ನು ಇನ್ನೊಂದು ಮಗ್ಗುಲಿಗೆ ನೀಡಿ ಕಣ್ಣೆವೆಗಳನ್ನು ಮುಚ್ಚಿದ. ಆದರೆ ಕಲ್ಲುಗಳ ಮೇಲೆ ಅಥವಾ ಗುಳಿಗಳ ಮೇಲೆ ಗಾಲಿ ಚಲಿಸಿದಾಗ ಅವನ ಹಿಂತಲೆಯನ್ನು ಜಪ್ಪಿದಂತಾಗುತ್ತಿತ್ತು. ಆಗ ಅವನು ಹೌಹಾರಿ ಫಕ್ಕನೇ ಕಣ್ದೆರೆಯುತ್ತಿದ್ದ. ಪುನಃ ಅವು ತನ್ನಿಂದ ತಾನೇ ಮುಚ್ಚಿಕೊಳ್ಳುತ್ತಿದ್ದುವು. ಬಂಗಾಡಿಗೆ ಬಂದು ಮುಟ್ಟುವ ವರೆಗೂ ಹೀಗೆಯೇ! ಆಮದರಿಂದ ಡಾಕ್ಟರನೊಡನೆ ಅವನು ಸಲಿಗೆ ಬೆಳೆಸಲಿಲ್ಲ. ಅವನೂ ಈ ಹುಡುಗನನ್ನು ಅಷ್ಟು ಗಮನಿಸಲಿಲ್ಲ. ಈಗ ಕೂಡಾ ಅರವಿಂದ, ಡಾಕ್ಟರನ ಹಿಂದೆ ಅವನ ಮದ್ದಿನ ಕೈಪೆಟ್ಟಿಗೆ ಹಿಡಿದುಕೊಂಡು ಬರುತ್ತಿದ್ದುದರಿಂದ ಅವನ ಮೊಗದಲ್ಲಿ ಮಿಂಚಿದ ವ್ಯಂಗ್ಯ ಮಂದಹಾಸ ಡಾಕ್ಟರನ ದೃಷ್ಟಿಗೆ ಬೀಳಲಿಲ್ಲ. ಗೋಪಾಲರಾಯರ ಹಿಂದೆ ಅವನು ಹೆಜ್ಜೆಯ ಮೇಲೆ ಹೆಜ್ಜೆ ಹಾಕುತಿದ್ದ.

ಅರವಿಂದ ಅವರ ಈ ಮಂದಗತಿಯನ್ನು ಕಂಡು ದಾರಿತೊಲೆದು ಬೇಗನೇ ಮನೆಯ ಕಡೆ ಓಡಿದ. ಪೆಟ್ಟಿಗೆಯನ್ನು ಜಗಲಿಯ ಮೇಲಿಟ್ಟು ಮನೆಯೊಳಗೆ ನುಸುಳಿದ. ಅವನ ಕಾಲ ಹೆಜ್ಜೆಯನ್ನು ಕೇಳಿದ ಅವನ ತಾಯಿ ಜಲಜಮ್ಮ "ಯಾರದು? ಅರವಿಂದನೇನು?" ಎಂದು ಒಳಗಿನಿಂದಲೇ ಕೇಳಿದರು. "ಹೌದಮ್ಮಾ!'' ಎಂದು ಅರವಿಂದ ಉತ್ತರವಿತ್ತು ಅವರ ದನಿ ಹೊರಟ ಕೋಣೆಗೇ ಬಂದ. ಜಲಜಮ್ಮ ಮಗಳ ಮುಂದೆಯೇ ಕುಳಿತಿದ್ದರು. ಪಾದಗಳಲ್ಲಿ ಸೊಗಡಿರುವ ಬೆಕ್ಕು, ಹುಲಿಗಳಂತೆ ಅರವಿಂದ ಸದ್ದಾಗದಂತೆ ನಡೆಯುತ್ತ ಬಂದು ಬಗ್ಗಿ "ಅಕ್ಕಾ! ಅಕ್ಕಾ!" ಎಂದು ಕರೆದ. ತಾಯಿ ಅರವಿಂದನೆಂದಾಗಲೇ ಅವಳು ಕಣ್ದೆರೆದಿದ್ದಳು. ಈಗ ಅವನು ಬಂದು ಅತ್ಯಂತ ಮಮತೆಯಿಂದ ಕರೆದಾಗ ಒಂದಕ್ಕೊಂದು ತಾಗಿಕೊಂಡಿದ್ದ ಅವಳ ತುಟಿಗಳೂ ಅರೆದೆರೆದುವು. ಮತ್ತು ಮೋರೆಯಲ್ಲಿ ನಗುವೇರಿತು. ಅವನು ಅಕ್ಕನ ಹಾಸಿಗೆಯ ಬಳಿ ಸ್ವಲ್ಪ ಹೊತ್ತಿನ ವರೆಗೆ ಕುಳಿತುಕೊಂಡ. ಅಷ್ಟರಲ್ಲಿ ಗೋಪಾಲರಾಯರು ಗಟ್ಟಿಯಾಗಿ ಮಾತನಾಡುತ್ತ ಡಾಕ್ಟರನನ್ನು ಮನೆಯೊಳಗೆ ಕರೆದುಕೊಂಡು ಬಂದರು. ಅವರದು ದೊಡ್ಡ ದನಿ. ಒಬ್ಬರಿದ್ದಾಗ ಕೂಡಾ ಹೊಸ್ತಿಲು ದಾಟಿ ಮನೆಯೊಳಗೆ ಬಂದಾಗ "ಏ, ಯಾರಿದ್ದೀರಿ ಒಳಗೆ? ಅರವಿಂದ! ಕಾವೇರಿ!'' ಎಂದು ಉಚ್ಚಸ್ವರದಿಂದ ಕರೆಯುತ್ತ ಬರುತ್ತಾರೆ. ಅವರೀರ್ವರೂ ಹೊರಗಿದ್ದಾರೆ ಮತ್ತು ಜಲಜಮ್ಮ ಮಾತ್ರ ಒಳಗಿದ್ದಾರೆ ಎಂದು ಗೋಪಾಲರಾಯರಿಗೆ ಗೊತ್ತಿದ್ದರೂ ಹಾಗೆ ಕೂಗುವುದು ಅವರ ಸ್ವಭಾವ. "ನಾನು ಬರುತ್ತಿದ್ದೇನೆ. ಬರಲೆ?" ಎಂದು ಕೇಳುವ ಶಿಷ್ಟಾಚಾರದ ಅಥವಾ ನಡೆವಳಿಕೆಯ ರಹಸ್ಯ ಅದರಲ್ಲಿ ಹುದುಗಿರಲೂ ಸಾಕು. ಅಂತಹ ಸಂದರ್ಭಗಳಲ್ಲಿ ಅಳುವ ಮಕ್ಕಳು ಸುಮ್ಮಗಾಗುತ್ತವೆ. ಆಡುವ ಹುಡುಗರು ಕೈಯಲ್ಲಿ ಪುಸ್ತಕ ಹಿಡಿಯುತ್ತವೆ. ಹರಟೆ ಹೊಡೆವ ಸ್ತ್ರೀಯರು ಚದರಿ ಮರೆಯಾಗುವರು. ಸ್ತ್ರೀಯರು ಪರಪುರುಷರ ಕಣ್ಣಿಗೆ ಕಾಣಿಸಿಕೊಳ್ಳುವುದೂ ಕಠಿನ. ಪರಪುರುಷರೇ ಏಕೆ, ಮನೆ ಗಂಡಸರು ಚಾವಡಿಯಲ್ಲಿದ್ದರೂ ಅವರು ಅಲ್ಲಿ ಬಂದು ನಿಂತುಕೊಳ್ಳಲಾರರು. ಕಾಫಿ, ಅಥವಾ ಊಟಕ್ಕೆ ಹುಡುಗರ ಕಡೆಯಿಂದ ಹೇಳಿ ಕಳಿಸುವುದು ರೂಢಿ. ಅಥವಾ ಅವರು ಮನೆಯಲ್ಲಿಲ್ಲದಿದ್ದರೆ ಬಾಗಿಲಿನ

ಮರೆಯಲ್ಲಿ ನಿಂತು ಹಣಿಕಿ "ಕಾಫಿ ಆಯಿತು ! ಸ್ನಾನಕ್ಕಾಯಿತು!" ಎಂದು ಹೇಳುವರು. ಬಂಧು ಬಳಗದವರು ಬಂದಾಗ ಕೂಡಾ ಅಲ್ಲೇ ನಿಂತು "ಏನು ? ಒಳ್ಳೇದು !" ಎಂದು ಯೋಗಕ್ಷೇಮ ವಿಚಾರಿಸುವರು. ಇದು ಕೇವಲ ಗೋಪಾಲರಾಯರ ಮನೆಯೊಳಗಿನ ಹೊಕ್ಕುಬಳಕೆಯಲ್ಲ. ಮಲೆನಾಡಿನ ಸಮಸ್ತ ಬ್ರಾಹ್ಮಣರ ಮನೆಗಳೊಳಗಿನ ನಡೆವಳಿಕೆ.

ಹಾಗಿರುವಾಗ ಡಾಕ್ಟರನು ಬಂದು ಕೈಹಿಡಿದು, ಕಣ್ಣಿನ ಕೆಳ ಎವೆಗಳನ್ನು ಸರಿಸಿ ನೋಡಿದಾಗ ಕಾವೇರಿಗೆ ತುಂಬಾ ನಾಚಿಕೆಯುಂಟಾಯಿತು. "ಜ್ವರಗಡ್ಡೆ ಇದೆಯೋ ಏನೋ ! ನೋಡಿ ಡಾಕ್ಟರರೇ ! ಹುಡುಗಿಗೆ ಯಾವಾಗಲೂ ಜ್ವರ ಬರುತ್ತದೆ'' ಎಂದು ಗೋಪಾಲರಾಯರು ಹೇಳಿ ಮಗಳ ಕಡೆ ನೋಡಿ "ಕಂಬಳಿ ತೆಗಿಯಮ್ಮಾ'' ಎಂದರು. ಡಾಕ್ಟರ್ ಎರಡೂ ಕೈಗಳಿಂದ ಹೊಟ್ಟೆ ಒತ್ತಿ ಒತ್ತಿ ಅಮುಕಿದಾಗ ಅವಳು ಲಜ್ಜೆಯಿಂದ ಕಣ್ಣುಗಳನ್ನು ಮುಚ್ಚಿಕೊಂಡಳು. ಅವಳನ್ನು ಮಗ್ಗುಲಿಗೆ ಸರಿಸಿ ಪಕ್ಕೆ,ಬೆನ್ನುಗಳನ್ನು ಬೆರಳಿನಿಂದ ಬಡಿದು ಕೊಳವೆ ಇಟ್ಟು ರೋಗಪರೀಕ್ಷೆ ಮಾಡಿಯೂ ಆಯಿತು. "ನಾಲಿಗೆ ನೋಡೋಣ ! ನಾಲಿಗೆ'' ಎಂದು ಡಾಕ್ಟರ್ ಅವಳ ಕಡೆ ನೋಡಿ ಹೇಳಿದ. ಅವಳು ಮಾವಿನ ಚಿಗುರೆಲೆಯಂತಹ ನಾಲಿಗೆಯನ್ನು ಹೊರಚಾಚಿದಳು. ಆಗ ಡಾಕ್ಟರನನ್ನು ಒಂದು ಕ್ಷಣ ದಿಟ್ಟಿಸಿ ಮೋರೆಯನ್ನು ಬದಿಗೆ ಸರಿಸಿದಳು.

"ಹಂ ! ಹಂ ! ವಿಶೇಷವೇನಿಲ್ಲ ! ವಿಶೇಷವೇನಿಲ್ಲ !" ಎಂದು ಡಾಕ್ಟರ್ ಹೇಳುತ್ತ ತನ್ನ ಪೆಟ್ಟಿಗೆಯನ್ನು ತರಿಸಿದ. ಬೆಂಕಿಪೆಟ್ಟಿಗೆ ಕೊರೆದು ಒಂದು ಸಣ್ಣಗಾಜಿನ ಚಿಮಣಿ ಹೊತ್ತಿಸಿದ. ಒಂದು ದೊಡ್ಡ ಚಮಚೆ ತೆಗೆದು ಅದಕ್ಕೆ ನೀರು ಎರೆದ. ಒಂದು ಸೂಜಿಯನ್ನು ಅದರೊಳಗೆ ಹಾಕಿ, ಬೆಂಕಿಯ ಮೇಲೆ ಹಿಡಿದ ಮತ್ತು "ಇದನ್ನು ಸ್ವಲ್ಪ ಹಿಡಿಯಿರಿ" ಎಂದು ಹೇಳಿ ಚಮಚವನ್ನು ಅರವಿಂದನಿಗೊಪ್ಪಿಸಿದ. ನೀರು ಗಳ ಗಳ ಕುದಿದ ಮೇಲೆ ಇಕ್ಕುಳದಿಂದ ಆ ಸೂಜಿಯನ್ನು "ಇಂಜೆಕ್ಶನ್ ಟ್ಯೂಬಿಗೆ" ಸಿಕ್ಕಿಸಿ ಅದೇ ನೀರಿನಿಂದ ಆ ನಳಿಗೆಯನ್ನು ತೊಳೆದ. ಗಾಜಿನ ಒಂದು ಕಿರಿ ಸೀಸೆಯಲ್ಲಿ ಔಷಧ. ಅದರ ಕುತ್ತಿಗೆ ಕೊರೆದು, ಮುರಿದು, ಅದರ ದ್ರವವನ್ನು ನಳಿಗೆಯೊಳಗೆ ಹೇರಿಕೊಂಡ. ಕಾವೇರಿ ಇದನ್ನೆಲ್ಲ ಇಷ್ಟರವರೆಗೆ ತದೇಕಚಿತ್ತದಿಂದ

ನೋಡುತಿದ್ದಳು. ಸ್ವತಃ ಇಂಜೆಕ್ಶನ್ ತೆಗೆದುಕೊಂಡ ಅನುಭವವಿಲ್ಲ. ಆದುದರಿಂದ ಕೆಂಪು "ಟಿಂಕ್ಚರ್ ಆಯಡಿನ್"ದಲ್ಲಿ ಅದ್ದಿದ ಹತ್ತಿಯನ್ನು ಅವಳ ತೋಳಿಗೆ ಒರಸಿ, ಸೂಜಿಯನ್ನು ಚುಚ್ಚಿದಾಗ "ಅಮ್ಮಾ! ಅಯ್ಯೋ!" ಎಂದು ಅವಳು ಚೀರಿದಳು. "ಛೀ! ಛೀ! ಛೀ! ಏನಮ್ಮಾ, ನೀನು ಇಷ್ಟು ದೊಡ್ಡವಳು ಮಗುವಿನ ಹಾಗೆ ಮಾಡಿದರೆ?" ಎಂದು ಗೋಪಾಲ ರಾಯರು ಅವಳ ಮತ್ತೊಂದು ಕೈಯನ್ನು ಬಲವಾಗಿ ಹಿಡಿದುಕೊಂಡರು. ಅರೆಕ್ಷಣದಲ್ಲಿ ಡಾಕ್ಟರ್ ಸೂಜಿಯನ್ನು ಹೊರಗೆಳೆದು, ಚುಚ್ಚಿದ ಸ್ಥಳವನ್ನು ಪುನಃ ಹತ್ತಿಯಿಂದ ಉಜ್ಜಿದ. ಕಾವೇರಿಯ ಕಣ್ಣುಗಳು ತುಂಬಿ ಗಲ್ಲಗಳಿಂದ ಅದು ಇಳಿದು ಹರಿಯಿತು.

"ಛೀ! ಏನೂ ಗಾಬರಿಯಿಲ್ಲ! ಏನೂ ಆಗುವುದಿಲ್ಲ!" ಎಂದು ಹೇಳುತ್ತ ಡಾಕ್ಟರ್ ಹೊರಗೆ ಬಂದ. ಗೋಪಾಲರಾಯರು ಅವನ ಕೈಗೆ ನೀರೆರೆಯುತ್ತ "ಡಾಕ್ಟರರೇ! ರಾತ್ರಿ ಕಥೆ ನೀವೇನು ಕೇಳುತ್ತೀರಿ? ಬೆಳಗಾಗುವುದಿಲ್ಲ ಎಂದು ಮಾಡಿದ್ದೆವು. ಎಷ್ಟು ಜ್ವರ! ಏನು ಕಥೆ! ಹಣೆಗೆ ಕೈ ಇಡುವಂತಿದ್ದಿಲ್ಲ. ಒಂದು ಸಲ ಪ್ರಜ್ಞೆಯೂ ತಪ್ಪಿತು. ಏನೇನೋ ಹುಚ್ಚು ಹುಚ್ಚು ಮಾತನಾಡಲು ಆರಂಭಿಸಿದಳು. ನಮ್ಮ ಕೈಕಾಲುಗಳು ನಡುಗಿದುವು. ಫಕ್ಕ ಯಾರನ್ನಾದರೂ ಕರೆಯೋಣವೆಂದರೆ ಇಲ್ಲಿ ಯಾರಿದ್ದಾರೆ? ಅದಕ್ಕೆ ದೇವರ ಮೇಲೆ ಭಾರಹಾಕಿ, ಹುಡುಗನನ್ನು ನಿಮ್ಮಲ್ಲಿಗೆ ಕಳಿಸಿವೆ. ನೀವು ಬಂದು ಉಪಕಾರ ಮಾಡಿದಿರಿ. ನಿಮ್ಮನ್ನು ಕಂಡ ಮೇಲೆ ನನಗೆ ಸ್ವಲ್ಪ ಧೈರ್ಯಬಂತು!" ಎಂದರು.

"ರಾತ್ರಿಹೊತ್ತು! ಹಾಗಾಗಿ ಬೇಗನೇ ಬರಲಾಗಲಿಲ್ಲ. ಹಗಲಿಗೆ ಆಗುತಿದ್ದರೆ ಸೈಕಲ್ಲಿನಲ್ಲಿಯೂ ಬರುತಿದ್ದೆ" ಎಂದು ಜೈರಾಸಿನಲ್ಲಿ ಕೈಗಳನ್ನೊರಸುತ್ತ ಡಾಕ್ಟರ್ ಉಪಚಾರದ ಮಾತುಗಳನ್ನಾಡಿದ.

ಇಬ್ಬರೂ ಜಗಲಿಯಲ್ಲಿ ಹಾಸಿದ ಹುಲ್ಲಿನ ಚಾಪೆಯ ಮೇಲೆ ಬಂದು ಕುಳಿತುಕೊಂಡರು. ಕಾವೇರಿಗೆ ತಿಂಡಿ ತೀರ್ಥ ಏನು ಕೊಡಬೇಕು ಏನು ಕೊಡಬಾರದೆಂದು ಗೋಪಾಲರಾಯರು ಕೇಳಿ ತಿಳಿದುಕೊಂಡರು. ಅಷ್ಟರಲ್ಲಿ ಅರವಿಂದ ಬಂದು ಒಂದೆಡೆ ನಿಂತುಕೊಂಡ. ತಂದೆ ಅವನ ಕಡೆ ಮೋರೆ ಹೊರಳಿಸಿದ ಮೇಲೆ "ಬಾಯಾರಿಕೆಗೆ ಆಯಿತು" ಎಂದು ಹೇಳಿದ. "ಹಂ!

ಏಳಿ ! ಏಳಿ ! ಡಾಕ್ಟರರೇ ಏಳಿ ! ಸ್ವಲ್ಪ ಬಾಯಾರಿಕೆ ಕುಡಿಯುವಾ !'' ಎಂದು ಹೇಳಿ ಎದ್ದರು.

ಫಲಾಹಾರ ಮುಗಿಸಿದ ಡಾಕ್ಟರ್ ಕೋಟು ಸಿಕ್ಕಿಸುತ್ತಿರುವುದನ್ನು ಕಂಡ ಗೋಪಾಲರಾಯರು "ಎಲ್ಲಿಗೆ ಸ್ವಾಮಿ ? ಎಲ್ಲಿಗೆ ಹೊರಟಿರಿ ?'' ಎಂದು ಆಶ್ಚರ್ಯದಿಂದ ಕೇಳಿದರು.

"ಊರಿಗೆ ! ಮತ್ತೇನು, ಇಲ್ಲೇ ಇರಬೇಕಂತೀರಾ ?''

"ಹುಂ ಮತ್ತೆ! ಈ ಹೊತ್ತು ಇದ್ದು ಬಿಡಿ. ನಾಳೆ ಹೋಗುವಾ."

"ಛೇ ಛೇ!"

"ಛೇ ಇಲ್ಲ! ಛಾ ಇಲ್ಲ! ನಾನು ತಮಾಷೆ ಮಾಡುತಿದ್ದೇನೆಂದು ತಿಳಿದು ಕೊಂಡಿರಾ ? ಸತ್ಯ ಹೇಳುತಿದ್ದೇನೆ. ಬರುವುದು ನಿಮ್ಮಿಷ್ಟ. ಬಂದ ಮೇಲೆ ಕಳಿಸುವುದು ನಮ್ಮಿಷ್ಟ" ಎಂದವರು ನಗಾಡಿದರು.

"ಛೇ! ಛೇ! ಅದಾಗುವುದಿಲ್ಲ ಸ್ವಾಮಿ!''

"ಆಗುವುದಿಲ್ಲ ! ಆಗುವುದಿಲ್ಲ!"

ಗೋಪಾಲರಾಯರ ಖಂಡಿತೋಕ್ತಿಗಳನ್ನು ಕೇಳಿ ಡಾಕ್ಟರರು ಕೈಜೋಡಿಸಿ, "ಸ್ವಾಮಿ, ಇಲ್ಲಿ ನೋಡಿ. ಇನ್ನೊಂದು ಸಲ ಬಂದಾಗ ಬೇಕಂದ್ರೆ ನಿಮ್ಮಲ್ಲಿ ಎರಡು ದಿನ ಇದ್ದು ಬಿಡುತ್ತೇನೆ. ಈಗ ನನ್ನನ್ನು ಕಳಿಸಿ ಕೊಡಿ'' ಎಂದ.

ಗೋಪಾಲರಾಯರು ಡಾಕ್ಟರನ ಕಡೆ ಹೊರಳಿ, "ಅಲ್ಲ ! ನಿಮಗೆ ಈಗ ಅಷ್ಟು ಅವಸರವಾದರೂ ಏನು ? ರಾತ್ರಿ ಇಡೀ ನಿದ್ದೆಗೆಟ್ಟಿದ್ದೀರಿ ! ಗಾಡಿಯಲ್ಲಿ ಕುಳಿತು ಕೈ ಮೈ ಗುದ್ದಿಸಿಕೊಂಡಿದ್ದೀರಿ ! ನಿಮಗೆ ಅದು ಈಗ ಗೊತ್ತಾಗಲಿಕ್ಕಿಲ್ಲ. ಒಂದು ದಿನದ ಮೇಲೆ ತಿಳಿದೀತು. ಅದಕ್ಕೆ ನಾನು ನಿಮಗೆ ಔಷಧೋಪಚಾರ ಹೇಳುತ್ತೇನೆ. ಕೇಳಿ" ಎಂದು ನಕ್ಕು ಮತ್ತಿಂತೆಂದರು. "ನೀವು ಈ ಹೊತ್ತು ಇಲ್ಲಿ ಇರಿ. ಸ್ವಲ್ಪ ಮೈಗೆ ಎಣ್ಣೆ ಹಾಕಿ ತಿಕ್ಕಿ, ಸುಡು ಸುಡು ನೀರು ಸ್ನಾನಮಾಡಿದರೆ ಆ ಮೈ ಕೈ ನೋವು ಹೋಗುತ್ತದೆ. ಇಲ್ಲಿ ನೀರು ಕಟ್ಟಿಗೆಗೆ ಏನೂ ಕ್ರಯ ಕೊಡಬೇಕಾಗಿಲ್ಲ, ನಿಮ್ಮ ಬೆಳ್ತಂಗಡಿ ಹಾಗೆ!"

ಡಾಕ್ಟರ್ ಉತ್ತರ ಕೊಡಲಿಲ್ಲ.

ಗೋಪಾಲರಾಯರೇ ಮಾತು ಮುಂದುವರಿಸಿ "ನೋಡಿ ! ನಮ್ಮೂ

ರಿಗೆ ಮೋಟಾರಿದ್ದರೆ ನಿಮ್ಮನ್ನು ಅಗತ್ಯ ಕಳಿಸುತ್ತಿದ್ದೆ. ಹನ್ನೆರಡು ಮೈಲಿಗೊಂದು ತಾಸೂ ಬೇಡ. ಈ ನಮ್ಮ "ರಾಜರಸ್ತೆ"ಯಲ್ಲಿ ಮೋಟಾರಿಗೆ ಎರಡು ತಾಸನ್ನಿ! ಅದೂ ಇಲ್ಲಿಲ್ಲ. ಹಾಗಾಗಿ ಗಾಡಿಯೇ ಗತಿ! ನಮ್ಮ ಗೌಡನ ಗಾಡಿ ರಾತ್ರಿ ಹನ್ನೆರಡು ಮೈಲು ಹೋಗಿದೆ; ಹನ್ನೆರಡು ಮೈಲು ಬಂದಿದೆ. ಈಗ ಮತ್ತೆ ಹೊಡಿ ಎಂದರೆ ಹೇಗಾದೀತು? ಇದಿರು ಬಿಸಿಲು. ಅಲ್ಲದೆ ಎತ್ತುಗಳೂ ಯಾಕಾದಾವು? ಅವುಗಳಿಗೂ ಸ್ವಲ್ಪ ನಿದ್ದೆ, ನೀರು, ಹುಲ್ಲು, ಹುರುಳಿ ತಿನ್ನಲು ಸಮಯ ಬೇಡ್ವಾ! ಸಂಜೆ ಗಾಡಿ ಕಟ್ಸ್ಟೋಣ!" ಎಂದರು.

ಡಾಕ್ಟರ್ ಕಣ್ಣರಳಿಸಿ "ಸಂಜೆ ಬೇಡ. ಮಧ್ಯಾಹ್ನ ಊಟವಾದ ಮೇಲಾದರೂ........''

ಅವನು ವಾಕ್ಯ ಮುಗಿಸುವ ಮೊದಲೇ ಅವರು ನಡುವೆ "ಮಧ್ಯಾಹ್ನ ಕಟ್ಟಿದರೆ ನಿಮ್ಮಲ್ಲಿ ಮುಟ್ಟಿದಾಗ ಸಂಜೆಯಾಗುತ್ತದೆ. ನೀವು ಹೋಗಿ ಪ್ರಯೋಜನವಾದರೂ ಏನು? ನಿಮ್ಮದೇನು ಗವರ್ನಮೆಂಟ್ ಕೆಲಸ ಅಲ್ಲ! ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ. ಸಂಜೆ ಗಾಡಿ ಕಟ್ಟಿದರೆ ಮಧ್ಯರಾತ್ರಿಯೊಳಗೆ ಬೆಳ್ತಂಗಡಿ ಸೇರುತ್ತೀರಿ. ಮತ್ತೆ ಸುಖವಾಗಿ ನಿದ್ದೆಮಾಡಬಹುದು. ನೀವು ಸುಮ್ಮಗಿರಿ. ನಾನೆಲ್ಲ ವ್ಯವಸ್ಥೆ ಮಾಡುತ್ತೇನೆ'' ಎಂದು ಹೇಳಿ ಒಳಗೆ ಹೋದರು. ಡಾಕ್ಟರ್ ಸುಮ್ಮಗೆ ಬೆನ್ನಮೇಲೆ ಕೈ ಕಟ್ಟಿಕೊಂಡು ಚಾವಡಿಯಲ್ಲಿ ಅತ್ತಿತ್ತ ತಿರುಗಿದ. ಅವರು ಹೊರಬಂದ ಕೂಡಲೇ ಅವನು ಎರಡೂ ಕೈಗಳನ್ನು ಅವರ ಕಡೆ ನೀಡಿ ನುಡಿದ: "ಸ್ವಾಮಿ! ಹೋಗದಂತೆ ನನ್ನನ್ನು ಕಟ್ಟಿ ಹಾಕಿ ಬಿಟ್ಟಿರಿ! ಆದರೆ ಸಂಜೆಯ ವರೆಗೆ ಹೊತ್ತು ಹೋದೀತಾ?"

"ಹೋ! ಹೋ! ಹೋ!'' ಎಂದವರು ನಕ್ಕು ಹೇಳಿದರು: "ಏಳಿ! ಏಳಿ! ನಮ್ಮ ಮನೆ ನೋಡುವಾ!''

ಅವರ ಮನೆ ಒಮ್ಮೆ ನೋಡುವಂತಹುದೇ. ಅದು ಮೂಡು-ಪಡು ಕಟ್ಟಲ್ಪಟ್ಟಿದೆ. ಮೂಡು ದಿಕ್ಕಿನಲ್ಲಿ ಹೆಬ್ಬಾಗಿಲು. ಒಳಗೆ ಚಚ್ಚೌಕ ಅಂಗಳ. ಈ ಒಳ ಅಂಗಳದ ಆಚೆ ಈಚೆ ದೇವಸ್ಥಾನದಲ್ಲಿರುವಂತಹ ಪೌಳಿ. ಈ ಪೌಳಿಗೆ ಅಂಗಳದ ಕಡೆ ಅರ್ಧ ಗೋಡೆ. ಆಚೆ ಬದಿಗಳಲ್ಲಿ ಪೂರ್ಣ ಗೋಡೆ. ಹೆಬ್ಬಾಗಿಲಿನ ಮಾಡನ್ನು ಇದಕ್ಕೂ ಜೋಡಿಸಿರುವರು. ದಕ್ಷಿಣ ಪೌಳಿಯ

ಜಗಲಿಯಲ್ಲಿ ಭತ್ತ ಕುಟ್ಟುವ ನಾಲ್ಕೈದು ಗುಳಿಗಳಿವೆ. ಅಲ್ಲೇ ಒನಕೆಗಳನ್ನೂ ತೂಗಹಾಕಿರುವರು. ಭತ್ತದ ಒಂದು ಸಣ್ಣ ರಾಶಿಯೂ ಇದೆ. ಬಡಗು ಪೌಳಿಯಲ್ಲಿ ಸೌದೆಯನ್ನು ಒಟ್ಟಿರುವರು. ಗೊಬ್ಬರ ಬುಟ್ಟಿಗಳು, ಹಾರೆ, ಪಿಕ್ಕಾಸು, ಗೊರಬು, ಕತ್ತಿ, ಕೊಡಲಿ, ಮಡುಗಳನ್ನು ಅಲ್ಲಿ ಇಟ್ಟಿರುವರು. ಅಂಗಳದಲ್ಲೊಂದು ಭತ್ತದ ಸಣ್ಣ ಕಣಜವಿದೆ. ಅಂಗಳದ ಎರಡು ಮೆಟ್ಟಲು ಎತ್ತರದಲ್ಲಿ ಮನೆ ಜಗಲಿ. ಜಗಲಿಯಿಂದ ಎರಡು ಸೋಪಾನಗಳನ್ನೇರಿದರೆ ವಿಶಾಲವಾದ ಚಾವಡಿ. ಜಗಲಿಗಾಗಲೀ ಚಾವಡಿಗಾಗಲೀ ಅಂಗಳದ ಮಗ್ಗುಲಿನಲ್ಲಿ ಗೋಡೆಯಿಲ್ಲ. ಬರೀ ಕಂಬಗಳಿವೆ. ಹುಡುಗರು ಅಂಗಳಕ್ಕೆ ಬೀಳಬಾರದೆಂದೋ ಏನೋ ಜಗಲಿಯ ಕಂಬಗಳಿಗೆ ಸೊಂಟದಷ್ಟು ಎತ್ತರದವರೆಗೆ ಅಡ್ಡ ಪಳಿ ಹೊಡೆದಿರುವರು. ಚಾವಡಿಯ ಕಂಬಗಳು ತುಂಬಾ ಗಾತ್ರವಿವೆ. ಸಣ್ಣ ಮಕ್ಕಳು ಆಚೆ ಅಡಗಿ ನಿಂತರೆ ಈಚೆ ಕಾಣಲಾರವು. ಚಾವಡಿ ಅಗಲಕ್ಕಿಂತಲೂ ಉದ್ದ ಜಾಸ್ತಿ. ಅಲ್ಲಿಂದ ಮನೆಯೊಳಗೆ ಹೋಗುವ ದ್ವಾರ. ಬಾಗಿಲಿನ ದಾರಂದಗಳು ಗಡುಚು. ಅದರಲ್ಲಿ ಶಂಖ ಚಕ್ರ ಗದಾ ಪದ್ಮಗಳೂ ಗಿಳಿ, ನವಿಲು ಇತ್ಯಾದಿ ಬಡಗಿಯ ಕಲಾಕೌಶಲ್ಯಗಳೂ ಇವೆ. ಒಳಗೆ ದೇವರ ಕೋಣೆ, ಬಂದು ಹೋಗುವವರು ಊಟ ಉಪಚಾರಕ್ಕೆಗೆ ಕುಳಿತುಕೊಳ್ಳುವ ಪಡಸಾಲೆ, ಒಂದು ಸಣ್ಣ ಉಗ್ರಾಣ, ಅಟ್ಟ, ಅಡಿಗೆಮನೆ ಎರಡು ಮೂರು ಇನ್ನಿತರ ಕೋಣೆಗಳೂ ಇವೆ.

ಒಂದು ಕೋಣೆಯಲ್ಲಿ ಕಾವೇರಿ ಮಲಗಿದ್ದಳು. ಅದರ ಮುಂದೆ ಹಾದು ಹೋದಾಗ ಗೋಪಾಲರಾಯರು ಥಕ್ಕನೇ ನಿಂತರು. ಏಕೆಂದರೆ ಕಾವೇರಿ ಹಾಸಿಗೆಯ ಮೇಲೆ ಕುಳಿತಿದ್ದಳು. ಅದನ್ನು ಕಂಡು ಅವರು ಒಳಗೆ ಬಂದು, "ಹಾಗೆ ಕುಳಿತುಕೊಳ್ಳಬಾರದು ಮಗೂ! ಏನಾಗುತ್ತದೆ ನಿನಗೆ?" ಎಂದು ಪ್ರಶ್ನಿಸಿದರು.

"ಸ್ವಲ್ಪ ಬಾಯಾರಿಕೆಯಾಗಿದೆ"

"ಕಾಫಿ ಆದೀತಾ? ಕಷಾಯವಾ?"

"ಕಾಫಿ"

"ಸರಿ! ಸರಿ" ಎಂದು ಹೇಳಿ ಅವರು ಒಳಗೆ ಹೊರಟರು. ಡಾಕ್ಟರ್ ಕೋಣೆಯ ಹೊಸ್ತಿಲ ಬಳಿ ಇದ್ದ. ಗೋಪಾಲರಾಯರು ಅವನ ಕಡೆ ಹೊರಳಿ

"ನಿಲ್ಲಿ! ಈಗ ಬಂದೆ. ಸ್ವಲ್ಪ ಕಾಫಿ ತರುತ್ತೇನೆ" ಎಂದು ಹೇಳಿ "ಏ, ಇವಳೇ" ಎಂದು ಕರೆಯುತ್ತಾ ಅಡಿಗೆ ಕೋಣೆಗೆ ಹೋದರು. ಹೊಸ್ತಿಲ ಬಳಿ ನಿಂತಿದ್ದ ಡಾಕ್ಟರ್ ಎಡಗೈಯಿಂದ ತನ್ನ ಕುತ್ತಿಗೆಯನ್ನು ಸವರಿಕೊಳ್ಳುತ್ತ ಅತ್ತಿತ್ತ ನೋಡಿದ. ಅವನು ನಿಂತಿದ್ದ ಕೋಣೆಯ ಜಂತಿಗಳಿಗೆ ಬಿದಿರು ಹಾಕಿ, ನೂರಾರು ಹಣ್ಣು ಸವುತೆಗಳನ್ನು ಕಟ್ಟಿದ್ದರು. ಗೋಡೆಯಲ್ಲಿ ಅಲ್ಲೊಂದು ಇಲ್ಲೊಂದು ಸೀತಾಪಹರಣ, ದ್ರೌಪದೀ ವಸ್ತ್ರಹರಣ, ನಳ-ದಮಯಂತಿ, ಸತ್ಯವಾನ-ಸಾವಿತ್ರಿ ಇತ್ಯಾದಿ ಪೌರಾಣಿಕ ಚಿತ್ರಗಳನ್ನು ತೂಗಹಾಕಿರುವರು. ಅವುಗಳ ಸೌಂದರ್ಯ, ಅವನ ದೃಷ್ಟಿಯನ್ನು ಬದಲಿಸಿತೋ ಏನೋ! ಏಕೆಂದರೆ ಅವನು ಇತ್ತ ಹೊರಳಿ ನೋಡಿದಾಗ ಕೋಣೆಯಲ್ಲಿ ರೋಗಿಯೊಬ್ಬಳನ್ನು ಕಾಣುವುದರ ಬದಲು ರೂಪವತಿಯಾದ ಯುವತಿಯೋರ್ವಳನ್ನು ಕಂಡ. ಅರೆದೆರೆದ ಕಿಟಕಿಯಿಂದ ಕೋಣೆಯೊಳಗೆ ಬೆಳಕೂ ಇಣಿಕಿ ಇಣಿಕಿ ಅವಳ ರೂಪ-ಲಾವಣ್ಯವನ್ನು ನೋಡುತ್ತಿದೆ. ತೆಳುಗಾಳಿ ಅವಳ ಕೂದಲೆಳೆಯನ್ನು ತೀವುತ್ತಿದೆ. ಅವಳ ಹಣೆ, ಕೆನ್ನೆಗಳನ್ನು ಅದು ಮುಟ್ಟಿ ನೋಡುತ್ತಿದೆ. "ಛೀ" ಎಂದವಳು ಹೇಳಿ ಕೈಯನ್ನೆತ್ತಿ ಹಿಂದೆ ಸರಿಸಿದಳು. "ಛೀ" ಎಂದಾಗ, ಒಂದಾಗಿದ್ದ ಅವಳ ತುಟಿಗಳು ತೆರೆದುವು. ಮತ್ತು ನೀಳವಾಗಿ ಕೊಯ್ದ ಹಣ್ಣು ತೊಂಡೆಯಂತೆ ಅವು ತೋರಿದುವು. ಬಿಳಿ ಹಲ್ಲುಗಳೂ ಒಮ್ಮೆ ಮಿಂಚಿ ಮಾಯವಾದುವು. ಅವು ಕೂಡಾ ವಿಕಾರವಿಲ್ಲ. ಅಲ್ಲದೆ ಎತ್ತಿದ ಕೈ ನೀಳವಾಗಿಯೂ ಸುಂದರವಾಗಿಯೂ ಇವೆ. ತೊಟ್ಟುಕೊಂಡ ಬಳೆಗಳೂ ಕಿಣಿ ಕಿಣಿ ಅಲುಗಿದವು. ಬಂಗಾರದ ಬಳೆಗಳು ಅವಳ ಬಣ್ಣ ಕಂಡು ನಾಚಿ, ಗಾಜಿನ ಬಳೆಗಳ ನಡುವೆ ಅಡಗಿವೆ. ಮಾತನಾಡಿಸಬೇಕೆಂದು ಡಾಕ್ಟರ್ ಬಯಸಿದ. ಅದರೆ ಏನು, ಹೇಗೆ, ನುಡಿಯಬೇಕೆಂದು ಅವನಿಗೆ ತಿಳಿಯಲಿಲ್ಲ. ಒಂದು ಕ್ಷಣ ಯೋಚಿಸಿ, "ನಿಮಗೆ ಊಟಕ್ಕೆ ಏನು ಕೊಡುತಿದ್ದಾರೆ?'' ಎಂದು ಕೇಳಿದ.

ಕಾವೇರಿ ಸರಕ್ಕನೇ ತಲೆ ಎತ್ತಿ ನೋಡಿ "ಗಂಜಿ! ಗಂಜಿ!" ಎಂದು ಉತ್ತರವಿತ್ತಳು. ಅವಳು ಮತ್ತೆ ಮತ್ತೆ ಒತ್ತಿ ಹೇಳಿದುದರಿಂದ ಅದನ್ನು ತಿಂದು ತಿಂದು ಬಹಳ ಬೇಸರ ಬಂದಿದೆಯೆಂದು ಯಾರಿಗಾದರೂ ಅರ್ಥವಾಗುವಂತಿತ್ತು. ಮತ್ತೇನು ಕೇಳಲಿ ಎಂದು ಡಾಕ್ಟರ್ ವಿಚಾರ ಮಾಡುತಿ

ದ್ದಾಗಲೇ ಅವಳು ಪ್ರಶ್ನಿಸಿದಳು : "ಡಾಕ್ಟರ್ ! ನಿಮಗೆ ಎಂದಾದರೂ ಜ್ವರ ಬರುವುದಿಲ್ಲವೇ ?"

"ಬರುತ್ತದೆ"

"ಆಗ ನೀವು ಬೆಳಿಗ್ಗೆ, ಮಧ್ಯಾಹ್ನ, ಸಂಜೆ ಮೂರೂ ಹೊತ್ತು ಗಂಜಿಯನ್ನೇ ಕುಡಿಯುತ್ತೀರಾ ?''

ಡಾಕ್ಟರ್ ತಬ್ಬಿಬ್ಬಾದ. ಹುಡುಗಿ ತುಂಬಾ ಧೈರ್ಯಶಾಲಿನಿ ಎಂದು ಮನಗಂಡ. ಅವಳ ಪ್ರಶ್ನೆಗೆ ಏನುತ್ತರ ಕೊಡಬೇಕೆಂದೇ ಅವನಿಗೆ ತೋಚ ಲಿಲ್ಲ. ಮನಸ್ಸಿನ ಈ ಗಲಿಬಿಲಿಯಲ್ಲಿದ್ದಾಗ ಗೋಪಾಲರಾಯರು ಬಂದರು. ಇಕ್ಕಟ್ಟಿನಿಂದ ಪಾರಾದವನಂತೆ ಅವನು ನಿಟ್ಟುಸಿರಿಟ್ಟ. ಆದರೆ ಅವರು ಕಾಫಿ ಕೊಟ್ಟ ಮೇಲೆ "ಕಾಫಿಯೊಂದಿಗೆ ಬ್ರೆಡ್ ಕೊಟ್ಟರೆ ಅಡ್ಡಿಯಿಲ್ಲ'' ಎಂದು ಅವಳಿಗೆ ಕೇಳಿಸುವಂತೆ ನುಡಿದ. "ಇಲ್ಲೆಲ್ಲಿ ಸಿಗಬೇಕು ಡಾಕ್ಟರರೇ ಬ್ರೆಡ್ಡು? ಇಲ್ಲಿ bedಏ ಗತಿ !'' ಎಂದು ಹೇಳಿ ಅವರು ನಕ್ಕರು.

"ಹಂ ! ಹಂ ! ನಿಮಗೆ ಇಂಗ್ಲೀಷ್ ಬರುತ್ತದೆ !''

"ಅಲ್ಪ ಸ್ವಲ್ಪ!''

"ಅಂದರೆ ಎಲ್ಲಿಯ ವರೆಗೆ ಓದಿದ್ದೀರಾ?''

"ಮೆಟ್ರಿಕ್ ವರೆಗೆ !"

"ಹಂ ! ಹಂ! ಹಾಗಾದರೆ ನಿಮಗೆ ಚನ್ನಾಗಿ ಗೊತ್ತಿದೆ !''

"ಅಷ್ಟು ಚೆನ್ನಾಗಿ ಬರುವುದಿಲ್ಲ. ಕಲಿತು ಎಷ್ಟು ವರುಷವಾಯಿತು, ಏನು ಕಥೆ? ಶಾಲೆ ಬಿಟ್ಟು ಸಾಧಾರಣ ಮೂವತ್ತು ವರುಷಗಳಾದರೂ ಆದುವು. ಇಲ್ಲಿ ಬಂದು ಬಾವಿಯೊಳಗಿನ ಕಪ್ಪೆ ಹಾಗೆ ಇದ್ದೇನೆ. ವರುಷ ಒಂದು ಪುಸ್ತಕವನ್ನೂ ಕೈಯಲ್ಲಿ ಹಿಡಿದಿಲ್ಲ. ಈ ಜಮೀನಿನ ಕೆಲಸದಲ್ಲಿ ಅದಕ್ಕೆ ಪುರುಸೊತ್ತು ಸಿಗುವದಿಲ್ಲ. ಹೀಗಾಗಿ, ಕಲಿತದ್ದೆಲ್ಲ ಗುಡ್ಡ ಹತ್ತಿದೆ. ರೂಢಿ ಇದ್ದರೆ ಸರಿ. ಇಲ್ಲದಿದ್ದರೆ ಅದು ಮರೆತು ಹೋಗುವುದೇ ಸೈ. ಅಲ್ಪ ಸ್ವಲ್ಪ ಓದಲಿಕ್ಕೆ ಈಗಲೂ ಬರುತ್ತದೆ. ನೀವು ಮಾತನಾಡಿದರೆ ಅರ್ಥವಾಗು ತ್ತದೆ! ಆದರೆ ವ್ಯಾಕರಣ ಬದ್ಧ ಉತ್ತರ ಕೊಡಲಿಕ್ಕೆ ನಾಲಿಗೆ ಈಗ ಹೊರಳು ವುದಿಲ್ಲ. ಇನ್ನು ಅದರಿಂದ ನಮಗೆ ಆಗಬೇಕಾದರೂ ಏನು ಹೇಳಿ ! ಇಷ್ಟ ಇದ್ದರೆ ನಮ್ಮ ಮಕ್ಕಳು ಕಲಿಯುತ್ತಾರೆ."ಎಂದು ಹೇಳಿ ಗೋಪಾಲರಾಯರು

ಅವರನ್ನು ಮತ್ತೆ ಚಾವಡಿಗೆ ಕರೆದುಕೊಂಡು ಬಂದರು.

ಡಾಕ್ಟರ್ ಮಾತಿನ ಎಳೆಯನ್ನು ಹಿಡಿದು ಕೇಳಿದ: "ಮಕ್ಕಳು ಏನು ಕಲಿಯುತ್ತಿದ್ದಾರೆ?''

ಅವರು ನಕ್ಕು ನುಡಿದರು: "ಮಕ್ಕಳು ಅಂದರೆ ಎಷ್ಟು ಜನಾ ಅಂತಾ ತಿಳಿದುಕೊಂಡಿದ್ದೀರಾ! ಇಬ್ಬರೇ! ಇರುವವರು ಇಬ್ಬರೇ! ಅವ ಅರವಿಂದ ಈ ವರುಷ ಯಸ್. ಯಸ್. ಎಲ್. ಸಿ ಗೆ ಕಟ್ಟಿದ್ದಾನೆ. ಪರೀಕ್ಷೆಯಲ್ಲಿ ಪಾಸಾದರೆ ಮತ್ತೆ ನೋಡಬೇಕು! ಕಾಲೇಜಿಗೆ ಕಳಿಸಬೇಕೆಂಬ ಆಶೆ ಇದೆ. ಅವಳಂತೂ ಹುಡುಗಿ! ಇಲ್ಲೇ ಒಂದು ಶಾಲೆಯಲ್ಲಿ ನಾಲ್ಕೈದು ಕ್ಲಾಸಿನ ವರೆಗೆ ಕಲಿತಿದ್ದಾಳೆ. ಕಥೆ, ಗಿಥೆ, ಕಾದಂಬರಿ ಓದುವಷ್ಟರ ಮಟ್ಟಿಗೆ ಬರುತ್ತದೆ. ಇನ್ನು ಒಂದೆರಡು ವರುಷ 'ಫರ್ಸ್ಟ್ ಫಾರ್ಮ್' ವರೆಗಾದರೂ ಕಲಿಸಬೇಕಂತ ನನ್ನ ಮನಸ್ಸಿನಲ್ಲಿತ್ತು. ಇಲ್ಲಿ ಅದಕ್ಕೆ ಅನುಕೂಲವಿರಲಿಲ್ಲ. ಬೆಳ್ತಂಗಡಿಗೇ ಹೋಗಬೇಕು. ಸಮಾಗಮ ದೂರ! ಆಗಲಿಲ್ಲ. ಕೊನೆಗೆ, "ಸಾಕು! ಯಾರ ಕೈಗಾದರೂ ಹಾಕುವ ಹುಡುಗಿಯಲ್ಲಾ! ಕಲಿತು ಮಾಡುವುದಾದರೂ ಏನು? ಸಾಕು ಇಷ್ಟಕ್ಕೇ" ಎಂದು ಹೇಳಿ ಅಷ್ಟಕ್ಕೇ ನಿಲ್ಲಿಸಿದೆವು'' ಎಂದವರು ಮಾತನ್ನು ಅಲ್ಲೇ ನಿಲ್ಲಿಸಿದರು. ಡಾಕ್ಟರನ ಮೋರೆಯಲ್ಲೊಂದು ಎಳೆನಗು ಮಿಂಚಿ ಮಾಯವಾದುದನ್ನು ಅವರು ಕಾಣಲಿಲ್ಲ. "ಬನ್ನಿ! ಬನ್ನಿ! ಹಟ್ಟಿಕೊಟ್ಟಿಗೆ ತೋರಿಸುತ್ತೇನೆ!'' ಎಂದು ಅವರು ಮತ್ತೆ ಕರೆದೊಯ್ದರು.

ಮನೆಯ ಬಲ ಬದಿಯಲ್ಲಿ ಅಂದರೆ, ತೆಂಕು ದಿಕ್ಕಿನಲ್ಲಿ ಹಟ್ಟಿ! ಮನೆಯಿಂದ ಅಲ್ಲಿಯ ವರೆಗೂ ಅಂಗಳವಿದೆ. ಅದೂ ಒಂದು ಉದ್ದ ಶಾಲೆಯಂತಹ ಕಟ್ಟೋಣ. ಅದರ ಅರ್ಧ ಭಾಗ ಹಟ್ಟಿ. ಅರ್ಧ ಭಾಗ ಬಿಸಿನೀರಿನ ಕೊಟ್ಟಿಗೆ. ಮಧ್ಯ ಗೋಡೆ. ಹಟ್ಟಿಗೆ ಹಿಂಬದಿ ಮಾತ್ರ ಗೋಡೆ. ಇದಿರಿನಲ್ಲಿ ಅರ್ಧಕ್ಕೆ ಗೋಡೆ ಕಟ್ಟಿರುವರು. ಮತ್ತು ಅದರ ಮೇಲೆ ಅಂಕಣ ಅಂಕಣವುಳ್ಳ ಉದ್ದ ಅಡ್ಡ ರೀಪುಗಳನ್ನು ಹೊಡೆದಿರುವರು. ದನಗಳು ನಿಂತರೆ ಅವುಗಳಿಗೆ ಬಗ್ಗದೆ ಹುಲ್ಲು ತಿನ್ನಲು ಅನುಕೂಲವಾಗುವಂತೆ "ಬೈಪಣೆ'' ಯನ್ನು ಕಿರಿಜಗಲಿಯಂತೆ ಸ್ವಲ್ಪ ಎತ್ತರ ಮಾಡಿರುವರು. ಅವುಗಳಿಗೆ ನೀರು, ಅಕ್ಕಚ್ಚು, ಕುಡಿಯಲು ಮಣ್ಣಿನ "ಮರಾಯಿ" ಗಳನ್ನೂ ಎರಡು ಮೂರು ಹುಗಿದಿರುವರು. ಪೇಟೆಯ ಹಾಗೆ ದನ ನಿಲ್ಲುವ ಅಥವಾ ಮಲಗುವ ಸ್ಥಳದಲ್ಲಿ

ಬರಿನೆಲ ಅಥವಾ ಕಲ್ಲುಗಳಿಲ್ಲ. ಮಣ್ಣಿನ ನೆಲದ ಮೇಲೆ ಸೊಪ್ಪುಗಳನ್ನು ಚೆಲ್ಲಿರುವರು. ಮನೆಯವರಿಗೆ ಹಟ್ಟಿಗೆ ಹೋಗಲು ಇದಿರಿನಲ್ಲಿ ಒಂದು ಕಿರಿ ದಾರಿ. ಅದಕ್ಕೆ ಹಲಿಗೆ ಬಾಗಿಲಿಲ್ಲ. "ತೊಡಮೆ"ಯಂತೆ ಅಡ್ಡ ಬಿದಿರನ್ನು ಸಿಕ್ಕಿಸಿರುವರು. ಗೋವುಗಳಿಗೆ ಗುಡ್ಡಕ್ಕೆ ಹೋಗಲು ಪಶ್ಚಿಮದಲ್ಲಿ ದೊಡ್ಡ ಬಾಗಿಲು.

ಬಿಸಿ ನೀರಿನ ಕೊಟ್ಟಿಗೆ ಮಾತ್ರ ಆಕರ್ಷಕವಿದೆ. ಒಳಗೆ ಬಿಸಿ ನೀರಿಗೆ ಎರಡು ದೊಡ್ಡ ತಾಮ್ರದ ಹಂಡೆಗಳನ್ನು ಹುಗಿದಿರುವರು. ಗೋಡೆಯಲ್ಲಿ ಒಂದು ತೂತು ಕೊರೆದು ಸಿಗಿದ ಕಂಗನ್ನು ಪೈಪಿನಂತೆ ಹಾಸಿರುವರು. ಮತ್ತು ಆ ಬಂಬಿನಿಂದ ನೀರು ಹರಿದು ತಾನಾಗಿ ಬಂದು ಹಂಡೆಯೊಳಗೆ ಸುರಿಯುತ್ತದೆ. ಬೇಡದೇ ಇದ್ದಾಗ ಆ ಕಂಗನ್ನು ಸರಿಸಿದರೆ ಸರಿ. ನೀರು ಕೆಳಗೆ ಸುರಿದು ಹರಿದು ಹೋಗುತ್ತದೆ. ಇದನ್ನು ಕಂಡು ಡಾಕ್ಟರ್ ತುಂಬಾ ಆಶ್ಚರ್ಯದಿಂದ "ಭಗೀರಥನ ಹಾಗೆ ಇದೆಲ್ಲಿಂದ ಗಂಗೆಯನ್ನು ಇಲ್ಲಿಯ ವರೆಗೆ ಹರಿಸಿದಿರಾ?" ಎಂದು ಪ್ರಶ್ನಿಸಿದ.

ಗೋಪಾಲರಾಯರು ಮುಗುಳು ನಗೆ ನಗುತ್ತಾ ಹೊರಗೆ ಬಂದು ಮನೆಯ ಹಿಂಬದಿ ಕಡೆ ಕೈ ತೋರಿಸುತ್ತ "ನೋಡಿ! ಆ ಗುಡ್ಡದ ಆಚೆ ಸಣ್ಣ 'ಸಾರ್' ಹರಿಯುತ್ತದೆ. ಬೇಸಿಗೆ ಕಾಲದಲ್ಲಿ ನಾಲ್ಕು ದೊಡ್ಡ ದೊಡ್ಡ ಕಲ್ಲುಗಳನ್ನು ಅಡ್ಡ ಇಟ್ಟು ಒಂದು ಸಣ್ಣ ಕಟ್ಟ ಕಟ್ಟಿದರೆ ಬೇಕಾದಷ್ಟು ನೀರು ಬರುತ್ತದೆ. ಬಾವಿಯಿಂದ ನೀರು ಸೇದುವುದೇ ಬೇಡ'' ಎಂದರು.

"ಮಳೆಗಾಲದಲ್ಲಾದರೂ ಎಳೆಯ ಬೇಕಲ್ಲ'' ಎಂದು ಡಾಕ್ಟರ್ ಮಾತು ಕೂಡಿಸಿದ.

"ಛೇ ! ಛೇ ! ಮಳೆಗಾಲದಲ್ಲೂ ಇಲ್ಲ''

"ಅಂದರೆ ! ನೀವು ಕಟ್ಟಿದ ಅಣೆಕಟ್ಟು ಮಳೆಗಾಲದಲ್ಲಿ ಉಳಿಯುತ್ತದೇನು ? "

" ಇಲ್ಲ ! ಆದರೆ ಆ ಸಾರ್‌ನಲ್ಲೇ ನೆರೆತುಂಬಿ ಹರಿಯುತ್ತದಲ್ಲ ! ಒಂದು ಸಣ್ಣ ಕೈ ಹೋಗುವಷ್ಟು ತೂತನ್ನಷ್ಟು ಬಿಟ್ಟು ನಾವು ಕಾಲಿವೆಯ ಬಾಗಿಲನ್ನು ಮುಚ್ಚಿ ಬಿಡುತ್ತೇವೆ. ಇಲ್ಲದಿದ್ದರೆ ನೆರೆ ನೀರು ಇಲ್ಲಿಯ ವರೆಗೆ ಹರಿದು ಬಂದು ಎಲ್ಲವನ್ನೂ ಕೊಚ್ಚಿಕೊಂಡು ಹೋದೀತು ! ಬೇಸಿಗೆಗೆ

ಕಾಲಿವೆ ನೀರಿನಿಂದ ಇಲ್ಲಿ ಹಸುರುವಾಣಿಯನ್ನು ಬೆಳೆಸುತ್ತೇವೆ" ಎಂದವರು ಹೇಳಿ, ಕೈ ಬೀಸಿ ಆ ಸ್ಥಳವನ್ನು ತೋರಿಸಿದರು. ಒಂದೆಡೆ ಎರಡು ಮೂರು ಸಾಲು ದರಗಳನ್ನು ಮಾಡಿರುವರು. ಅವುಗಳಲ್ಲಿ ಬದನೆ, ಮೆಣಸಿನಕಾಯಿ ಬೇಂಡೆಕಾಯಿ ಸಸಿಗಳಿವೆ. ಇನ್ನೊಂದೆಡೆ ಹಾಗಲಕಾಯಿ ಬಳ್ಳಿ ಒಂದು ಸಣ್ಣ ಚಪ್ಪರದಲ್ಲಿ ಹಬ್ಬಿಕೊಂಡಿದೆ. ಕುಂಬಳ, ಬೂದಿಗುಂಬಳಗಳ ಎರಡು ಸಾಲುಗಳೂ ಇವೆ. ನೆಲದ ಮೇಲೆ ಮರದ ಟೊಂಗೆಗಳನ್ನು ಚೆಲ್ಲಿರುವದರಿಂದ ಅದರ ಮೇಲೆ ಅವುಗಳ ಬೀಳು ಮಲಗಿವೆ. ಒಂದು ಮೂಲೆಯಲ್ಲಿ ಸವುತೆ ಮತ್ತು ಮುಳ್ಳು ಸವುತೆಯ ದರಗಳು. ಅವುಗಳ ಬೀಳೂ ನೆಲದ ಮೇಲೆ ವ್ಯಾಪಿಸಿವೆ. ಬದನೆ, ಹಾಗಲ, ಸವುತೆಗಳೆಲ್ಲ ದೂರದಿಂದಲೇ ಕಾಣುತ್ತಿವೆ. ದನ ಹೊಕ್ಕು ಸೂರೆ ಮಾಡದಂತೆ ಮೂರು ಕಡೆಗಳಲ್ಲೂ ಬೇಲಿ ಹಾಕಿರುವರು. ಒಂದು ಕಡೆ ದರೆ ಇರುವುದರಿಂದ ಅದರ ಅವಶ್ಯಕತೆ ಇಲ್ಲ.

ಅಲ್ಲೇ ಪಕ್ಕದಲ್ಲೇ ಬಾವಿ. ಅಡಿಗೆ ಮನೆಗೂ ಕೊಟ್ಟಿಗೆಗೂ ಅದು ಸಮೀಪ. ಅದಕ್ಕೆ ಸುತ್ತಲೂ ಅರ್ಧ ಆಳು ಎತ್ತರದ ಗಾರೆ ಗೋಡೆ. ನೀರೆಳೆಯಲು ನಿಲ್ಲುವಲ್ಲಿ ಗಚ್ಚು ಹಾಕಿರುವರು. ಮತ್ತು ಬಾವಿ ಕಟ್ಟೆಯಿಂದ ಹರಿದ ನೀರು ಸುಳ್ಳಿ ಗೊಂಡೆ, ಚೆಂಡುಮಲ್ಲಿಗೆ ಸಸಿಗಳನ್ನು ಉಣಿಸುತ್ತದೆ. ಒಂದೆರಡು ಬಾಳೆ, ಅಡಿಕೆ ಗಿಡಗಳೂ ಅಲ್ಲಿವೆ. ಮಜ್ಜಿಗೆ ಸೊಪ್ಪಿನ ಒಂದು ಗಡ್ಡೆ ಇದೆ. ಗುಲಾಬಿ ಮತ್ತು ಸಾಂಬ್ರಾಣಿ ಗಿಡಗಳನ್ನು ಒಡೆದ ಮಡಿಕೆಗಳಲ್ಲಿ ಬೆಳೆಸಿರುವರು. ಗೋಪಾಲರಾಯರು ಅವುಗಳನ್ನೆಲ್ಲ ತೋರಿಸಿ, "ನೋಡಿ! ಈ ತರಕಾರಿ, ಹೂ ಗಿಡಗಳೆಲ್ಲ ನಮ್ಮ ಹುಡುಗಿಯ ಕೆಲ್ಸ''ಎಂದು ಹಿಗ್ಗಿ ಹೇಳಿದರು. ಡಾಕ್ಟರನ ಮೋರೆಯೂ ಅಗಲವಾಯಿತು. ಏನೋ ಹೇಳಬೇಕೆಂದು ಅವನು ಬಾಯ್ದೆರೆದ. ಆದರೆ ಫಕ್ಕನೇ ಮಾತುಗಳನ್ನು ನುಂಗಿ, ಗುಲಾಬಿ ಗಿಡದ ಕಡೆ ತೆರಳಿದ. ಒಂದೇ ಬಾನಿಯಲ್ಲಿ ಎರಡು ಸಸಿಗಳಿದ್ದುವು. ಒಂದೊಂದರಲ್ಲಿ ಒಂದೊಂದು ಹೂವು. ಒಂದು ಹೂವು ಸಂಪೂರ್ಣ ಅರಳಿದೆ. ಅದರ ಪಟಲಗಳು ಕೆಳ ಮುಖವಾಗಿರುವವು. ಇನ್ನೊಂದು ಗುಲಾಬಿ ಈಗ ಅಥವಾ ಇನ್ನೊಂದು ಕ್ಷಣ ಅರಳುವಂತೆ ತೋರುತ್ತಿದೆ. ಅದರ ಸೌಂದರ್ಯವನ್ನು ನೋಡುವವರಂತೆ ಡಾಕ್ಟರ್ ನಿಂತ. "ಬೇಕಾದರೆ ಕೊಯ್ಯಿರಿ'' ಎಂದು ಗೋಪಾಲರಾಯರು ಹೇಳಿದರು. ಈಗ ತಾನೇ ಅರಳಿರುವ

ಗುಲಾಬಿಯನ್ನು ಕೊಯ್ಯಲು ಕೈ ಇಕ್ಕಿದ. ಅದನ್ನು ಚಿವುಟಿದಾಗ ಮತ್ತೊಂದು ಹೂವಿನ ದಲಗಳು ಉದುರಿದುವು. ಅವನ ಕೈಗೆ ಮುಳ್ಳೂ ತಾಗಿತು.

ಗೋಪಾಲರಾಯರು ಸಮೀಪ ಬಂದು ಹೇಳಿದರು: "ಸಾಕಲ್ಲ! ಇನ್ನು ಗದ್ದೆ ಗಿದ್ದೆ ನೋಡಬೇಕಾ? ಈಗೇನು ವ್ಯವಸಾಯ ಇಲ್ಲ. ಬರಿ ಬೋಳು ಗದ್ದೆ."

"ಅದನ್ನೇನು ನೋಡುವುದು ಬೇಡ" ಎಂದು ಡಾಕ್ಟರ್ ಉತ್ತರವಿತ್ತ.

"ಹೌದು. ಮತ್ತೆ ತಡವೂ ಆಗುತ್ತದೆ. ನೀವು ಸ್ವಲ್ಪ ಮೈಗೆ ಎಣ್ಣೆ ಹಚ್ಚಿಕೊಳ್ಳಿರಿ. ಹೋಗೋಣ ಮನೆಗೆ" ಎಂದವರು ಹೊರಳಿ ಮನೆಯ ಹೆಬ್ಬಾಗಿಲಿಗೆ ಬಂದರು. ಅಲ್ಲಿ ನಿಂತು ಮತ್ತೆ ಪೂರ್ವಕ್ಕೆ ಹೊರಳಿ "ನೋಡಿ, ಈ ಇದಿರಿಗಿರುವ ಗದ್ದೆಗಳ ಆಚೆ, ಆ ತಾಳಮರಗಳೂ ಮುಂಡಗೆ ಗಿಡಗಳೂ ಕಾಣುತ್ತಿವೆಯಲ್ಲ, ಅಲ್ಲಿ ನೇತ್ರಾವತೀ ನದಿ ಹರಿಯುತ್ತಿದೆ. ಅದರ ಆಚೆ ಗದ್ದೆ, ಮಲೆ, ತೋಟ, ಪೈರು ಪಚ್ಚೆಗಳಿವೆ. ಕೊನೆಗೆ ಕಾಡು. ಕಾಡಿಗೆ ಹೊಂದಿಕೊಂಡು ಬಲ್ಲಾಳರಾಯನ ದುರ್ಗ. ಈಚೆ ಉತ್ತರದಲ್ಲಿರುವುದು ಎಳ್ನೀರ್ ಘಾಟಿ. ಇದು, ನಮ್ಮ ಮನೆಯ ಹಿಂದೆ ಪಶ್ಚಿಮದಲ್ಲಿ ಮುಗಿಲಿಗೆ ಮುಟ್ಟಿ ನಿಂತಿರುವುದು ಕುದುರೆ ಮುಖ ಪರ್ವತಾವಳಿ" ಎಂದು ವಿವರಿಸಿದರು.

"ಹೂಂ! ಹೂಂ! ಹೂಂ!" ಎಂದು ಡಾಕ್ಟರ್ ಹೂಂಗುಟ್ಟಿದ.

ಅವರು ಕಾಲುಗಳನ್ನು ಕೊಡಹಿಕೊಂಡು ಒಳಗೆ ಹೋದರು.

ಕೈ ಮೈಗೆ ತೆಂಗಿನೆಣ್ಣೆ ಪೂಸಿ, ತಿಕ್ಕಿ, ಅರವಿಂದನ ಕೈಯಿಂದ ತಪ್ಪಲೆ ತಪ್ಪಲೆ ಬಿಸಿ ಬಿಸಿ, ಹಂಡೆ ಬಿಸಿ ನೀರನ್ನು ಹೊಯ್ಯಿಸಿ, ಡಾಕ್ಟರ್ ಬೆವರಿ ಬಸವಳಿದ. ಆಗಲೇ ಅವನ ಕಣ್ಣಿಗೆ ಮಬ್ಬುಗತ್ತಲೆ ಕವಿಯಿತು. ಒಂದೆರಡು ಮೇಲೋಗರ, ಹುರಿದ ಸವುತೆ ಹೋಳಿಗೆ ಬೇಳೆ ಬೆರಸಿ ಮಾಡಿದ ಹುಳಿ, ಹೆಸರು ಬೇಳೆ ಪಾಯಸ, ಮೊಸರಾನ್ನಗಳನ್ನು ಹೊಡೆದ ಮೇಲಂತೂ ತೂಕಡಿಕೆಯೇ ಬಂತು ಮಲಗಿಕೊಂಡವನಿಗೆ ಹೊಡೆದು ಹಾಕಿದವರಂತೆ, ಇಹ ಪರ ಗೋಚರವಿಲ್ಲದ ನಿದ್ದೆ ಬಂತು! ಅವನೊಂದಿಗೆ ಒರಗಿದ್ದ ಗೋಪಾಲ ರಾಯರು ಸಂಜೆಯ ಕಾಫಿ ಹೊತ್ತಿಗೆ ಎದ್ದರು. ಮತ್ತು ಎಲ್ಲ ಸಿದ್ಧವಾದ ಮೇಲೆ ಬಂದು "ಡಾಕ್ಟರ್! ಏಳಿ! ಏಳಿ! ಸ್ವಲ್ಪ ಪೆಟ್ರೋಲ್ ಹಾಕುವಾ! ಏಳಿ" ಎಂದು ಎಬ್ಬಿಸಿದರು. "ಮಧ್ಯಾಹ್ನ ಉಂಡುದುದೇ ಕರಗಿಲ್ಲ. ಮತ್ತೆ

ಒಗ್ಗರಣೆ ಅವಲಕ್ಕಿ, ಬಾಳೆಹಣ್ಣು ಬೇಡ ! ಬರೇ ಒಂದು ಲೋಟಾ ಸ್ಟ್ರಾಂಗ್ ಕಾಫಿ ಸಾಕು'' ಎಂದು ಡಾಕ್ಟರ್ ಎಷ್ಟು ಹೇಳಿದರೂ ಅವರು ಕೇಳಲಿಲ್ಲ. "ಆಯ್ತು ಸ್ವಾಮೀ ! ನಿಮ್ಮ ಮಗಳ ಹಾಗೆ ನೀವು ನನಗೂ ಒಂದು ಹಾಸಿಗೆ ಹಾಸಿ ಕೊಡಬೇಕಾಗುತ್ತದೋ ಏನೋ'' ಎಂದು ಡಾಕ್ಟರ್ ಉಸಿರ್ಗರೆದ. "ಛೇ ! ಛೇ ! ಇದರಿಂದೆಲ್ಲ ಏನಾಗುತ್ತದೆ ? ಎಷ್ಟು ಹೆದರುತ್ತೀರಯ್ಯಾ ನೀವು ! ಈ ವಯಸ್ಸಿಗೆ ಕಲ್ಲು ತಿಂದು ಕರಗಿಸಬೇಕು!" ಎಂದು ಅವರು ಹಾರಿಸಿಕೊಂಡರು. ಕಾಫಿ ಕುಡಿದು ಹೊರಗೆ ಬರುವಾಗ ಪುನಃ ಜ್ವರ ಎಷ್ಟಿದೆ ಯೆಂದು ಡಾಕ್ಟರ್ ನೋಡಿದ.

ರಾತ್ರಿ ಊಟ ಮುಗಿಸಿ ಗಾಡಿ ಕಟ್ಟಲು ಗೋಪಾಲರಾಯರ ವಿಚಾರ. ಮತ್ತು ಹಾಗೆ ನಿಶ್ಚಯಿಸಿ ಅರವಿಂದನನ್ನು ರಾಮುಗೌಡನ ಮನೆಗೆ ಕಳಿಸಿ ಕೊಟ್ಟರು. ಕತ್ತಲೆ ಕತ್ತಲೆ ಬೀಳುವಾಗಲೇ ಅವನೂ ಗಾಡಿ ತಂದು ನಿಲ್ಲಿಸಿದ. ಡಾಕ್ಟರನಿಗೆ ಎಳ್ಳಷ್ಟೂ ಹಸಿವೆಯಿರಲಿಲ್ಲ. ಆದರೆ ಅವರು ಬಿಡುವವರಲ್ಲ. "ಮನೆಯಿಂದ ಹೊರಟು ಹೋಗುವಾಗ ಬರಿ ಹೊಟ್ಟೆಯಲ್ಲಿ ಹೋಗಬಾರದು. ಅದರಿಂದ ನಮಗೆ ಪಾಪ ತಟ್ಟುತ್ತದೆ! ಅಲ್ಲದೆ ರಾತ್ರಿ ಊಟ ಮಾಡದಿದ್ದರೆ ಮನುಷ್ಯನಿಗೆ ಒಂದು ಆನೆಯ ಬಲ ಕಡಿಮೆಯಾಗುತ್ತದಂತೆ! ನಮ್ಮ ತಾಯಿ ಇದ್ದಾಗ ಯಾವಾಗಲೂ ಹೇಳುತಿದ್ದಳು. ಛೇ ! ಛೇ ! ಅದಾಗುವುದಿಲ್ಲ'' ಎಂದು ಆಗ್ರಹ ಹಿಡಿದರು. ಹೀಗಾಗಿ ಅವನು ಅನ್ನ ಮಜ್ಜಿಗೆಯನ್ನು ಸ್ವಲ್ಪ ಉಂಡು ಊಟದ ಶಾಸ್ತ್ರ ಮುಗಿಸಲೇಬೇಕಾಯಿತು.

ಡಾಕ್ಟರನನ್ನು ಗಾಡಿಯಲ್ಲಿ ಕುಳ್ಳಿರಿಸಿ, ಅದು ಹೊರಟ ಮೇಲೆ ಅವರ ಹಿಂದೆ ಸ್ವಲ್ಪ ದೂರ ಗೋಪಾಲರಾಯರು ನಡೆಯುತ್ತ ಬಂದರು. "ಕತ್ತಲಾಯಿತು ! ನೀವಿನ್ನು ಮನೆಗೆ ಹೋಗಿ'' ಎಂದು ಡಾಕ್ಟರ್ ದಾಕ್ಷಿಣ್ಯದಿಂದ ನುಡಿದ. ಅವರು ಸೊಂಟಕ್ಕೆ ಕೈ ಹಾಕಿ ನೋಟುಗಳನ್ನೆಣಿಸಿ "ನಿಮ್ಮ ಚಾರ್ಜ್ ಎಷ್ಟಾಯಿತು ? ತೆಗೆದುಕೊಳ್ಳಿ'' ಎಂದರು. ಡಾಕ್ಟರ್ ಅವರ ಕೈಯನ್ನು ಸರಿಸಿ, "ಬೇಡ! ಬೇಡ ! ಈಗ ನಿಮ್ಮಲ್ಲಿ ಇರಲಿ. ನೀವು ಬೆಳ್ತಂಗಡಿಗೆ ಬರುತ್ತೀರಲ್ಲಾ, ಆಗ ಕೊಡಿ'' ಎಂದು ನುಡಿದು "ಯಾವಾಗ ಬರುತ್ತೀರಿ ?" ಎಂದು ಕೇಳಿ ಮಾತು ಹೊರಳಿಸಿದ.

"ಹುಡುಗಿಗೆ ಕೊಟ್ಟ ಔಷಧ ಇನ್ನೆರಡು ದಿನ ಇದೆ. ಆ ಮೇಲೆ ಔಷ

ಥಕ್ಕಾಗಿ ಹೇಗೂ ಯಾರಾದರೂ ಬರಲೇಬೇಕು. ಅರವಿಂದ ಹೆ ೀಗಿ ಹೋಗಿ ಬೇಸತ್ತಿದ್ದಾನೆ. ಈ ಸಲ ನಾನೇ ಬರುತ್ತೇನೆ. ಔಷಧಕ್ಕೂ ಆಯಿತು. ಸಂತೆಗೂ ಆಯಿತು ಹೇಗೂ ಮಳೆಗಾಲಕ್ಕೆ ಬೇಕಾಗುವ ಸಾಮಾನೆಲ್ಲ ತರಬೇಕು.'' ಎಂದವರು ಉತ್ತರವಿತ್ತರು.

"ಹಾಗಾದರೆ ಸೋಮವಾರ ಸಂತೆ!"

"ಹೌದು! ಆದಿತ್ಯವಾರ ರಾತ್ರಿ ಇಲ್ಲಿಂದ ಗಾಡಿ ಕಟ್ಟುತ್ತೇವೆ.''

"ಸರಿ! ನಮಸ್ಕಾರ''

"ನಮಸ್ಕಾರ''

## ೩ನೇಯ ಅಧ್ಯಾಯ

ಬೆಳ್ತಂಗಡಿ ಮಲೆನಾಡಿನ ಸೆರಗಿನಲ್ಲಿದೆ. ಅಂಗಡಿಗಳ ಸಂಖ್ಯೆ ಬೆಳೆದುದರಿಂದ ಈ ಊರಿಗೆ "ಬೆಳ್ತಂಗಡಿ'' ಎಂಬ ಹೆಸರು ಬಂದಿರಲು ಸಾಕು. ಈಗಲೂ ಅಲ್ಲಿ ಅಂಗಡಿಗಳೇ ಬಹಳ. ಊರಿನ ಮಧ್ಯೆ ಅಂಕು ಡೊಂಕಾಗಿರುವ ರಸ್ತೆಯ ಇಬ್ಬದಿಗಳಲ್ಲೂ ಸಾಧಾರಣ ಅರ್ಧ ಮೈಲು ಉದ್ದದ ವರೆಗೂ ಅಂಗಡಿಗಳು ತಲೆ ಎತ್ತಿವೆ; ಇನ್ನೂ ತಲೆ ಎತ್ತುತ್ತಿವೆ. ಇದನ್ನರಿತರೆ ಈ ಊರಿಗೆ ಈ ಹೆಸರು ಎಷ್ಟು ತಾರ್ತಿಕವೆಂದೆನಿಸುತ್ತದೆ.

ಆದರೆ ಈ ಊರಲ್ಲಿ ಕೇವಲ ಅಂಗಡಿಗಳ ಸಂಖ್ಯೆ ಮಾತ್ರ ಬೆಳೆಯುತ್ತಿದೆಯೆಂದರೆ ಸರಿಯಾಗಲಾರದು. ಇನ್ನಿತರ ಕ್ಷೇತ್ರಗಳಲ್ಲೂ ಇದು ದೊಡ್ಡದಾಗುತ್ತಿದೆ. ಹತ್ತು ಹದಿನೈದು ಮೈಲು ಸುತ್ತು ಮುತ್ತಲಿನ ಮಲೆನಾಡಿನ ಹಳ್ಳಿ ಪಳ್ಳಿಗಳಿಗೆ ಬೆಳ್ತಂಗಡಿಯೇ ದೊಡ್ಡ ಪೇಟೆ ಪಟ್ಟಣ. ವ್ಯಾಪಾರಕ್ಕೆ ಮಾತ್ರವಲ್ಲ, ಇನ್ನಿತರ ವ್ಯವಹಾರಗಳಿಗೂ ಜನ ಬೆಳ್ತಂಗಡಿಗೆ ಬಾರದೆ ಗತ್ಯಂತರವಿಲ್ಲ. ಏಕೆಂದರೆ ಇಲ್ಲಿ ತಂತಿ ಟಪ್ಪಾಲು ಆಫೀಸಿದೆ. ಪೋಲೀಸ್ ಕಚೇರಿ ಇವೆ. ಶಿರಸ್ತೆದಾರನಿದ್ದಾನೆ. ಪ್ಲೀಡರರು ಇಲ್ಲದಿದ್ದರೂ ಗಾಂವಠೀ ವಕೀಲರಿದ್ದಾರೆ. ಮಕ್ಕಳಿಗಾಗಿ ಒಂದು "ಹಾಯರ್ ಎಲಿಮೆಂಟರಿ" ಶಾಲೆ ಸ್ಥಾಪಿಸಲ್ಪಟ್ಟಿದೆ. ದ. ಕ. ಜಿಲ್ಲಾ ಬೋರ್ಡು ಒಂದು ಆಸ್ಪತ್ರೆಯನ್ನು ನಡೆಸಿಕೊಂಡು ಬರುತ್ತಿದೆ. ಊರಿನಲ್ಲೊಂದು ಪಂಚ್ಯಾತ್ ಬೋರ್ಡು ಇದೆ.

ಮಂಗಳೂರು-ಕಡೂರು ರಸ್ತೆ ಈ ಊರಿನ ಮಧ್ಯೆ ಹಾದು ಹೋಗುತ್ತಿದೆ. ಮತ್ತು ಬೆಳ್ತಂಗಡಿ ನಿಲ್ದಾಣೆಯಲ್ಲಿ ಮೋಟಾರುಗಳು ಅರ್ಧ ತಾಸಿನ ವರೆಗೂ ನಿಲ್ಲುತ್ತವೆ. "ಧರ್ಮಸ್ಥಳ"ಕ್ಕೆ ತೆರಳುವ ಜಿಲ್ಲೆಯ ಯಾತ್ರಿಕರು ಬೆಳ್ತಂಗಡಿ ಕಂಡು ಹೋಗದೆ ಬೇರೆ ದಾರಿ ಇಲ್ಲ. ಘಟ್ಟದ ಮೇಲಿನ ಕಳಸ, ಚಿಕ್ಕ ಮಗ ಳೂರು ಇತ್ಯಾದಿ ಸ್ಥಳಗಳ ಕಾಫಿ, ಏಲಕ್ಕಿ, ಚಹಾ ತೋಟಗಳಿಗೆ ಹೋಗುವ ಕೂಲಿಯಾಳುಗಳಿಗೂ ಇದೇ ಹಾದಿ ಅನುಕೂಲ. ಹೀಗಾಗಿ ಊರು ದಿನ ದಿಂದ ದಿನಕ್ಕೆ ಅಭಿವೃದ್ಧಿ ಹೊಂದುತ್ತಿದೆ. ಮುಳಿ ಹುಲ್ಲಿನ ಗುಡಿಸಲುಗಳಿಗೆ ಒಣ ಹುಲ್ಲಿನ ಛಾವಣಿಯಾಗುತ್ತದೆ. ಒಣ ಹುಲ್ಲು ಇದ್ದ ಮನೆಗಳ ಮಾಡು ಕಳಚಿ, ಬಿದಿರು ತೆಗೆದು, ಗೋಡೆ ಏರಿಸಿ, ಪಕ್ಕಾಸ್ ಹಾಕಿ, ಹಂಚು ಹೊದೆ ಸುತ್ತಾರೆ. ಹೊಸ ಹೊಸ ಅಂಗಡಿಗಳಾಗುತ್ತಿವೆ. ಹೊಸ ಹೊಸ ಮನೆಗಳು ರೂಪತಾಳುತ್ತವೆ. ಹೊಸ ಹೊಸ ಜನ ಬರುತಿದ್ದಾರೆ. ಹೊಸ ಹೊಸ ಉದ್ಯೋಗ, ವ್ಯವಸಾಯಗಳನ್ನು ಮಾಡುತ್ತಾರೆ.

ಈ ಡಾಕ್ಟರನೂ ಹಾಗೆಯೇ. ಈ ಊರಿಗೆ ಹೊಸಬ. ೧೯೩೫ರಲ್ಲಿ ಬಂದ. ಒಂದು ಮನೆಯನ್ನು ಹಿಡಿದ. ಕಳೆದ ಆರು ವರುಷಗಳಿಂದಲೂ "ಆನಂದ ಆಸ್ಪತ್ರೆ, ರಜಿಸ್ಟರ್ಡ್ ಮೆಡಿಕಲ್ ಪ್ರಾಕ್ಟೀಶನರ್- ಡಾ|| ಯು. ಆನಂದರಾವ್ ಎಲ್. ಎಮ್. ಪಿ." ಎಂಬ ಹಲಿಗೆ ಮನೆಯ ಹೆಬ್ಬಾಗಿಲಿನ ಮೇಲೆ ತೂಗುತ್ತಿದೆ. ಮನೆ ರಸ್ತೆಗೆ ಸಮೀಪ. ಹಂಚಿನದು. ಆಸ್ಪತ್ರೆಗೆ ತುಂಬಾ ಅನುಕೂಲ. ಬಾಗಿಲಿನ ಇಮ್ಮಗ್ಗುಲುಗಳಲ್ಲಿ ಅರ್ಧಕ್ಕೆ ಮಾತ್ರ ಗೋಡೆ. ಅದರ ಮೇಲ್ಭಾಗಕ್ಕೆ ಕಟ್ಟಿಗೆಯ ಚೌಕಟ್ಟಿನಲ್ಲಿ ಜೋಡಿಸಿದ ಸರ ಳುಗಳು. ಒಳಗಿನಿಂದ ಪರದೆಯನ್ನು ಇಳಿಬಿಡಲಾಗಿದೆ. ಒಳಗೆ ಈ ಗೋಡೆಗೆ ತಾಗಿ ಎರಡು ಒರಗುವ ಬೆಂಚುಗಳನ್ನಿಡಲಾಗಿದೆ. ಪಕ್ಕದಲ್ಲೇ ಒಂದು ದೊಡ್ಡ ಮೇಜು. ಡಾಕ್ಟರನಿಗೆ ಕುಳಿತುಕೊಳ್ಳಲು ತಿರುಗುವ ದುಂಡಗಿನ ಕುರ್ಚಿ. ಅವನ ಇದಿರಿಗೆ ಬೇರೆ ಎರಡು ಮೂರು ಕುರ್ಚಿಗಳಿವೆ. ಔಷಧಗಳ ಒಂದು ಕಪಾಟು ಡಾಕ್ಟರನ ಹಿಂಬದಿ ಇದೆ. ಅದಕ್ಕೆ ಗಾಜಿನ ಬಾಗಿಲು. ಆದುದರಿಂದ ಮೇಲಿನ ಖಾನೆಗಳಲ್ಲಿಟ್ಟ ಔಷಧದ ಬಾಟ್ಲಿಗಳೂ ಕೆಳ ಅಂತ ಸ್ತಿನಲ್ಲಿಟ್ಟ ಚೂರಿ, ಕತ್ತರಿ, ಇಕ್ಕುಳ ಇತ್ಯಾದಿ ಶಸ್ತ್ರಾಸ್ತ್ರಗಳೂ ಕಣ್ಣಿಗೆ ಕಾಣಿಸುತ್ತವೆ. ಅದರ ಹಿಂಬದಿ ರೋಗಿಗಳ ಗುಪ್ತ ಪರೀಕ್ಷೆ ಮಾಡಲು

ವ್ಯವಸ್ಥೆ ಇದೆ. ಔಷಧ ಕೊಡುವ ಏರ್ಪಾಡು ಅವನ ಬಲಮಗ್ಗುಲಿಗೆ. ಮುಮ್ಮೂಲೆಯ ಒಂದು ಕೋಣೆಯನ್ನು ಅದಕ್ಕಾಗಿ ನಿರ್ಮಿಸಲಾಗಿದೆ. ಒಂದೆಡೆ ಕಪಾಟುಗಳನ್ನು ತಿರುವಿ ಇಟ್ಟಿರುವರು. ಔಷಧಗಳು ಅವರ ಆಚೆ ಮಗ್ಗುಲಲ್ಲಿವೆ. ಕಂಪೌಂಡರನಿಗೆ ಔಷಧ ಕೊಡಲು ಅನುಕೂಲವಾಗುವಂತೆ ಇದಿರಿಗೆ ಕೆಲವು ಹಲಿಗೆಗಳನ್ನು ಎದೆಯಷ್ಟು ಎತ್ತರ ನಿಲ್ಲಿಸಿ, ಒಂದು ತೂತನ್ನು ಕೊರೆದಿರುವರು. ರೋಗಿಗಳು ಚೀಟಿ ಮತ್ತು ಬಾಟ್ಲಿಗಳನ್ನು ಈ ತೂತಿನೊಳಗೆ ಕೈ ಹಾಕಿ ಕೊಡಬೇಕು. ದುಡ್ಡು ಕೊಡುವುದೂ ಕಂಪೌಂಡ ರನಿಗೇ.

ಮಲೆನಾಡಿನ ಎಷ್ಟೋ ಹಳ್ಳಿಗಳಲ್ಲಿರುವ ಅನೇಕ ಜನರಿಗೆ ಬೆಳ್ತಂಗಡಿ ಯಲ್ಲೊಂದು ಸರಕಾರೀ ಆಸ್ಪತ್ರೆ ಇವೆಯೆಂದೂ ಗೊತ್ತಿಲ್ಲ. ಗೊತ್ತಿದ್ದ ಜನ ರಲ್ಲಿ ಅನೇಕರು ಔಷಧಕ್ಕಾಗಿ ಬರುವುದೂ ಇಲ್ಲ. ಕುಗ್ರಾಮಗಳಲ್ಲಿ ಭೂತ, ಪ್ರೇತ, ಪಿಶಾಚಿ, ಕಲ್ಲುರು,ಟಿ ಕಲ್ಕುಡ ದೈವ ದೇವರ ಉಪದ್ರ ಎಂದು ನಂಬುವ ಅಜ್ಞ ಜನರೇ ಬಹಳ. ಹತ್ತು ಹನ್ನೆರಡು ಮೈಲು ನಡೆಯಲಾರದೆ ಕೆಲವರು ನೆರೆ ಹೊರೆಯಲ್ಲಿರುವ ವೈದ್ಯರಿಂದ ನಾರು ಬೇರು ತೆಗೆದುಕೊಳ್ಳು ವುದೂ ಇದೆ. ಒಮ್ಮೆ ಬಂದವರು ಎರಡನೇಯ ಸಲ ಬರುವುದು ವಿರಳ.

ಮುನಿಸಿಪಾಲಿಟಿ, ಜಿಲ್ಲಾ ಬೋರ್ಡು ಅಥವಾ ಸರಕಾರೀ ಆಸ್ಪತ್ರೆ ಗಳಲ್ಲಿ ಸಾಮಾನ್ಯ ಜನರನ್ನು ಆದರದಿಂದ ಕಾಣುವವರು ಕಡಿಮೆ. ಕ್ಷಯ ಅಥವಾ ಕುಷ್ಠ ರೋಗಿಗಳನ್ನು ಕಂಡವರಂತೆ ಸಾಮಾನ್ಯರನ್ನು ಮುರಮುರನೆ ನೋಡಿ ಎಲ್ಲರೂ ದೂರ ಸರಿಯುತ್ತಾರೆ. ಡಾಕ್ಟರ್ ಹೊತ್ತಿಗೆ ಸರಿಯಾಗಿ ಚಿಕಿತ್ಸೆ ಸಲಾರ. ಬಂದ ಮೇಲೆ ಎಲ್ಲರೊಂದಿಗೆ ಆಸ್ಪತ್ರೆ, ರೋಗಿಗಳ ವಾರ್ಡು ಕಂಪೌಂಡ್‍ಗಳಲ್ಲಿ ದಿನಂಪ್ರತಿ ಅವನು ಮೆರವಣಿಗೆ ಹೋಗಬೇಕು. ಅವನು ಬರುವ ವರೆಗೆ ತಾಸುಗಟ್ಟಲೆ ಕಾಯಬೇಕು. ಸರ್ತಿ ಬರುವ ವರೆಗೆ ನಿಲ್ಲ ಬೇಕು. ಡಾಕ್ಟರ್ ಕಣ್ಣೆತ್ತಿ ನೋಡುವುದೂ ಇಲ್ಲ ಕುಳಿತಲ್ಲಿಂದ ಏಳುವುದೂ ಇಲ್ಲ. ರೋಗಿಗಳು ಬಹಳ! ಪರೀಕ್ಷೆ ಮಾಡಲು ಅವನಿಗೆ ಸಮಯ ಸಿಗುವು ದಿಲ್ಲ! ಆದುದರಿಂದ ಒಂದು ಕೈಯನ್ನೂರಿ ಆ ಮುಷ್ಟಿಯ ಮೇಲೆ ಗಲ್ಲವ ನ್ನಿಟ್ಟು "ನಿನಗೆ ಏನಾಗಿದೆ? ನಾಲಿಗೆ ತೋರಿಸು'' ಎಂದು ಕೇಳುತ್ತಾನೆ ಎಲ್ಲರಿಗೂ ಅದೇ ಯಾಂತ್ರಿಕ ಪ್ರಶ್ನೆ! ಆ ಎರಡೇ ಮಾತು. ಮೂರನೇ

ಮಾತು ಆಡಲಾರ. ಒಮ್ಮೊಮ್ಮೆ ಜನರ ತುಳು, ಕನ್ನಡ, ಕೊಂಕಣಿ ಭಾಷೆ ಡಾಕ್ಟರನಿಗೂ ಅವನ "ಇಬ್ಲಿಷ್'' ಅವರಿಗೂ ಅರ್ಥವಾಗುವುದಿಲ್ಲ. ಆಗ "ಟಣ್" ಎಂದು ಗಂಟೆಯ ಮೇಲೆ ಕೈ ಬಡಿಯುತ್ತಾನೆ. ಕಂಪೌಂಡರ್ ಒಳಗಿಂದ ಧಾವಿಸಿ ಬಂದು ತರ್ಜುಮೆ ಮಾಡಿ ಹೇಳುತ್ತಾನೆ. ಡಾಕ್ಟರ್ ಬರೆದ ಚೀಟಿ ಅರ್ಥವಾಗದೆ ಕಂಪೌಂಡರ್ ತಾನಾಗಿ ಪುನಃ ಪುನಃ ಡಾಕ್ಟರನಲ್ಲಿ ಓಡಿ ಬರುವುದೂ ಇದೆ. ಗಳಿಗೆ ಗಳಿಗೆಗೊಮ್ಮೆ ನಗುಮುಖಿಯಾದ ದಾದಿ ಕಂಪೌಂಡರನ ಕೋಣೆಗೆ ನುಸುಳಿ ಏನೇನೋ ಕೇಳಿ ನಕ್ಕು ನಗಿಸುತ್ತಾಳೆ! ಹೀಗಾಗಿ ಔಷಧ ಸಿಗಬೇಕಾದರೂ ಬಹಳ ಹೊತ್ತು ಬೇಕಾಗುತ್ತದೆ. ಆಸ್ಪತ್ರೆಗೆ ಬಂದರೆ ಒಪ್ಪತ್ತು ಅಥವಾ ಒಂದು ದಿನ ವ್ಯರ್ಥವಾಗುತ್ತದೆ.

ಆ ಔಷಧಗಳ ಮೇಲೂ ಜನರ ಭರವಸೆ ಇಲ್ಲ. "ಎಲ್ಲರೂ ಕಳ್ಳರು! ಸರ್ಕಾರೀ ದುಡ್ಡು, ಔಷಧಗಳನ್ನು ಎತ್ತಿ ಹಾಕುತ್ತಾರೆ! ತಂತಮ್ಮ ಮನೆ ಮಂದಿ, ಬಂಧು-ಬಳಗ, ಜಾತಿ ಪ್ರೀತಿ, ಇಷ್ಟ ಮಿತ್ರರಿಗೆ ಒಳ್ಳೇ ಔಷಧಿ ಕೊಡುತ್ತಾರೆ. ಇಂಜೆಕ್ಶನ್ ಮಾಡುತ್ತಾರೆ. ಸಾಮಾನ್ಯ ಜನರಿಗೆ ಬಣ್ಣದ ನೀರು! ಎಲ್ಲ ರೋಗಗಳಿಗೂ ಅದೇ ದಿವ್ಯೌಷಧ.! ಯಾವಾಗ ಹೋದರೂ ಅದೇ ಬರಿನೀರು! ಮುಲಾಮು, ಭೇದಿ, ಗುಳಿಗೆಗಳನ್ನು ಬಿಟ್ಟರೆ ಆಸ್ಪತ್ರೆಯಲ್ಲಿ ಬೇರೆ ಔಷಧವಿಲ್ಲ!'' ಎಂದು ಜನರು ಆಡಿಕೊಳ್ಳುವರು. ಇಂತಹ ಆಸ್ಪತ್ರೆಗಳ ಮೇಲೂ ಜನರ ವಿಶ್ವಾಸ ಹಾರಿಹೋಗಿದೆ. "ಹಣ ಹೋದರೂ ಚಿಂತಿಲ್ಲ, ಗುಣವಾಗಲಿ" ಎಂಬ ಆಶೆಯಿಂದ ಅವರು ಆನಂದ ರಾಯನಂತಹ ಖಾಸಗಿ ಡಾಕ್ಟರನಿದ್ದಲ್ಲಿ ಪರಸೆಯಂತೆ ನೆರೆಯ ತೊಡಗಿದರು.

ಆನಂದರಾಯನೂ ಬಂದ ಆರಂಭದಲ್ಲಿ ಅಮಿತ ಉತ್ಸಾಹದಿಂದ ದುಡಿದ. ಯಾವಾಗಲೂ ಹಸನ್ಮುಖಿ. ಎಲ್ಲರೊಡನೆಯೂ ನಯವಿನಯದ ಮಾತುಗಳು. ಎಲ್ಲರಿಗೂ ಬಹು ವಚನ! ಹಳ್ಳಿ ರೈತರು ಬರಲಿ, ಘಟ್ಟಕ್ಕೆ ತೆರಳುವ ಆಳುಗಳು ಬರಲಿ, ಕೈ ಹಿಡಿದು ತಂದು ಬೆಂಚುಗಳ ಮೇಲೆ ಕುಳ್ಳಿರಿಸುತ್ತಿದ್ದ. ಮಕ್ಕಳ ಮೇಲೆ ಅವನಿಗೆ ಬಹಳ ಮಮತೆ! ಸಣ್ಣ ಹುಡುಗಿಯರು ಬಂದಾಗ ತಲೆಪೂಸಿ, ಅವಳ ತಾಯಿ ತಂದೆ, ಶಾಲೆಗಳನ್ನು ವಿಚಾರಿಸುತ್ತಿದ್ದ ಸ್ತ್ರೀಯರ ಮೇಲೂ ಅವನು ವಿಶೇಷ ಗಮನಕೊಟ್ಟ. ಮೊದಲು, ಅವರಿಗ ಔಷಧ ಕೊಟ್ಟು ಕಳಿಸುವುದು ಅವನ ಪದ್ಧತಿ. ಮತ್ತು ನಾರಾಯಣ ಸಣ್ಣ

ವನಾಗಿದ್ದುದರಿಂದ ಸ್ವತಃ ತಾನೇ ಕಂಪೌಂಡರ್ ಕೆಲಸ ಮಾಡಿದ. ಊಟದ ಹೊತ್ತಾಯಿತೆಂದು ಇದ್ದ ರೋಗಿಗಳನ್ನು ಪರೀಕ್ಷೆಮಾಡದೆ ಹೋಗಲಾರ. ಹಗಲಿಗಾದರೂ ಸರಿಯೆ, ರಾತ್ರಿಯಾದರೂ ಸರಿಯೆ, ಯಾರಾದರೂ ಕರೆಯಲು ಬಂದಾಗ ತಕ್ಷಣ ಹೊರಟ. ಅರ್ಧ ಊಟದಿಂದ ಎದ್ದು ಕೈತೊಳೆದು ಕೊಂಡು ಹೋದುದೂ ಇದೆ. ಅರ್ಧ ರಾತ್ರಿಯಲ್ಲಿ ಹೋದುದೂ ಇದೆ. ಅದು ಬೆಳ್ತಂಗಡಿ ಪೇಟೆಯಲ್ಲೇ ಇರಲಿ, ಹತ್ತು ಮೈಲುಗಳಾಚೆ ಇರುವ ಬಂಗಾಡಿ ಪೇಟೆಯಲ್ಲೇ ಇರಲಿ, ಒಲ್ಲೆನ್ನುತ್ತಿರಲಿಲ್ಲ. ಕರೆಯಲು ಬಂದವರು ಯಾರು? ಶ್ರೀಮಂತರೇ ? ಬಡವರೇ ? ಹೆಂಗಸೇ ? ಮಗುವೇ ? ಎಂಬುದನ್ನೂ ನೋಡುತ್ತಿದ್ದಿಲ್ಲ. "ಅವರು ಯಾವ ಜಾತಿ" ಎಂದು ಕೇಳಲಾರ. "ಎಷ್ಟು ಕೊಡುತ್ತೀರಿ?" ಎಂದು ಕೇಳಿ ಮೊದಲೇ ಕರಾರು ಹಾಕಲಾರ. ಯಾರು ಯಾರು ಎಷ್ಟೆಷ್ಟು ಕೊಟ್ಟರೋ ಅಷ್ಟನ್ನೇ ಸ್ವೀಕರಿಸಿದ. "ಇಷ್ಟುಕೊಡಿ ! ಇಟ್ಟು ಬಿಡಿ''! ಎಂಬವನಲ್ಲ. ಹೀಗಾಗಿ ಡಾಕ್ಟರ್ ಆನಂದರಾಯ ತುಂಬಾ ಪ್ರಸಿದ್ಧನಾದ. "ಎಂತಹ ಡಾಕ್ಟರ್! ಎಂತಹಮನುಷ್ಯ! ಎಂತಹನಿರ್ಮಲಾಂತಃ ಕರಣ! ಏನುಗುಣ ! ಎಷ್ಟು ಒಳ್ಳೇ ಕೈಗುಣ !'' ಎಂದು ಎಲ್ಲರೂ ಹೊಗಳುವವರೇ. ಅವನ ಹೆಸರು ಸುತ್ತು ಮುತ್ತಲಿನ ಹಳ್ಳಿ ಪಳ್ಳಿಗಳಿಗೆಲ್ಲ ವ್ಯಾಪಿಸಿತು. ಪ್ರೀತಿಯಿಂದ ಕೀರ್ತಿ, ಕೀರ್ತಿಯಿಂದ ಸಂಪತ್ತೂ ಬರತೊಡಗಿತು.

ಅಷ್ಟರಲ್ಲಿ ಯುದ್ಧ ಆರಂಭವಾಯಿತು. ಅದರ ಬಿರುಗಾಳಿ ಆನಂದ ರಾಯನಿಗೂ ಬಡಿಯಿತು. ಔಷಧಗಳ ಬೆಲೆ ಏರಿತು. ಏಕೆಂದರೆ ಯುದ್ಧದ ದೆಸೆಯಿಂದ ಇಂಗ್ಲೆಂಡ್, ಜರ್ಮನಿ, ಇತ್ಯಾದಿ ಪಶ್ಚಿಮ ದೇಶಗಳಿಂದ ಆಮದಾಗುತ್ತಿದ್ದ ಔಷಧಗಳೂ, ಇಂಜೆಕ್ಷನ್‌ಗಳೂ ಬರಲಿಲ್ಲ. ಹಡಗುಗಳ ಓಡಾಟವೇ ನಿಂತಿತು ಅಥವಾ ಕಡಿಮೆಯಾಯಿತು. ಹೆಚ್ಚಾಗಿ ನಮ್ಮ ದೇಶದಲ್ಲಿ ಡಾಕ್ಟರರು ಉಪಯೋಗಿಸುವುದು ಅಂತಹ ವಿದೇಶೀ ಔಷಧಗಳನ್ನೇ. ಅಂತಹ ಹಲವಾರು ಔಷಧಗಳು ಇಲ್ಲಿ ಸಿದ್ಧವಾಗುತ್ತಿವೆಯಾದರೂ ಕೊಳ್ಳುವವರು ಅತಿ ವಿರಳ. ಜನರಿಗೂ ಪರದೇಶಿ ಅಂದರೆ ಖಾತ್ರಿ ಬಹಳ; ಮೋಹ ಹೆಚ್ಚು. ಆದರೆ ಈಗ ಅವು ಸ್ವಲ್ಪಮಟ್ಟಿಗೆ ಅಲಭ್ಯವಾದುವು. ಇದ್ದವುಗಳ ಬೆಲೆ ಕಂಡಾಬಟ್ಟೆ. ಆದುದರಿಂದ ಆನಂದರಾಯನೂ ತನ್ನ ಕಪಾಟುಗಳಲ್ಲಿ ತುಂಬಿದ್ದ ಸೀಸೆಗಳನ್ನು ಒಳಗಿನ ಕೋಣೆಗಳಲ್ಲಿಟ್ಟು ಬೀಗ ಹಾಕಿದ. ದೇಶೀ ಔಷಧ,

ಇಂಜೆಕ್ಷನ್‍ಗಳನ್ನೇ ವಿದೇಶಿ, ಜರ್ಮನ್ ಎಂದು ಚುಚ್ಚಿದ. ಮೊದಲಿನಂತೆ ಯದ್ವಾ ತದ್ವಾ ಔಷಧ ಕೊಡುವಂತೆಯೂ ಇಲ್ಲ. ಔಷಧದ ದರ ವಿಸಿಟ್ ಫೀಗಳನ್ನೆಲ್ಲ ಏರಿಸಿದನೇ! ಅಲ್ಲದೆ ಎಲ್ಲ ನಗದೀ ವ್ಯವಹಾರಕ್ಕೇ ಬಂದು ಮುಟ್ಟಿತು. ಡಾಕ್ಟರಿಕೆಯೂ ಒಂದು ವ್ಯಾಪಾರವಾಗಿಯೇ ಪರಿಣಮಿಸಿತು.

ಹಾಗಿದ್ದರೂ ಜನ ಬರುವುದನ್ನು ನಿಲ್ಲಿಸಲಿಲ್ಲ. ಜನರಲ್ಲಿ ದುಡ್ಡು ಇದೆ. ಯುದ್ಧದಿಂದಾಗಿ ಮಜೂರರಿಗೆ ದಿನಗೂಲಿ ಹೆಚ್ಚಾಗಿದೆ. ಸರಕಾರೀ ನೌಕರರಿಗೆ ಸಂಬಳದೊಂದಿಗೆ ಭತ್ತೆ ಕೂಡಾ ಕೊಡತೊಡಗಿದರು. ತಮ್ಮಲ್ಲಿದ್ದ ಹಳೇ ಮಾಲುಗಳ ಸಂಗ್ರಹವನ್ನೇ ಏರಿದ ಬೆಲೆಗೆ ಮಾರಿ, ವ್ಯಾಪಾರಸ್ಥರು ತಮ್ಮ ಹೊಟ್ಟೆಯನ್ನು ಬೆಳೆಸಿಕೊಂಡರು. ಅಡಿಕೆ, ಅಕ್ಕಿ, ಏಲಕ್ಕಿಗಳ ಕ್ರಯವಂತೂ ದಿನದಿಂದ ದಿನಕ್ಕೆ ಅನಿಶ್ಚಿತ! ಅಡಿಕೆಗೆ ಖಂಡಿಗೆ ಐದು ನೂರು ರೂಪಾಯಿ! ಏಲಕ್ಕಿಗೆ ಅದರ ಕಾಳಿನಷ್ಟೇ ರೂಪಾಯಿಗಳನ್ನು ಎಣಿಸಿದರೆ ಸುಳ್ಳಲ್ಲ! ಎರಡು, ಮೂರು ರೂಪಾಯಿಗಳಿದ್ದ ಮುಡಿ ಅಕ್ಕಿಗೆ ಇಪ್ಪತ್ತು ಮೂವತ್ತು ಆಯಿತು! ಒಂದು ಮಳೆಗಾಲದಲ್ಲಂತೂ ಅದು ಐವತ್ತು ರೂಪಾಯಿಗೆ ಮುಟ್ಟಿತು! "ರೈತರ ಕೈಯಲ್ಲಿ, ಜಮೀನುದಾರರ ಕೈಯಲ್ಲಿ, ಸರಕಾರೀ ಆಫೀಸರರ ಜೇಬುಗಳಲ್ಲಿ ಹಣ ಚೆಲ್ಲಾಡುತ್ತದೆ! ಅಂದಬಳಿಕ ಕೊಡಲೇನು ಧಾಡಿ?" ಎಂದು ಡಾಕ್ಟರ್ ಆನಂದರಾಯನು ಹೇಳುವುದರಲ್ಲೇನು ಆಶ್ಚರ್ಯ! ಕೊಡಲು ಅವರು ಸಿದ್ಧರಿರುವುದು ಸಹಜವೇ ಆಗಿದೆ. ಅಲ್ಲದೆ ಕೊಡುವುದಿಲ್ಲ. "ನಮಗೆ ಡಾಕ್ಟರನ ಸಂಗ ಸಂಪರ್ಕ ಬೇಡ" ಎಂದು ದೂರ ಇರಲೂ ಅಸಾಧ್ಯವಾಗಿದೆ. ಯುದ್ಧವಿದೆಯೆಂದು ರೋಗಗಳು ನಿಲ್ಲುತ್ತವೆಯೇ? ಯುದ್ಧ ರೋಗಗಳ ವಿರುದ್ಧವೇನಲ್ಲ! ಮನುಷ್ಯ ಜೀವನದಲ್ಲಿ ರೋಗ ಬಾಧೆ ತಪ್ಪಿದ್ದಲ್ಲ. ಮಗು, ಮುದುಕ, ಸ್ತ್ರೀ ಪುರುಷ, ಬಡವ ಬಲ್ಲಿದ ಎಲ್ಲರೂ ಒಂದೇ! ಅದಕ್ಕೆ ಸಜ್ಜನರೆಂದಿಲ್ಲ. ದುರ್ಜನರೆಂದೂ ಇಲ್ಲ. ಒಮ್ಮೆ ಬಂದು ಹೋದ ಮೇಲೆ ಮತ್ತೆ ಬಾರದೆಂಬ ಕಟ್ಟು ನಿಟ್ಟುಗಳೇನೂ ಇಲ್ಲ. ಶೀತೋಷ್ಣಗಳಂತೆ ಎಲ್ಲ ಜೀವಿಗಳಿಗೂ ಎಲ್ಲ ಕಾಲದಲ್ಲೂ ಅವು ಪೀಡೆ ಕೊಡುತ್ತವೆ. ಅಂತಹ ಸಂದರ್ಭಗಳಲ್ಲಿ ಶರೀರದೊಂದಿಗೆ ಮಾನವನ ಮನಸ್ಸೂ ದುರ್ಬಲವಾಗುತ್ತದೆ. ಈ ಔಷಧದಿಂದಾಗದಿದ್ದರೆ ಆ ಔಷಧ, ಸರಕಾರೀ ಆಸ್ಪತ್ರೆ ಅಲ್ಲದಿದ್ದರೆ ಆನಂದ ಆಸ್ಪತ್ರೆ ಎಂದು ಜನ ಹುಡುಕಿ ಓಡಿ ಬರುವರು. ಜೇ(

ಸಮಯ ಚಿಕ್ಕಾಸು ಬಿಚ್ಚದ ಕಡು ಲೋಭಿಯೂ ಆಗ ಪ್ರಾಣದಾಸೆಯಿಂದ ಕೈ ಬಿಚ್ಚಿ ವೆಚ್ಚ ಮಾಡಲು ಹಿಂದು ಮುಂದು ನೋಡುವುದಿಲ್ಲ. ಆದುದ ರಿಂದ ಹಲ್ಲಿದ್ದಾಗಲೇ ಹುರಿಗಡಲೆ ಎಂಬಂತೆ ಡಾಕ್ಟರ್ ಆನಂದರಾಯನೂ ಹಣದ ಕಡೆ ನೋಡತೊಡಗಿದ. ಹಣ ಗುಣ ನುಂಗಿತು !

ಲಕ್ಷ್ಮಿ ಒಲಿದಂದಿನಿಂದ ಅವನ ರಸನೆಯಲ್ಲಿ ಸದಾ ಸೂಸುತಿದ್ದ ನಯ ವಿನಯದ ರಸ ಬತ್ತಿ ಹೋಯಿತು. ನಾಣ್ಯದ ಕಾಠಿನ್ಯ, ಅವನ ಹೃದಯವನ್ನು ಕವಚದಂತೆ ಆವರಿಸಿತು. ರೂಪಾಯಿಯ ಗುಣ ಪರೀಕ್ಷೆ ಮಾಡಲು ನೆಲದ ಮೇಲೆ ಬಡಿದು ನೋಡಿದಾಗ ಅದು "ಟಣ್ ಟಣ್" ನುಡಿಯುತ್ತದೆ. ಐಶ್ವರ್ಯವಂತರ ಮಾತೂ ಹಾಗೆಯೇ, ಟಣ ಟಣ! ಆ ಗರ್ವ ಆನಂದರಾಯನ ತಲೆಗೇರಿದೆ. ಲಕ್ಷ್ಮಿಯ ಚಾಂಚಲ್ಯ ಅವನ ಮನಸ್ಸನ್ನು ಹೊಕ್ಕಿತು. ಮನುಷ್ಯನ ನೆರಳಿನಂತೆ, ಸಿರಿಯೊಂದಿಗೆ ಇಂದ್ರಿಯ ಸುಖಾ ಪೇಕ್ಷೆ ಅವನ ಬೆಂಬತ್ತಿತು. ಶ್ರೀಮಂತಿಕೆಯ ಶಾಪಗಳಾದ ಆಲಸ್ಯ ಮತ್ತು ವಿಲಾಸ ಅವನ ಜೀವ ಜೀವನದಲ್ಲಿ ಹಾಸು ಹೊಕ್ಕಾಯಿತು !

ಆರು ವರುಷಗಳಲ್ಲಿ ಎಂತಹ ಬದಲಾವಣೆ! ಅದು ಅವನ ವೇಷ ಭೂಷಣಗಳಲ್ಲಿ ಕೂಡಾ ಎದ್ದು ಕಾಣುತ್ತದೆ. ಬಂದಾಗ ಧೋತರ, ಅಂಗಿ, ಕೋಟು, ಚಪ್ಪಲಿಗಳನ್ನು ತೊಡುತಿದ್ದ. ಒಮ್ಮೊಮ್ಮೆ ಧೋತರದ ಬದಲು ಪೈಜಾಮು ಅಥವಾ ಲುಂಗಿ ಧರಿಸುತಿದ್ದ. ಬಟ್ಟೆಗಳನ್ನು ಅವನೇ ಒಗೆಯು ತಿದ್ದಂತೆ ತೋರುತ್ತದೆ. ಏಕೆಂದರೆ ಇಸ್ತ್ರಿಯ ಮಡಿಕೆಗಳಿದ್ದಂತಿಲ್ಲ. ಕೋಟನ್ನು ತಾನೇ ತೊಳೆದು ಇಸ್ತ್ರಿಗೆ ಕೊಡುತ್ತಿದ್ದ. ಕೋಟೂ ಅದೊಂದೇ ! ಏಕೆಂದರೆ ಅವನು ಬದಲಿಸಿದುದನ್ನು ಯಾರೂ ಕಂಡಿಲ್ಲ. ಅದನ್ನು ಕುರ್ಚಿಯ ಹಿಂಬದಿ ಹಾಕಿ, ಬರಿ ಧೋತರ ಅಥವಾ ಲುಂಗಿ ಅಂಗಿ ಧರಿಸಿ, ಅವನು ತನ್ನ ಆಸ್ಪತ್ರೆಯಲ್ಲಿ ಕುಳಿತಾಗ ಸಣ್ಣ ಹುಡುಗನಂತೆ ಕಾಣು ತ್ತಿದ್ದ. ಹೌದು ಮತ್ತೆ ! ಹುಡುಗನೇ ! ಏಕೆಂದರೆ ಆಗ ಅವನಿಗೆ ಬಹಳ ಎಳೆ ಪ್ರಾಯ. ಇಪ್ಪತ್ತೈದರ ಒಳಹೊರಗೆ. ತೆಳು ಶರೀರ; ಉದ್ದವಾದ ಕೈಕಾಲುಗಳು. ಮುಖ ಕೂಡಾ ಅಗಲಕ್ಕಿಂತ ಸ್ವಲ್ಪ ಉದ್ದವೇ. ಪಠಾಣ ರಂತಹ ಉದ್ದ ತಲೆಗೂದಲು. ಹೊಸತಾಗಿ ಅವನ ಆಸ್ಪತ್ರೆಗೆ ಬಂದವರು ಕುರ್ಚಿಯಲ್ಲಿ ಕಾಲೇಜ್ ಹುಡುಗನಂತಹ ವ್ಯಕ್ತಿ ಕುಳಿತಿರುವವನ್ನು ಕಂಡು

ಡಾಕ್ಟರನ ಮಗನಿರಬೇಕೆಂದೇ ಭಾವಿಸಿ "ಡಾಕ್ಟರರು ಇಲ್ಲೇನ್ರೀ ?'' ಎಂದು ಕೇಳುತಿದ್ದುದೂ ಉಂಟು. ಆಗ ಆನಂದರಾಯನು "ನಾನೇರೀ ! ನಾನೇ ಡಾಕ್ಟರ್ ! ನನ್ನಪ್ಪನಲ್ಲ !" ಎಂದು ಹೇಳಿ ಗಹಗಹಿಸಿ ನಕ್ಕು, ಅವರನ್ನು ನಗೆಗಡಲಿನಲ್ಲಿ ತೇಲಿಸುತಿದ್ದ.

ಆದರೆ ಈಗ ? ಈಗ ಎಲ್ಲರಿಗೂ ಹಾಗೆ ಕೇಳಲು ಧೈರ್ಯ ಸಾಲದು. ಲುಂಗಿ ಅಂಗಿಗಳ ಬದಲು, ಕೋಟು ಪ್ಯಾಂಟುಗಳ ಅವತಾರವಾಗಿದೆ. ಶಿವನ ಕೊರಳಿನ ನಾಗನಂತೆ ಅವನ ಕೊರಳಿನಲ್ಲೂ ಬಣ್ಣಬಣ್ಣದ ಕೊರಳ ವಸ್ತ್ರ (ನೆಕ್‌ಟೈ) ರಾರಾಜಿಸುತ್ತದೆ. ಗಾಳಿಗೆ ಅದರ ಹೆಡೆ, ಎದೆಯ ಶುಭ್ರ ಮಲ್‌ಮಲ್ ಅಂಗಿಯ ಮೇಲೆ ಅತ್ತಿತ್ತ ತೂಗುತ್ತದೆ. ಎಲ್ಲ ಬೆಲೆಯುಳ್ಳ ಬಟ್ಟೆಬರೆ. 'ಸಿಲ್ಕ' ಉಡುಗೆ ತೊಡುಗೆ. ಗಂಭೀರ ಮುಖಮುದ್ರೆ ! ಆ ಮುಖದಲ್ಲೂ ಈಗ ರಕುತ ಮಾಂಸಗಳು ತುಂಬಿಕೊಂಡಿವೆ. ಗಲ್ಲಗಳು ಉಬ್ಬಿವೆ. ಕೆಂಪಗಿನ ತುಟಿಗಳು ಸಿಗರೇಟಿನ ಹೊಗೆಯಿಂದ ಕಪ್ಪಡರಿವೆ. ಅಸ್ತವ್ಯಸ್ತವಾಗಿದ್ದ ತಲೆಗೂದಲಿಗೆ ಪರಿಮಳದ ತೈಲ ಪೂಸಿ ಬಾಚಿದ ಅಥವಾ ಬಾಚಿಸಿಕೊಂಡಂತೆ ತೋರುತ್ತದೆ; ಸಮೀಪ ಸುಳಿದರೆ ಪರಿಮಳದ ತೈಲವೋ, ಬಟ್ಟೆಗೆ ತಳಿದ ಸೆಂಟೋ ಗಮಗಮಿಸುತ್ತದೆ. ದಿನ ನಿತ್ಯವೂ ಹೀಗೆಯೇ. ಮತ್ತು ಹೀಗೆ ಸರಕಾರೀ ಡಾಕ್ಟರನಂತೆ ಕುರ್ಚಿಯಲ್ಲಿ ಕುಳಿತುಬಿಡುವದು ಅವನ ವಾಡಿಕೆ.

ಆದರೆ ಸರಕಾರೀ ಡಾಕ್ಟರರಲ್ಲಿಲ್ಲದ ಅಥವಾ ಅಲ್ಲಿ ನಡೆಯದ ಕೆಲವು ದುರ್ಗುಣಗಳು ಆನಂದರಾಯನಿಗೆ ಅಂಟಿಕೊಂಡಿವೆ. ಅವರು ಗುಮ್ಮನ ಗುಸುಕರಂತೆ ಕುಳಿತುಬಿಡುವರು. ಇವನ ಮಾತು ವಿಶೇಷ. "ಏನಾಗಿದೆ ನಿನಗೆ ? ಯಾರಿಗೆ ಔಷಧಿ ?'' ಎಂದು ಕೇಳುವ ಮೊದಲೇ "ದುಡ್ಡು ತಂದಿದ್ದೀಯಾ ?'' ಎಂದು ಕೇಳುತ್ತಾನೆ. "ಇಲ್ಲ'' ಎಂದುತ್ತರ ಬಂದರೆ "ಇದೇನು ಸರ್ಕಾರೀ ಧರ್ಮಾಸ್ಪತ್ರೆಯೇನು ? ನಮ್ಮಪ್ಪ ಮಾಡಿದ ಹೊಲಮನೆ ಇಲ್ಲ. ಇದ್ದಿದ್ದರೆ ನಾನೂ ಪುಕ್ಕಟೆ ಕೊಡುತ್ತಿದ್ದೆ; ನಾನೂ ಬದುಕಬೇಕಲ್ಲ ! ನನಗೂ ಒಂದು ಹೊಟ್ಟೆ ಉಂಟಲ್ಲ ! ಹೋಗು ! ಹೋಗು ! ದುಡ್ಡು ತಾ ! ದುಡ್ಡು ತಾ ! ಇಲ್ಲದಿದ್ದರೆ ಬರಲೇ ಬೇಡ !'' ಎಂದು ನುಡಿಯುವುದು ರೂಢಿ. "ಇಂಜೆಕ್ಷನ್ ಟ್ಯೂಬ್'' ಗಳಿಗೆ, ಅವನು ಹೇಳಿದ್ದೇ

ಬೆಲೆ. "ಹಾಂ! ಅಷ್ಟು ರೂಪಾಯಿ!" ಎಂದು ಯಾರಾದರೂ ಆಶ್ಚರ್ಯ ದಿಂದ ತಡಬಡಿಸಿದರೆ "ಏನು ಮಾಡೋಣ ಹೇಳಿ! ನನ್ನ ಆಸ್ಪತ್ರೆಯಲ್ಲಿ ತಯಾರಾಗುತಿದ್ದರೆ ನಿಮ್ಮಿಂದ ಒಂದು ಪೈ ಕೂಡಾ ತೆಗೆದುಕೊಳ್ಳುತ್ತಿದ್ದಿಲ್ಲ. ತರಕಾರಿ ಮಾರ್ಕೇಟಿನಲ್ಲೂ ಅದು ಸಿಗುವುದಿಲ್ಲ. ಮಂಗಳೂರು ಪೇಟೆ ಯಲ್ಲೂ ಇಲ್ಲ. ಮುಂಬಯಿ, ಕಲಕತ್ತಾಗಳಿಂದ ಬರಬೇಕು!'' ಎಂದು ಹುಡಿ ಹಾರಿಸುತ್ತಾನೆ! ಅವನನ್ನು ಕರೆದೊಯ್ಯಲು ಯಾರಾದರೂ ಬಂದಾಗ ಜನ ನೋಡಿ ಹೊರಡಲಾರಂಭಿಸಿದ. ಒಮ್ಮೊಮ್ಮೆ ಅವನಿಗೆ ಸಮಯವೇ ಇರುವುದಿಲ್ಲ—ಪಾಪ! ರಾತ್ರಿಯಂತೂ ಅವನು ಹೊರಡುವುದು ಅನಿಶ್ಚಿತ. ರಾತ್ರಿ, ಬೆಳ್ತಂಗಡಿ ಪೇಟೆಯಲ್ಲಿರುವ ಆಫೀಸರರ ಮನೆಯಿಂದ ಕರೆ ಬಂದರೆ ಉಪಾಯವಿಲ್ಲದೆ ಗೊಣಗುಟ್ಟುತ್ತ ಹೋದ. ಪರವೂರಿನ ಜಮೀನ್ದಾರರು ಗಾಡಿ ಅಥವಾ ಮೋಟಾರ್ ತಂದರೆ "ಇಷ್ಟು ಕೊಡುತ್ತೀರಾ?'' ಎಂದು ಕೇಳಿ, ಅವರು ಒಪ್ಪಿಕೊಂಡರೆ ಹಣದಾಸೆಯಿಂದ ಹೊರಟ.

ಅದೇ ಧನ ಸಂಪಾದನೆಯ ಅತ್ಯಾಶೆಯಿಂದ ಆನಂದರಾಯ ಅರವಿಂದ ನೊಂದಿಗೆ ಗಾಡಿಯಲ್ಲಿ ಬಂಗಾಡಿಗೆ ಹೋಗಿದ್ದ. ಹನ್ನೆರಡು ಮೈಲುಗಳ ಪ್ರಯಾಣ! ಮರಳಿ ಬರಲು ಹನ್ನೆರಡು ಮೈಲು! ಮೈಲಿಗೊಂದು ರೂಪಾಯಿ ಬಾಡಿಗೆ ಸಿಗದಿದ್ದರೆ ಎತ್ತಿನ ಗಾಡಿಯವನೂ ಕರೆದಾಗ ಬರಲಾರ! ಅಂದ ಬಳಿಕ ಎಲ್. ಎಮ್. ಪಿ. ಡಾಕ್ಟರನೊಬ್ಬನಿಗೆ, ಅಷ್ಟೂ ಸಿಗುವುದು ಬೇಡವೇ! ಅಲ್ಲದೆ ಅಷ್ಟು ದೂರ ತೆರಳಿ ಬಳಲಿದುದರಿಂದ ಒಂದು ದಿನ ಅಲ್ಲಿ ಇರಬೇಕಾಗಿಯೂ ಬಂದಿತು. ಒಂದು ದಿನದ ಸಂಪಾದನೆಯನ್ನು ಕಳೆ ದುಕೊಂಡಂತಾಯಿತು. ಬೆಳ್ತಂಗಡಿಯಲ್ಲೇ ಇರುತ್ತಿದ್ದರೆ ಆ ಒಂದು ದಿನ ಅವನಿಗೆ ಎಷ್ಟು ಸಿಗುತ್ತಿತ್ತೋ! ಈಗ ಅವನಿಗೆ ಲಭಿಸಿದುದು ಕೇವಲ ಒಂದು ಇಂಜೆಕ್ಷನಿನ ಹಣ - ಐದು ರೂಪಾಯಿ ಮಾತ್ರ! ಒಟ್ಟು ಮೂವತ್ತು ರೂಪಾಯಿ ಅವನ "ಬಿಲ್". ಹೆಚ್ಚೇನಲ್ಲ! ಮತ್ತು ಅರವಿಂದನನ್ನು ಮೊದಲೇ ಕೇಳಿಕೊಂಡಿದ್ದ ಗೋಪಾಲರಾಯರು ಹತ್ತರ ಮೂರು ನೋಟು ಗಳನ್ನು ಕೊಡಲು ಬಂದಿದ್ದರು. ಆದರೆ ಅವನು ತೆಗೆದುಕೊಳ್ಳಲಿಲ್ಲವಲ್ಲ!

"ಬೆಳ್ತಂಗಡಿಗೆ ಬಂದಾಗ ಕೊಡಿ'' ಎಂದು ಅವನು ನುಡಿದು ಅವರ ಕೈ ಸರಿಸಿದ್ದ. ಡಾಕ್ಟರರು ಬಂದು, ತಕ್ಷಣ ಹೊರಟು ಹೋದರೆ ಅದೊಂದು

ರೀತಿ. ಆದರೆ ಆನಂದರಾಯ ಅವರ ಮನೆಯಲ್ಲಿ ಅವರ ಅತಿಥಿಯಾಗಿ ಒಂದು ದಿನ ಉಳಿದ. ಕುಶಲ ಮಾತುಕತೆಗಳು ನಡೆದುವು. ಮೃಷ್ಟಾನ್ನ ಭೋಜನವಾಯಿತು. ಸ್ವಲ್ಪ ಸ್ನೇಹ, ಸಲಿಗೆ ಬೆಳೆಯಿತು! ಸ್ವಲ್ಪಮಟ್ಟಿಗೆ ಆತ್ಮೀಯತೆ ಉದಯಿಸಿತು! ಆದುದರಿಂದ ತಿಂದುಂಡು, ಮೆರೆದುದನ್ನೆಲ್ಲ ಮರೆತು ಮಾರ್ವಾಡಿಗಳಂತೆ "ಲೆಕ್ಕ ಚುಕ್ತಾ" ಎಂದನ್ನುವುದು ಕಠಿನ! ಅದು ಮುಳುಗಿ ಹೋಗುವ ಬಾಬತ್ತೂ ಅಲ್ಲ. ಇಂದು ನಾಳೆ ಎಂದೆಂದು ಕಾಲ ಕಳೆವ "ಕುಳವಾರೂ" ಅಲ್ಲ. ಇಂದು ತೆಗೆದುಕೊಳ್ಳುವುದರ ಬದಲು ನಾಳೆ ತೆಗೆದುಕೊಂಡರಾಯಿತು; ಹೇಗೂ ಸೋಮವಾರ ಬೆಳ್ತಂಗಡಿ ಸಂತೆಗೆ ಬರುತ್ತಾರೆಂದ ಮೇಲೆ ಆಗ ಸಿಕ್ಕೇ ಸಿಗುತ್ತದೆ. ಈಗೇಕೆ? ಎಂದು ಡಾಕ್ಟರನು ಯೋಚಿಸಿ, ದಾಕ್ಷಿಣ್ಯದಿಂದ ಹಾಗೆ ಮಾಡಿದನೆಂದು ಗೋಪಾಲರಾಯರು ತಿಳಿದುಕೊಂಡರು! ಅವರ ಸ್ವಭಾವಕ್ಕನುಗುಣವಾಗಿ ಅವರು ಹಾಗೆ ಅರ್ಥ ಮಾಡಿಕೊಂಡರು. ಅಷ್ಟೆ!

ಆದರೆ ಆನಂದರಾಯನ ದಾಕ್ಷಿಣ್ಯಕ್ಕೆ ಅದಕ್ಕಿಂತಲೂ ದೊಡ್ಡದಾದ, ಮುಖ್ಯವಾದ ಮತ್ತೊಂದು ಕಾರಣವಿದೆ. ಅದು ಬಾಯಿ ಬಿಟ್ಟು ಹೇಳುವ ಸಂಗತಿಯಲ್ಲ. ಹೇಳುವಷ್ಟು ನಿಶ್ಚಿತ ಸ್ವರೂಪವನ್ನು ಅದು ಧರಿಸಿಲ್ಲ. ಅದು ಇನ್ನೂ ಒಂದು ವಿಚಾರವಾಗಿದೆ. ಅದು ಅತ್ಯಂತ ನೂತನ. ಬಹಳ ವಿಚಿತ್ರವಾದುದು. ಅದು ಹೇಗೆ ಏಕೆ ಉದಯಿಸಿತೋ? ಕಾವೇರಿಯ ಕೋಣೆಯ ಹೊಸ್ತಿಲ ಬಳಿ ಎರಡನೇ ಸಲ ಅವನು ನಿಂತು ಅವಳನ್ನು ನೋಡಿದಾಗ ಅದು ಮಿಂಚಿತು. ಆ ಮಿಂಚು, ತೆರೆದ ಕಿಟಕಿಯಿಂದ ಇಣಿಕುತಿದ್ದ ಬೆಳಕಲ್ಲ. ಅವಳ ಕಣ್ಣೋಟದ ಕಾಂತಿಯೋ, ಹೊನ್ನ ಮೈ ಬಣ್ಣದ ಕಾಂತಿಯೋ, ಕರ್ಣಾಭರಣದ ಕಾಂತಿಯೋ ಅವನಿಗೆ ಅರ್ಥವಾಗುವುದಿಲ್ಲ. ಅದೇನಿದ್ದರೂ ಘೋರಾರಣ್ಯದಲ್ಲಿ ಮರಗಿಡಗಳ ಸೊಪ್ಪುಸದೆಗಳ ಕೆಳಗೆ ಪಸರಿಸಿರುವ ಕಗ್ಗತ್ತಲೆಯ ಮೇಲೆ, ಸೂರ್ಯನ ಬಿಸಿಲು ಪ್ರವೇಶಿಸಿದಂತೆ ಅವನ ಹೃದಯದ ಮೇಲೆ ಬೆಳಕು ಬಿದ್ದಿದೆ. ಅಲ್ಲಿ ಮರಗಿಡಗಳ ಬೀಜಗಳು ಸೂರ್ಯನ ಬಿಸಿಲು ಬಿದ್ದಾಗ ಮೊಳಕೆ ಒಡೆವಂತೆ ಅವನೆದೆಯಲ್ಲೂ ಒಂದು ವಿಚಾರ ಮೊಳಕೆ ಒಡೆದಿದೆ. ಸಸಿ ಇನ್ನೂ ಬೇರು ಬಿಟ್ಟಿಲ್ಲ. ಪ್ರಾಯವೊಡೆದಿಲ್ಲ. ಕತ್ತಲೆಯೊಡನೆ ತುಮುಲ ನಡೆಸಿ, ಮೇಲೆ ತಲೆ ಎತ್ತಿ ಬೆಳಕಿಗೆ ಕೈ ಮೈ ಚಾಚಲಾಗಿಲ್ಲ.

ಆದರೆ ಆಶೆ ಇದೆ. ಆ ಸುಪ್ತ ಆಶೆಯಿಂದ ಅವನು ಪರಿತಪ್ತನಾದ. ಅದು ಇಂದು ಅವನೆದೆಯಲ್ಲಿ ಪ್ರಜ್ವಲಿಸಿದುದೂ ಅವನಿಗೇ ಆಶ್ಚರ್ಯವನ್ನುಂಟು ಮಾಡಿದೆ.

ಆನಂದರಾಯ ಪರಿಭಾವಿಸಿದ. ಸಣ್ಣಂದಿನಿಂದ ಇಂದಿನ ವರೆಗಿನ ಅನೇಕ ಘಟನೆಗಳು ಅವನ ಸ್ಮರಣೆಗೆ ಬಂದುವು. ಅನೇಕ ಹೆಣ್ಣುಗಳ ಚಿತ್ರ ಅವನ ಕಣ್ಣ ಮುಂದೆ ಕಟ್ಟಿದಂತಾಯಿತು. ನೆರೆಮನೆಯ ಹುಡುಗಿಯ ರೊಂದಿಗೆ ಅವನು ಗೊಂಬೆಗಳ ಮದುವೆಯಾಟ ಆಡಿದ್ದ. ಒಮ್ಮೊಮ್ಮೆ ಮನೆಯ ಹಾಗೂ ಗುರುತು ಪರಿಚಯದ ದೊಡ್ಡ ಹುಡುಗಿಯರು ಅವನನ್ನು ಮತ್ತೊಂದು ಹುಡುಗಿಯೊತ್ತಿಗೆ ಕುಳ್ಳಿರಿಸಿ "ಗಂಡ-ಹೆಂಡತಿ" ಎಂದು ಕರೆದು ದುಂಟು. ಅವನಿಗೆ ಬುದ್ಧಿ ತಿಳಿಯಲಾರಂಭಿಸಿದ ಬಳಿಕ ಅಂತಹ ಕುಚೇಷ್ಟೆ ಗಳಿಂದ ಸಿಟ್ಟುಗೇಳುತಿದ್ದುದೂ ಇದೆ. ಅವನು ಹೈಸ್ಕೂಲಿನಲ್ಲಿ ಕಲಿಯುವಾಗ ತಾಯಿ ತಂದೆ ಅವನ ಮದುವೆಯ ವಿಷಯವಾಗಿ ಆಗೊಮ್ಮೆ ಈಗೊಮ್ಮೆ ಏನೋ ಗುಸು ಗುಸು ಪಿಸುಗುಟ್ಟುತಿದ್ದರು. ಅವನು ಡಾಕ್ಟರ್ ಪರೀಕ್ಷೆ ಓದುವಾಗಲಂತೂ ಅವನ ತಂದೆ ಒಂದೆರಡು ಸಲ ಕನ್ಯಾ ನೋಡಲು ಕರೆದು ಕೊಂಡು ಹೋದರು. ಅವನು ಉಡುಪಿಯಲ್ಲಿ ಡಾಕ್ಟರಿಕೆ ಮಾಡಲಾರಂಭಿ ಸಿದ ಮೇಲೆ ಮತ್ತೆ ಮತ್ತೆ ಅದರ ಪ್ರಸ್ತಾಪ ಬರುತಿತ್ತು. ಕಂಡ ಒಂದೆರಡು ಹುಡಿಗೆಯರು ಅವನ ಮೆಚ್ಚಿಕೆಗೆ ಪಾತ್ರವಾಗಲಿಲ್ಲ. ಒಂದೆರಡರ ಜಾತಕ, ಗೋತ್ರಗಳು ಸರಿ ಹೋಗಲಿಲ್ಲ. ಉಡುಪಿಯಿಂದ ಅವನು ಇಲ್ಲಿಗೆ ಬಂದು ನೆಲೆಸಿದ ಮೇಲೆ ಕೂಡಾ ತಂದೆ ಕೆಲವು ಪತ್ರಗಳನ್ನು ಬರೆದರು. ಮೊದ ಮೊದಲು "ಮದುವೆಯಾಗು. ಇದೇ ಸಮಯ ! ನಮ್ಮ ಬಳಗದಲ್ಲೂ ಕನ್ಯಾ ಗಳಿವೆ. ನೀನೇ ಆರಿಸಿಕೋ. ಈಗ ಇದ್ದಂತೆ ಇರಬೇಡ" ಎಂದು ಉಪದೇಶ ಮಾಡುತಿದ್ದರು. ಒಂದು ಪತ್ರದಲ್ಲಿ "ನಾವೊಂದು ಹುಡುಗಿ ನೋಡಿದ್ದೇವೆ. ಅನುಕೂಲಸ್ಥರು. ಹುಬ್ಬಳ್ಳಿಯಲ್ಲಿ ಅವರ ದೊಡ್ಡ ಹೋಟೇಲಿದೆ. ನಿನಗೆ ನೆರವಾದಾರು ! ಹುಡುಗಿಯನ್ನು ನೋಡಿ ಹೋಗು'' ಎಂದು ಕರೆದರು. ಆದರೆ ಅವನು ಹೋಗಲಿಲ್ಲ. ಆ ಮೇಲೂ ಪದೇ ಪದೇ ಅವರು ಬೇರ ಸಂಬಂಧ ಸೂಚಿಸಿದರು. ಅವನು ಸಿಟ್ಟನಿಂದ "ನಾನು ಲಗ್ನ ಮಾಡಿಕೊಳ್ಳು ವುದಿಲ್ಲ. ನೀವು ಇನ್ನು ಮುಂದೆ ಬರೆಯುವುದು ಬೇಡ'' ಎಂದು ಗದರಿಸಿ

ಗೀಚಿದ. ಆ ಮೇಲೆ ಅವರು ಬರೆದ ಪತ್ರಗಳಿಗೆ ಅವನು ಉತ್ತರವನ್ನೇ ಕೊಡಲಿಲ್ಲ. ಆದರೂ ಈ ಕಾಟ ಅಲ್ಲಿಗೇ ನಿಲ್ಲಲಿಲ್ಲ. ಯಾರೋ ದೂರದ ಬಂಧು ಬಳಗದವರಿಂದ ಅವನ ಬೆಳ್ತಂಗಡಿ ವಿಳಾಸಕ್ಕೆ ಪತ್ರಗಳು ಬರುತಿದ್ದುವು. ಒಂದೆರಡು ಸಲ ಒಬ್ಬಿಬ್ಬರು ಬಂದು ಸ್ವತಃ ಅವನನ್ನು ಕಂಡು ಮಾತೆತ್ತಿದರು. ಜಾತಕ ನೋಡಿ ಪತ್ರ ಬರೆವೆನೆಂದವರು ಬರೆಯಲಿಲ್ಲ. ಮತ್ತೆ ಬರುವೆವೆಂದವರು ಬರಲಿಲ್ಲ. ಮೂರು ನಾಲ್ಕು ವರುಷಗಳಿಂದ ಮದುವೆಯ ಮಾತು ನೆನೆಗುದಿಗೆ ಬಿದ್ದಿದೆ. ಈ ಬೆಳ್ತಂಗಡಿ ಪರವೂರಲ್ಲಿ ಯಾರೂ ಅವನ ಗೋಜಿಗೆ ಬರುತಿದ್ದಿಲ್ಲ. ಹೀಗಾಗಿ ಮದುವೆಯ ಮಾತೇ ಮರೆತಿದೆ. ಮದುವೆಯಾಗಬೇಕು ಎಂಬ ಭಾವನೆ ಕೂಡಾ ಇಲ್ಲ. ಅದು ಅಗತ್ಯವೆಂದೂ ಅನಿಸಿಲ್ಲ. ಅದು ಸತ್ತು ಹೋಗಿದೆ. ಏಕೆಂದರೆ ಅವನಿಗೆ ಯಾವ ಸುಖಭೋಗ ಬೇಕೋ ಅವು ಮದುವೆಯಾಗದೇ ದೊರೆತಿದೆ.

ಆದರೆ ಈಗ, ಈ ಕಾವೇರಿಯನ್ನು ಕಂಡ ಬಳಿಕ, ಹೀಗೇಕಾಯಿತು? ಮದುವೆಯಾಗುವ ವಿಚಾರ ಹೇಗೆ ಸುಳಿಯಿತು? ಈ ವಿಷಯ ಬೀಜ ಎಲ್ಲಿ ಮತ್ತು ಹೇಗೆ ಜೀವಂತ ಇತ್ತೋ! ಈ ನಾಲ್ಕಾರು ವರುಷಗಳ ಕಾಲಾವಧಿಯಲ್ಲಿ ಅದು ಎದೆಗುಂಡಿಗೆಯ ಬಿಸಿ ನೆತ್ತರಿನಲ್ಲಿ, ಮುಳುಗಿ, ಕೊಳೆತು, ಸತ್ತು ಹೋಗಿತ್ತೆಂದು ಅವನು ತಿಳಿದಿದ್ದನಲ್ಲ! ಆದರೆ ಕಲ್ಲು ಮಣ್ಣುಗಳಡಿ ಹೂತ ಬೀಜಕ್ಕೆ ಕಾವೇರಿಯ ಸೆಲೆ ಹರಿದು ಬಂದ ತಕ್ಷಣ ಅದು ಮೊಳಕೆ ಒಡೆದು ಭೂಮಿ ಮೇಲೆ ಟಿಸಳು ಕಾಣಿಸಿಕೊಳ್ಳುವಂತಾಯಿತಲ್ಲ! ಇದು ಯಾವ ನೀರಿನ ಸೆಲೆ? ಯಾವ ಜನ್ಮದ ಋಣಾನುಬಂಧ? ಅಲ್ಲದಿದ್ದರೆ ಹೀಗಾಗುವುದು ಎಂದಾದರೂ ಶಕ್ಯವಿದೆಯೇ? ಕಾವೇರಿ ಘಟ್ಟದ ಹುಡುಗಿ. ಮಲೆನಾಡಿನಲ್ಲಿ ಬೆಳೆದು ಬಂದವಳು! ಹೊಟ್ಟೆ ಬಟ್ಟೆಗಿಂತ ಹೆಚ್ಚಿಲ್ಲದ ಜಮೀನುದಾರನೊಬ್ಬನ ಮಗಳು! ಹೆಚ್ಚು ಕಲಿತವಳಲ್ಲ! ಶಾಲೆ ಕಾಲೇಜಿಗೆ ತೆರಳಿದವಳಲ್ಲ! ನಡೆನುಡಿಯಿಂದ ಅವನನ್ನೇನೂ ಮರುಳುಗೊಳಿಸಿಲ್ಲ. ಅವಳಿಗಿಂತಲೂ ಅಧಿಕ ರೂಪವತಿಯರನ್ನು ಅವನು ಕಂಡುದುಂಟು. ಉಡುಪಿಯಲ್ಲಿದ್ದಾಗ ಅವನು ತಂದೆಯೊಡನೆ ನೋಡಲು ಹೋದ ಹುಡುಗಿಯರಲ್ಲಿ ಕೆಲವರು ಬಹಳ ಚೆಲುವೆಯರು. ಸೌಂದರ್ಯಾಪೇಕ್ಷೆಗೆ, ಕೇದಿಗೆ ಗರಿಯನ್ನು ಹೋಲುವ ಆ ಕುಮಾರಿಯರೇ ಸಾಕು! ಕೆಲವರು ಹೊನ್ನಿನ ವೈಬಣ್ಣದ ಎಳೆವೆಣ್ಣು

ಗಳು! ಹಣೆ, ಮೂಗು, ಕಣ್ಣು, ತುಟಿ, ಕಟಿ, ಹೆರಳು, ಬೆರಳು ಯಾವುದಕ್ಕೂ ಹೆಸರಿಡದ ಹೊಸ ಹೊಸಬರನ್ನು ಅವನು ನೋಡಿದ್ದ. ಒಮ್ಮೆ ಒಂದು ಮನೆಯಲ್ಲಿ ಕಲಿತ ಕನ್ಯೆ ಇದ್ದಳು. ಮತ್ತು ಅವನೊಂದಿಗೆ ಚೆನ್ನಾಗಿ ಮಾತನಾಡಿದಳು. ತನ್ನ ನೀಳವಾದ ಜಡೆಯನ್ನು ಎದೆಯ ಮೇಲೆ ಎಳೆದುಕೊಂಡು, ಕೈ ಕಣ್‌ಸನ್ನೆಯಿಂದ ಅವನ ಮನಸ್ಸನ್ನು ಅಪಹರಿಸಲೆತ್ನಿಸಿದಳು. ಆ ಮೇಲೆ ರಸ್ತೆಯಲ್ಲಿ ಅಕಸ್ಮಾತ್ ಭೆಟ್ಟಿಯಾದಾಗಲೂ ಮುಗುಳು ಮುಗುಳು ನಗುತ್ತ, ನೋಡುತ್ತ ಹೋಗುತಿದ್ದಳು. ಕೈಯಲ್ಲಿ ಹಿಡಿ ಇಲ್ಲದ ಕೊಡೆ, ಕಾಲಿಗೆ ಎತ್ತರದ ಹಿಂಬದಿಯುಳ್ಳ ಬೂಟು ಧರಿಸಿದ್ದ ಅವಳು ಆಧುನಿಕ ತರುಣಿಯ ಒಳ್ಳೇ ಮಾದರಿ! ಹೋಟೇಲಿನ ಮಾಲಕರೊಬ್ಬರು ತಮ್ಮ ಮಗಳಿಗೆ ನಖಶಿಖಾಂತ ಆಭರಣಗಳನ್ನಿಟ್ಟು, ಪೀತಾಂಬರ ಸೀರೆ ಉಡಿಸಿ, ಅವನ ಮುಂದೆ ಕುಳ್ಳಿರಿಸಿದ್ದರು. ಆದರೆ ಆ ಚೆಲುವು, ಆ ವಿದ್ಯೆ, ಆ ಚೆನ್ನಾಭರಣ, ಆ ಶೃಂಗಾರ, ಒನಪು ಒಯ್ಯಾರ ಯಾವುದೂ ಅವನನ್ನು ಇಷ್ಟು ಆಕರ್ಷಿಸಿರಲಿಲ್ಲ. ಅವನೆದೆಯಲ್ಲಿ ಈ ಪರಿ ಮದುವೆಯ ಹಂಬಲವನ್ನು ಕೆರಳಿಸಿಲ್ಲ.

ಆನಂದರಾಯ ಪುನಃ ಯೋಚಿಸಿದ: ನನಗಿನ್ನೂ ಮೂವತ್ತೆರಡು ಸಂವತ್ಸರಗಳು! ಇದು ಮದುವೆಯ ವಯಸ್ಸೇ ಸರಿ. ಮಧ್ಯಪ್ರಾಯ ದಾಟಿದವರು ಲಗ್ನವಾಗುತ್ತಾರೆ. ನಾಲ್ಕು ಮಕ್ಕಳ ತಂದೆ ಮತ್ತೆ ಮದುಮಗನಾಗುತ್ತಾನೆ. ಹಲ್ಲು ಬಿದ್ದ ಮುದುಕನಿಗೂ ಧಾರೆಯೆರೆದು ಕೊಡುತ್ತಾರೆ. ಕುಂಟ, ಕುರುಡ, ಕುರೂಪಿಗಳಿಗೆ ಕೂಡಾ ಬ್ರಹ್ಮಗಂಟು ಹಾಕುವದುಂಟು! ಗಂಜಿಗೆ ಗತಿ ಇಲ್ಲದವರೂ ವಿವಾಹವಾಗುತ್ತಾರೆ. ಹಾಗಿರುವಾಗ ನಾನೇಕೆ ಆಗಬಾರದು? ಆಗುವುದಿದ್ದರೆ ಇದೇ ಹುಡುಗಿಯೇ ಒಳ್ಳೇದು! ಹಳ್ಳಿ ಹುಡುಗಿ! ಓದು ತಲೆಗೇರಿಲ್ಲ! ಮನೆಗೆಲಸದಲ್ಲೂ ಪಾರಂಗತಳು! ರೂಪ, ಕುಲ ಸಂಪತ್ತುಗಳುಳ್ಳ ನನ್ನಂತಹ ವರ ದೊರೆಯುವದು ದುರ್ಲಭ! ಸಿಕ್ಕರೆ ಪರಬ್ರಹ್ಮನೆಂದು ತಲೆಯ ಮೇಲೆ ಹೊತ್ತುಕೊಂಡು ಮೆರೆದಾಡ್ಯಾಳು! ನಾನು ಹೇಳಿದ ಹಾಗೆ ಕೇಳಿಕೊಂಡು ಇದ್ದಾಳು! ಓಹೋ, ಅದು ಮುಖ್ಯ! ನಾನು ಹೇಳಿದ ಹಾಗೆ ಕೇಳಿಕೊಂಡು ಇದ್ದಾಳು!

ಅವನು ಚಿಂತಿಸಿದ: ಗೋಪಾಲರಾಯರು ಕೊಟ್ಟಾರೇನು? ಕೇಳುವ

ಬಗೆ ಹೇಗೆ? ಊರಿಗೆ ಪತ್ರ ಬರೆದು ತಂದೆಯನ್ನು ಕರೆಸಿಕೊಳ್ಳಲೇ? ಅನ್ಯ ರಿಂದ ಹೇಳಿಸಲೇ? ಛೀ! ಪರಕೀಯರಿಗೆ ಇವರ ಗಂಧ ಗಾಳಿ ಕೂಡಾ ಬಡಿಯಬಾರದು! ನಾರಾಯಣನಿಗೆ ಇದರ ಸುಳುವು ಹೊಳವೂ ಸಿಗಬಾರದು. ಸೋಮವಾರ ಸಂತೆ! ಗೋಪಾಲರಾಯರು ಆದಿತ್ಯವಾರ ರಾತ್ರಿ ಗಾಡಿ ಕಟ್ಟಿದರೆ ಮರು ದಿನ ಮುಂಜಾನೆ ಬಂದು ಸೇರುವುದು ನಿಶ್ಚಯ. ಅವರು ಬಂದಾಗ ನಾರಾಯಣ ಇರುವುದೂ ಸರಿಯಲ್ಲ.

ತಕ್ಷಣ ಏನೋ ಒಂದು ವಿಚಾರ ಮಿಂಚಿತು. "ನಾರಾಯಣ! ನಾರಾಯಣ!" ಎಂದು ಡಾಕ್ಟರ್ ಕರೆದ. ನಾರಾಯಣ ಬಂದು ಮೇಜಿನ ಬಳಿ ನಿಂತುಕೊಂಡ. ಒಂದೆರಡು ಇಂಜೆಕ್ಷನ್ ಟ್ಯೂಬ್‌ಗಳ ಹೆಸರು ಹೇಳಿ "ಅವು ಇವೆಯೋ?'' ಎಂದು ಪ್ರಶ್ನಿಸಿದ. "ಇಲ್ಲ" ಎಂದು ಉತ್ತರ ಬಂತು. ಅವನು ಈ ಮೊದಲು ಎರಡು ಮೂರು ಸಲ ಡಾಕ್ಟರನಿಗೆ ತಿಳಿಸಿದ್ದುದೂ ಇದೆ. ಅದನ್ನು ಅವನು ಮರೆತಿದ್ದನೋ ಅಥವಾ ಮರೆತವರಂತೆ ನಟಿಸಿದನೋ ನಾರಾಯಣನಿಗೆ ತಿಳಿಯಲಿಲ್ಲ. ಡಾಕ್ಟರ್ ಅತಿ ವಿನಯದಿಂದ "ನಾಳೆ ಆದಿತ್ಯವಾರ. ನೀನು ಮಧ್ಯಾಹ್ನದ ಬಸ್ಸಿಗೆ ಮಂಗಳೂರಿಗೆ ಹೋಗು. ಅಲ್ಲಿಗೆ ಮುಟ್ಟಿದಾಗ ಸಂಜೆಯಾಗುತ್ತದೆ. ಬಹುಮಟ್ಟಿಗೆ ಭಾನುವಾರ ಅಂಗಡಿಗಳನ್ನು ತೆರೆಯಲಿಕ್ಕಿಲ್ಲ. ಸೋಮವಾರ ನಿನ್ನ ಕೆಲಸ ಆದೀತು. ಏನೇನಿಲ್ಲ, ಏನೇನು ತರಬೇಕೆಂಬುದನ್ನು ಈಗ ನೋಡಿ ಹೇಳು" ಎಂದು ನುಡಿದು ಕಪಾಟುಗಳ ಕೀಲಿಕೈ ಗೊಂಚಲನ್ನು ಮೇಜಿನ ಮೇಲೆಸೆದ. ನಾರಾಯಣ ಒಂದೊಂದೇ ಕಪಾಟನ್ನು ತೆರೆದು ಅನೇಕ ಔಷಧಗಳ ಹೆಸರು ಹೇಳಿ "ಇದು ಇಲ್ಲ. ಇದು ಮುಗಿಯುತ್ತ ಬಂದಿದೆ" ಎಂದು ತಿಳಿಸತೊಡಗಿದ. ಡಾಕ್ಟರನ "ಲಿಸ್ಟ್" ಸಿದ್ಧವಾಯಿತು. ಕಾಮತರ "ಕೆಮಿಸ್ಟ್" ಅಂಗಡಿಯಲ್ಲಿದ್ದ ಹಿಂದಿನ ಬಾಕಿ ಪೈಕಿ ಅರ್ಧಾಂಶವನ್ನೂ ಆನಂದರಾಯ ಕೊಟ್ಟ. ನಾರಾಯಣನಿಗೆ ಪ್ರಯಾಣ, ಊಟ, ಕಾಫಿ ವೆಚ್ಚವೆಂದು ಸ್ವಲ್ಪ ತೆಗೆದಿಟ್ಟ. ಅಲ್ಲದೆ ಅವನ ಒಂದಿನ ತಿಂಗಳಿನ ಬಾಕಿ ಸಂಬಳವನ್ನೂ ತೀರಿಸಿ "ರೂಪಾಯಿ ಜಾಗ್ರತೆ! ಅಲ್ಲಲ್ಲಿ ಮಂಗನ ಹಾಗೆ ನೋಡಿ ಮಾಡಿ ಕಳೆದುಕೊಳ್ಳಬೇಡ! ಒಂದು ದಿನ ಬೇಕಾದರೆ ಹೆಚ್ಚಿಗೆ ಉಳಿದು, ನಿಂತು, ಅಂಗಿಗಿಂಗಿ ಹೊಲಿಸಿಕೊಂಡು ಬಾ. ಮತ್ತೆ ಗಳಿಗೆ ಗಳಿಗೆಗೆ ಹೋಗುತ್ತೇನೆ ಎಂದರೆ ಕೇಳುವವನಲ್ಲ" ಎಂದಂದು

ಎದ್ದು ಹೋದ.

ನಾರಾಯಣ, ಆನಂದ ಮತ್ತು ಆಶ್ಚರ್ಯಗಳಿಂದ ಕಣ್ಣು ಬಾಯಿ ಬಿಟ್ಟ. ಇದೇನು? ಕೃತಯುಗ ಆರಂಭವಾಯಿತೇ ಹೇಗೆ ಮತ್ತೆ? ಈ ಮಹಾ ಯುದ್ಧಕ್ಕೆ ಕಲಿಯುಗ ಮುಗಿಯಿತು ಎಂದು ಯಾರೋ ಭವಿಷ್ಯ ಬರೆದಿದ್ದಾರಂತೆ! ಅದು ಸತ್ಯವೇ ಇರಬೇಕು. ಇಲ್ಲದಿದ್ದರೆ ಆನಂದರಾಯನ ಹೃದಯದಲ್ಲಿ ಇಷ್ಟು ಔದಾರ್ಯ ಎಲ್ಲಿಂದ ಬಂತು? ಅವನ ಪ್ರಯಾಣ ವೆಚ್ಚದ ಬಾಬತ್ತಿನಲ್ಲೂ ಎಂದಿಗಿಂತಲೂ ಐದು ರೂಪಾಯಿಗಳು ಹೆಚ್ಚಾಗಿದ್ದುವು. ಕಳೆದ ತಿಂಗಳ ಸಂಬಳ ಬಾಕಿ ಕೂಡಾ ಚುಕ್ತಾ! ಅವನನ್ನು ನೆನಸಿ ನಾರಾಯಣ ತನ್ನ ಮನಸ್ಸಿನೊಳಗೇ ನಕ್ಕ. ಆಸ್ಪತ್ರೆಯ ಬಾಗಿಲಿನ ವರೆಗೂ ಬಂದು ಆ ವಿಚಿತ್ರ ವ್ಯಕ್ತಿಯನ್ನು ಸ್ವಲ್ಪ ಹೊತ್ತಿನ ವರೆಗೆ ನೋಡುತ್ತ ನಿಂತ! ಏಕೋ ಏನೋ ಆನಂದರಾಯನ ನಡೆ ನುಡಿಯಲ್ಲಿ ಕೆಲವು ದಿನಗಳಿಂದ ಸ್ವಲ್ಪ ಸ್ವಲ್ಪ ಬದಲಾವಣೆಯಾಗಿದೆಯೆಂದು ಅವನು ಕಂಡುಕೊಂಡ. ಮೂರು ನಾಲ್ಕು ದಿನಗಳಿಂದ ವಿಶೇಷವಾಗಿ ಆಸ್ಪತ್ರೆ ಬಿಟ್ಟು ತೆರಳಿಲ್ಲ. ಅಲ್ಲಿಗೇ ಊಟ ತರಿಸಿದ. ಅಲ್ಲೇ ಒಂದೆರಡು ದಿನ ಮಲಗಿಕೊಂಡ. ಏನೋ ಸ್ವಲ್ಪ ವಿಚಿತ್ರವೇ! ಆದರೆ ನಾರಾಯಣ ಈಗ ಅದನ್ನು ಹೆಚ್ಚಾಗಿ ಗಮನಿಸಲಿಲ್ಲ. ಅದರ ಕಡೆ ಲಕ್ಷವನ್ನೀಯಲೂ ಅವನಿಗೆ ಈಗ ಅವಕಾಶವಿಲ್ಲ. "ಮಂಗಳೂರಿಗೆ ಹೋಗಿ ಬಾ', ಎಂದು ಡಾಕ್ಟರ್ ಹೇಳಿದ ತಕ್ಷಣ ಅವನ ಮನಸ್ಸು ಆ ಸುಂದರ ನಗರದ ದಾರಿ ಹಿಡಿದಿದೆ. ಮಧ್ಯಾಹ್ನದ ಬಸ್ಸಿಗೆ ಹೊರಡಲು ಡಾಕ್ಟರ್ ಹೇಳಿದ್ದರೆ ಅವನು ಮುಂಜಾನೆಯೇ ಹೊರಟುಹೋದ. ಡಾಕ್ಟರನೂ ಆಕ್ಷೇಪಿಸಲಿಲ್ಲ. ಅಲ್ಲದೆ ಏನೋ ಒಂದು ಪೀಡೆ ಪರಿಹಾರವಾದಂತೆ ನಿಟ್ಟುಸಿರಿಟ್ಟ.

## ೪ನೇಯ ಅಧ್ಯಾಯ

ಗೋಪಾಲರಾಯರು ಸೋಮವಾರ ದಿನ ಉದಯವಾದವರು ಬಂಗಾಡಿಯಲ್ಲಿ ಅವರನ್ನು ಒಮ್ಮೆ ಕಂಡವರಿಗೆ ಈಗ ಈ ಬೆಳ್ತಂಗಡಿಯಲ್ಲಿ ಫಕ್ಕನೇ ಗುರುತು ಸಿಗುವಂತಿರಲಿಲ್ಲ. ಅಲ್ಲಿ ಒಂದು ಲುಂಗಿ ಮತ್ತೊಂದು ಬೈರಾಸಿನ ಮೇಲಿರುತಿದ್ದರು. ಅವು ಅಗಸನಿಗೆ ಕೊಟ್ಟ ಅರಿವೆಯೂ ಅಲ್ಲ. ಯಾರಾ

ದರೂ ಮನೆಗೆ ಬಂದಾಗ, ಬೇಗನೇ ಒಳಗೆ ಹೋಗಿ ಸ್ವಲ್ಪ ಶುಭ್ರವಾದ ಲುಂಗಿ ಸುತ್ತಿಕೊಂಡು ಬರುತ್ತಿದ್ದರು. ಹಳ್ಳಿಯಲ್ಲಿ ಅದೇ ಚಂದ! ಆದರೆ ಈ ಬೆಳ್ತಂಗಡಿ ಪೇಟೆಗೆ ಬಂದಾಗ ಅವರ ಮಸ್ತು ಶಿಸ್ತು ಬೇರೆಯೇ ! ಪಂಚೆ ಕಚ್ಚೆ, ಇಂಚಗಲಕೊಂದು ಗೀಟುಳ್ಳ ಅಂಗಿ, ಲಾವಂಚ ಬಣ್ಣದ ಕೋಟು, ಜರಿ ಅಂಚಿನ ಮುಂಡಾಸು, ಅವರ ಉಡುಗೆ ತೊಡುಗೆಯಾಗಿದೆ. ಅಂಗಿಗೆ ಕಾಲರಿಲ್ಲ. ಕೋಟು ಮೊಣಗಂಟಿನ ವರೆಗೂ ನಿಲುಕುತ್ತದೆ. ಕೈಯಲ್ಲಿ ಹಿಡಿ ಯುಳ್ಳ ನಾಗರಬೆತ್ತ. ನಲ್ವತ್ತೈವರ ವಯಸ್ಸಿಗೆ ಒಪ್ಪುವ ವೇಷ ಭೂಷಣ ! ರೂಪಕ್ಕೂ ತಕ್ಕ ಶೃಂಗಾರವೇ ! ಏಕೆಂದರೆ ಉದ್ದ ಜೀವಿಗಳಿಗೆ ಅದು ಶೋಭಿ ಸುವ ಅಲಂಕಾರ. ಅವರು ಉದ್ದವಿದ್ದಂತೆ ಅದಕ್ಕೆ ಸರಿಯಾದ ಮೈಕಟ್ಟುಳ್ಳ ವರು. ನರೆತ ಮೀಸೆಯು ಮೋರೆಗೊಂದು ಗಾಂಭೀರ್ಯದ ಕಳೆ ಏರಿಸಿದೆ. ಅವರನ್ನು ಕಂಡವರಲ್ಲಿ ಒಂದು ರೀತಿಯ ಗೌರವದ ಭಾವನೆಯುಂಟಾಗು ತ್ತದೆ. ಅದರಂತೆ ಡಾಕ್ಟರನು ಕೂಡಾ ಎದ್ದು ಕೈ ಜೋಡಿಸಿ "ನಮಸ್ಕಾರ ಸ್ವಾಮಿ ! ಬನ್ನಿ ! ಬನ್ನಿ !" ಎಂದು ಹೇಳಿ ಆದರ ತೋರಿದ ಮತ್ತು ತನ್ನ ಕುರ್ಚಿಯನ್ನೇ ಸ್ವಲ್ಪ ಈಚೆ ಎಳೆದು "ಕುಳಿತುಕೊಳ್ಳಿ !" ಎಂದು ಬಿನ್ನವಿ ಸಿದ.

"ಛೆ ! ಛೇ ! ನನಗೀ ಕುರ್ಚಿ ಸಾಕು, ಬಿಡಿ!" ಎಂದವರು ಹೇಳಿ ಮತ್ತೊಂದರಲ್ಲಿ ಕುಳಿತರು.

ಯೋಗಕ್ಷೇಮ ಕೇಳಿ ತಿಳಿದುಕೊಂಡ ಮೇಲೆ ಡಾಕ್ಟರ್ ಯೋಚಿಸಿ ನುಡಿದ: "ಒಂದು ಮಾತು ಕೇಳುತ್ತೇನೆ. ಕೇಳಿದೆನೆಂತ ನೀವು ಬೇಸರ ಪಡ ಬಾರದು. ಕೆಲವರು ಸ್ನಾನ ಸಂಧ್ಯಾವಂದನೆ ಮಾಡದೆ ಮುಂಜಾನೆ ಏನನ್ನೂ ತೆಗೆದುಕೊಳ್ಳುವುದಿಲ್ಲ. ಕೆಲವರು ಹೋಟೇಲಿನ ತಿನಸುಗಳನ್ನು ತಿನ್ನಲಾ ರರು. ಹಾಗೇನೂ ಇಲ್ಲವಲ್ಲ!"

ಗೋಪಾಲರಾಯರು ಕೈ ಚಾಚಿ "ಡಾಕ್ಟರರೇ! ನೀವೀಗ ಮತ್ತೆ ಕಾಫಿಗೀಫಿ ತರಿಸುವುದು ಬೇಡ. ನಮ್ಮದೆಲ್ಲ ಆಗಿದೆ." ಎಂದರು !

"ಯಾವಾಗ ಆಗಿದೆ ? ನಿನ್ನೆ ಮುಂಜಾನೆ!"

"ಅಯ್ಯೋ ದೇವರೆ! ನಾನು ಸುಳ್ಳು ಹೇಳುತ್ತೇನೆಂತ ಭಾವಿಸಿದ್ರೇನು? ಊಟ-ಕಾಫಿ ವಿಚಾರಗಳಲ್ಲಿ ಸುಳ್ಳು ಹೇಳಿದರೆ ಯಾರಹೊಟ್ಟೆ ಸಂಕಟಪಡು

ತ್ತದೆಂತ ನನಗೆ ಗೊತ್ತಿಲ್ವಾ! ಏನು ಡಾಕ್ಟರರೇ ನೀವು? ನಸು ಬೆಳಗಿಗೇ ನಮ್ಮ ಗಾಡಿ ಬಂದಿದೆ. ನಮ್ಮ.......ಹೊಟ್ಟೇಲಿನಲ್ಲಿ ಇಳಕೊಂಡು ಸ್ನಾನ ಪಾನ ಎಲ್ಲ ಮುಗಿಸಿಯೇ ಇತ್ತ ಬಂದಿದ್ದಾಯ್ತು! ನಾನು ಹೇಳುವ ಮಾತನ್ನು ಸ್ವಲ್ಪ ಕೇಳಿ!"

ಆದರೂ ಡಾಕ್ಟರನೇ ಅವರ ಮಾತನ್ನು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ಅವನು ಹೊರಟು ರಸ್ತೆಯ ಆಚೆ ಮಗ್ಗುಲಿಗಿರುವ ಹೋಟೇಲಿಗೆ ಹೋದನು. ಬರುವಾಗ ಅವನ ಬೆನ್ನ ಹಿಂದೆ ಹೋಟೇಲ್ ಹುಡುಗನೂ "ತಿಂಡಿ ತೀರ್ಥ" ತಂದ. "ಮತ್ತೆ ಇದೆಲ್ಲ ಯಾವುದಕ್ಕೆ ಡಾಕ್ಟರರೇ?" ಎಂದು ಗೋಪಾಲ ರಾಯರು ಪುನಃಪುನಃ ಕೇಳಿದರು. "ಇರಲಿ ಸ್ವಾಮಿ! ನಿಮ್ಮಲ್ಲಿ ಬಂದಾಗ ನೀವು ಹೇಗೆ ಮಾಡುತ್ತೀರಿ ನೋಡಿ" ಎಂದು ಡಾಕ್ಟರನು ಹೇಳುತ್ತ ಲೋಟಕ್ಕೆ ಕಾಫಿ ಸುರಿದ! ಫಲಾಹಾರದ ಮಧ್ಯೆ ನಗೆಮಾತುಗಳೂ ಹಾರಿ ದುವು. "ಅಲ್ಲ ಡಾಕ್ಟರರೇ, ಹಳ್ಳಿಯವನೂಂತ್ರೆ ನಮ್ಮನ್ನು ತೇಟ್ ಹಳೇ ಗೊಡ್ಡು ಕುಳವಾರಿಗಳನ್ನ ಮಾಡಿದ್ರಲ್ಲ? ಎಲ್ಲಿಯ ಸಂಧ್ಯಾವಂದನೆ! ಎಲ್ಲಿಯ ಜಪತಪ! ಈ ಕಾಫಿ ಇಡ್ಲಿಯ ಮುಂದೆ ಆ ತುಳಸಿ ತೀರ್ಥ ಎಲ್ಲಿರೀ! ಅಂತಹ ಸಂಪ್ರದಾಯವೆಲ್ಲ ಈಗ ಎಲ್ಲಿದೆ ಹೇಳಿ! ಇದ್ದರೂ ಈ ನಿಮ್ಮ ಪೇಟೆಗೆ ಬಂದಾಗ ಅದೆಲ್ಲ ಸಮ ನಡೆದೀತಾ? ಸಂತೆಗೆ ಹೋಗಿ ಮುಟ್ಟಬೇಡ ಸರಿರಿಂತ ಮಡಿ ಮೈಲಿಗೆ ಮಾಡಿದರೆ ಬಂತೇನು? ಪರವಾ ಇಲ್ಲ ನೀವು! ಅಥವಾ ನಾನು ಬಹಳ ಮುದುಕಂತ ಮಾಡಿದಿರೋ ಏನೋ! ನೋಡೋಣ, ನನ್ನ ಹಾಗೆ ಈ ಚಕ್ಕುಲಿ ಕಡಿಯಿರಿ" ಎಂದವರು ಹೇಳಿ ಅದರ ಒಂದು ತುಂಡನ್ನು ಬಾಯೊಳಗೆ ಹಾಕಿ ಕಟಕಟನೆ ಕಡಿಯತೊಡ ಗಿದರು. ಅವರ ಮಾತು, ಕೃತಿ ಕಂಡು ಡಾಕ್ಟರನಿಗೂ ಬಹಳ ಸಂತಸ ವಾಯಿತು.

ಡಾಕ್ಟರ್ ಅವರನ್ನು ಆಸ್ಪತ್ರೆಯ ಒಳಹೊರಗೆ ಕರೆದೊಯ್ದು ತೋರಿ ಸಿದ. ಮಧ್ಯಾಹ್ನದ ಊಟವೂ ಹೋಟೇಲಿನಲ್ಲಿ ಆನಂದರಾಯನ ಲೆಕ್ಕಕ್ಕೇ ಆಯಿತು! ಅನ್ನದ ಆಲಸ್ಯ ಕಳೆಯಲು ಆನಂದ ಆಸ್ಪತ್ರೆಯ ಅಟ್ಟದ ಮೇಲೆಯೇ ಅವರು ಸ್ವಲ್ಪ ಒರಗಿದರು. ಸಂಜೆಯ ಕಾಫಿ ಕೂಡಾ ಅಲ್ಲೇ ಆಯಿತು. ಗೋಪಾಲರಾಯರೊಂದಿಗೆ ಡಾಕ್ಟರ್ ಅತ್ತಿತ್ತ ಓಡಾಡಿದ. ಈ

ಮಧ್ಯೆ ವಿಶೇಷ ಮಾತುಕತೆಯೂ ನಡೆಯಿತು. ಆ ಮಾತಿಗೂ ಆದಿ ಅಂತ್ಯ ವಿಲ್ಲ. ಕಂಡು ಕೇಳಿದ ಸುದ್ದಿ ಸಮಾಚಾರಗಳೆಲ್ಲ ಬಂದುವು. ಯುದ್ಧದ ಸುದ್ದಿ ಕೇಳಲು ಗೋಪಾಲರಾಯರ ಕುತೂಹಲ! ಡಾಕ್ಟರ್ ಹೇಳುತ್ತ ಹೋದಂತೆ ಅವರು ಜಯಾಪಜಯಗಳ ಭವಿಷ್ಯ ನುಡಿದರು! ಅಗಸ್ಟ್ ಚಳವಳಿ, ಗಾಂಧಿ ನೆಹರೂ, ಸುಭಾಸ್ ಇತ್ಯಾದಿ ವಿಷಯಗಳ ಚರ್ಚೆ ಬಂದಾಗ ಅವರ ದನಿ ಇಳಿಯುತಿತ್ತು. ಅಲ್ಲದೆ ಯಾರಾದರೂ ಬಂದರೆಂದು ತಿಳಿದಾಗ ಅವರು ಮಾತನ್ನು ಅಲ್ಲೇ ನಿಲ್ಲಿಸುತಿದ್ದರು. ಮತ್ತೇನೂ ತೋಚದೇ ಇದ್ದಾಗ ಅದು ಮನೆಮಾರು, ಆಸ್ತಿಪಾಸ್ತಿ, ಬಂಧುಬಳಗ, ಹೆಂಡತಿ ಮಕ್ಕಳು, ಊರು ಕಾರುಗಳ ಕಡೆ ಮಾತು ಹೊರಳುತಿತ್ತು. ಮತ್ತು ಒಮ್ಮೆ ಅಂತಹ ಸಂದರ್ಭ ಬಂದಾಗ ಗೋಪಾಲರಾಯರು ಕೇಳಿದರು: "ಅಲ್ಲ, ಡಾಕ್ಟರರೇ! ನೀವೆಲ್ಲ ಹೇಳಿದಿರಿ. ನಾನು ಕೇಳಿದೆ. ನಿಮ್ಮ ವಿಚಾರವೇ ನನಗೆ ಗೊತ್ತಿಲ್ಲವಲ್ಲ! ನಿಮಗೆಷ್ಟು ಮಕ್ಕಳು? ಮನೆ..."

ಅವರು ವಾಕ್ಯ ಪೂರ್ಣ ಮುಗಿಸಿರಲಿಲ್ಲ. ಮುಗಿಸಲು ಆಗಲೂ ಇಲ್ಲ. ಏಕೆಂದರೆ ಡಾಕ್ಟರನ ನಗೆಯಲ್ಲಿ ಅವು ಮುಳುಗಿ ಹೋದುವು. "ಸ್ವಾಮಿ! ನನಗಿನ್ನೂ ಲಗ್ನವೇ ಆಗಿಲ್ಲ! ಎಲ್ಲಿಯ ಮಕ್ಕಳು!'' ಎಂದು ಮತ್ತೆ ಗಹಗಹಿಸಿದ.

"ಹಂ! ಹಂ! ನಮಗೆ ಗೊತ್ತೇ ಇಲ್ಲವಲ್ಲ ಇದು! ಹಂ! ಹಂ! ನಾನು ಒಮ್ಮೆಯೇ ಮಕ್ಕಳೆಷ್ಟೆಂದು ಕೇಳಿಬಿಟ್ಟೆನಲ್ಲ. ಹ! ಹ!" ಎಂದು ಅವರು ಬೇಸರಪಟ್ಟರು!

"ಕೇಳಿದರೇನಾಯ್ತು ಬಿಡಿ! ಈಗಿನ ಕಾಲಕ್ಕೆ ಲಗ್ನವಾಗದೆ ಮಕ್ಕಳಾಗುವವರಿಗೇನು ಕಡಿಮೆಯಿಲ್ಲವಲ್ಲ."

"ಹಂ! ಹಂ! ಅದು ನಿಜ!"

ಗೋಪಾಲರಾಯರು ಕ್ಷಣಹೊತ್ತು ಸುಮ್ಮನಿದ್ದು ಮತ್ತೆ ಸ್ವಲ್ಪ ಗಾಂಭೀರ್ಯದಿಂದ ಅಂದರು: "ಅಲ್ಲ, ಡಾಕ್ಟರರೇ! ನಾನು ಕೇಳಿದೆನಂತ ನೀವು ಸಿಟ್ಟಾಗಬಾರದು ಆಂ!. ನನಗೆ ಬೇಡದ ವಿಷಯ! ಆದರೂ ದೋಸಿ ಮೇಲಿಂದ ಒಂದು ಮಾತು! ನೀವು ಇಷ್ಟರ ವರೆಗೆ ಯಾಕೆ ಲಗ್ನವಾಗಲಿಲ್ಲ?"

ಅವರ ಪ್ರಶ್ನೆ ಸೂಜಿಯಂತೆ ಡಾಕ್ಟರನ ಹೃದಯವನ್ನು ಚುಚ್ಚಿತು.

ಅವನು ಯೋಚನಾ ಮಗ್ನನಾದ. ಅವನು ಉತ್ತರ ಕೊಡುವ ಮೊದಲೇ ಅವರು ಮತ್ತೊಂದು ಬಾಣವನ್ನೆಸೆದರು.

"ಅಂದರೆ ನಿಮಗೆ ಮದುವೆ ಆಗುವ ಮನಸ್ಸೇ ಇಲ್ಲೇನು?"

"ಮನಸ್ಸಿಲ್ಲದೆ ಏನ್ರೀ?"

"ಮತ್ತೆ ಹಾಗಾದರೆ ಯಾಕಾಗುವುದಿಲ್ಲ?"

"ಆಗುವುದಿಲ್ಲ ಅಂದಿಲ್ಲ!"

"ಹಾಗಿದ್ದರೆ ಮತ್ತೆ? ಏನು ನಿಮಗೆ ದುಡ್ಡಿನ ತಾಪತ್ರಯವಾ?"

"ಛೇ! ಛೇ!"

"ಹಾಗಾದರೆ?"

"ಯಾರಾವರೂ ಒಬ್ಬರು ಅದಕ್ಕೇ ನಿಂತು ಕೆಲಸ ಮಾಡಬೇಕಲ್ರೀ? ನನಗೆ ಯಾರಿಲ್ಲ ಅಂತವರು. "ಹಿಂದಿಲ್ಲ ಮುಂದಿಲ್ಲ" ಎಂದು ದಾಸರು ಹೇಳಿದ ಹಾಗೆ! ನಾನಾಗಿ, ಅದಕ್ಕಾಗಿ, ಹೋಗೋಣ ಎಂದರೆ ಆಗುವ ಹೋಗುವ ಮಾತಲ್ಲ. ಅದಕ್ಕೆ ಬಿಡುವೂ ಇಲ್ಲ ಹೇಳಿ! ಹೀಗಾಗಿ ಅದರ ವಿಚಾರವನ್ನೇ ಬಿಟ್ಟುಬಿಟ್ಟಿದ್ದೇನೆ."

"ಛೆ, ಛೇ, ನೀವು ಹಾಗೆ ಹೇಳಿದರೆ ಹೇಗಾದೀತು? ನಿಮ್ಮಂತಹವರು ಹೀಗಿರುವುದು ಸರಿಯಲ್ಲ. ಮದುವೆಯಾಗದ ಮನುಷ್ಯನ ಜೀವದಲ್ಲಿ ನೆಮ್ಮದಿಯಿಲ್ಲ; ಜೀವನದಲ್ಲಿ ಭದ್ರತೆ ಇಲ್ಲ! ನಿಮಗಾಗುವ ಹೆಣ್ಣನ್ನು ಬ್ರಹ್ಮ ಹುಟ್ಟಿಸಿರಲಿಕ್ಕಿಲ್ಲೇನು? ಮದುವೆಯಾಗುವ ಹುಡುಗಿಯರೆಷ್ಟು ಮಂದಿ ಇದ್ದಾರೆ, ಏನು ಕಥೆ? ನಿಮಗೆ ಕೊಡುವುದಿಲ್ಲ ಎಂದರೇನಯ್ಯ! ಒಟ್ಟು ಅದಕ್ಕೂ ಒಂದು ಕಾಲ ಇದೆ ಅನ್ನಿ! ಅದಕ್ಕೂ ಒಂದು ಗಳಿಗೆ ಇದೆ! ಆ ಶುಭ ಗಳಿಗೆ ಬಂದಾಗ ಆಗುವುದಿಲ್ಲವೆಂದರೂ ಅದು ಆಗದೇ ಹೋಗುವುದಿಲ್ಲ." ಎಂದವರು ಹೇಳಿ ಅದಕ್ಕೆ ಅನೇಕ ಉದಾಹರಣೆಗಳನ್ನು ಕೊಟ್ಟರು. ಡಾಕ್ಟರನೊಡನೆ ಬಹಳ ಸಹಾನುಭೂತಿಯಿಂದ ಅವರು ಮಾತನಾಡಿದರು. ಆದುದರಿಂದ ಅವನು ಸಮಯ ಸಾಧಿಸಿ "ನೀವು ಗಾಡಿ ಯಾವಾಗ ಕಟ್ಟುತ್ತೀರಿ?" ಎಂದು ಕೇಳಿದ.

"ರಾತ್ರಿ"

"ನೀವು ಹೊರಡುವ ಮೊದಲು ಇನ್ನೂ ಸ್ವಲ್ಪ ಮಾತನಾಡುವುದಿದೆ.

ಏನೋ ನಿಮ್ಮನ್ನು ಕಂಡಾಗ ಒಂದು ರೀತಿಯ ಗೌರವ. ಅಲ್ಲದೆ ನೀವೆಂದಂತೆ ದೋಸ್ತಿ ಇರುವುದರಿಂದ ಇಷ್ಟೆಲ್ಲ ಮಾತು! ಮನಸ್ಸಿನಲ್ಲಿದ್ದುದನ್ನು ಹೇಳಿಬಿಡಲಾ ಎಂದನಿಸುತ್ತದೆ. ಅದರಿಂದ ನಿಮಗೆ ಬೇಸರವಾಗುವುದಿದ್ದರೆ ಬೇಡ!''

"ಛೆ ಛೆ! ಡಾಕ್ಟರರೇ! ನೀವೆಂತಹ ಜನವಯ್ಯಾ! ನನಗೇನು ಬೇಸರ? ಈ ಹೊತ್ತು ರಾತ್ರಿ ಹೋಗುವುದು ಬೇಡ; ನಾಳೆ ಗಾಡಿ ಕಟ್ಟಿರಿ ಎಂದರೂ ನಾನು ಅದಕ್ಕೆ ತಯಾರ್! ರಾತ್ರಿ ಬೆಳಗಾಗುವ ವರೆಗೆ ಮಾತನಾಡೋಣ! ಏನಂತೀರಿ ನೀವಿದಕ್ಕೆ?"

"ನೀವು ನಮ್ಮಲ್ಲಿ ಈ ಹೊತ್ತು ಉಳಿದರೆ ನಾಳೆ ನಾನು ನಿಮ್ಮೊಂದಿಗೆ ಬಂದರೂ ಬಂದೆನೇ''

"ಖಂಡಿತವಾ? ಖಂಡಿತವಾ? ನೋಡಿ ಮತ್ತೆ!''

"ನೋಡಿ ನೀವು!''

"ಆಗಲಿ! ಹಾಗೇ ಆಗಲಿ!" ಎಂದವರು ಹೇಳಿ ತಮ್ಮ ಕೆಲಸಕ್ಕೆ ಹೊರಟು ಹೋದರು.

ಅದೇ ರಾತ್ರಿ ಅವರಿಬ್ಬರೂ ಮತ್ತೆ ಕೂಡಿ ಮಾತನಾಡಿದರು. ಆನಂದರಾಯ ಗೋಪಾಲರಾಯರೊಡನೆ ಬಾಂಧವ್ಯ ಬೆಳೆಸುವ ಬಯಕೆಯನ್ನು ತಿಳಿಸಿದ. ಅದನ್ನು ಅವನು ಬಹಳ ಸೂಕ್ಷ್ಮವಾಗಿ ನಿವೇದಿಸಿದ. ಕೆಸುವಿನ ಮೇಲೆ ಜಗುಳುವ ಮಳೆ ಹನಿಯಂತೆ ಅವನ ನಾಲಿಗೆಯಿಂದ ಮಾತುಗಳು ಉರುಳಿದುವು! ಗೋಪಾಲರಾಯರು ಅದನ್ನು ಅರಿತುಕೊಂಡರು ಮತ್ತು ಆಕ್ಷೇಪಿಸಲಿಲ್ಲ. ಇದೆಲ್ಲ ಋಣಾನುಬಂಧ, ದೈವಾಧೀನವೆಂದು ಅವರ ನಂಬಿಗೆ. ಗೋತ್ರಗಳು ಸರಿಹೋದರೆ, ಜಾತಕ ಕೂಡಿಬಂದರೆ, ಬಂಧುಗಳು ಒಪ್ಪಿದರೆ ಅವರ ಅಡ್ಡಿ ಇಲ್ಲ. ಹುಟ್ಟಿದ ಸಂವತ್ಸರ ಅವನ ಸ್ಮರಣೆಯಲ್ಲಿದೆ. ಅವನಿಗೆ ೩೧ ವರುಷ. ಅಷ್ಟು ಹೆಚ್ಚೇನಲ್ಲ. ಗೋತ್ರವನ್ನು ಅವನು ಮರೆತಿಲ್ಲ. ಆದುದರಿಂದ ಸಗೋತ್ರವಾಗುವ ಭಯವಿಲ್ಲ. ಬಂಧುಗಳನ್ನು ಕೇಳುವ ಮಾತು! ಅವನಿಗೆ ಯಾರೂ ಇಲ್ಲ! ಅವರೇ ಆಪದ್ಬಾಂಧವ! ಅವರಿವರನ್ನು ಕೇಳುವುದರಲ್ಲೂ ಅವನಿಗೆ ಅರ್ಥ ಕಾಣುವುದಿಲ್ಲ. ಆದರೆ ಅವರಿಗೆ ಮಾತ್ರ ಹಾಗಲ್ಲ. ಬೇರೆ ಯಾರನ್ನಲ್ಲದಿದ್ದರೂ ವಚನ

ಕೊಡುವ ಮೊದಲು ಹೆಂಡತಿಯೊಡನೆ ಒಂದು ಮಾತು ಕೇಳುವ ಇಚ್ಛೆ ಇದೆ. ಜಾತಕ ನೋಡುವುದೂ ಇದೆ! ಜಾತಕ ಅವನ ವಶವಿಲ್ಲ! ಅವನಿಗೆ ಅದರ ಮೇಲೆ ನಂಬಿಗೆಯೂ ಇಲ್ಲ. ಮನೋಘಟನೆಯೇ ಎಲ್ಲಕ್ಕಿಂತಲೂ ದೊಡ್ಡ ಘಟನೆ ಎಂದವನ ತಿಳುವಳಿಕೆ. "ಅದು ನಿಜ" ಎಂದು ಅವರು ನುಡಿದರೂ ಕೂಡಾ ಅದರಂತೆ ನಡೆದುಕೊಳ್ಳುವ ಧೈರ್ಯವಿಲ್ಲ. "ಜಾತಕವಲ್ಲದಿದ್ದರೆ ದೇವರ ಮುಂದೆ ಪುಷ್ಪ ತೆಗೆದು ನೋಡೋಣ'' ಎಂದವರು ನುಡಿದರು. ಅವನಿಗದು ಅನವಶ್ಯವೆಂದು ತೋರಿದರೂ ಅಪ್ರಿಯವೆನಿಸಲಿಲ್ಲ. ಮತ್ತು ನೀವು ನೋಡಿದರೆ ಸಾಕು'' ಎಂದುಸುರಿದ.

"ಛೆ! ಛೇ! ಅದಾಗುವುದಿಲ್ಲ. ನೀವೂ ಇರಬೇಕು'' ಎಂದವರು ಸೂಚಿಸಿದರು.

ಆನಂದರಾಯ ಸ್ವಲ್ಪ ಯೋಚಿಸಿ ಹೇಳಿದ: "ಹಾಗಿದ್ದರೆ ಈ ರೀತಿ ಮಾಡೋಣ. ನೀವು ರಾತ್ರಿ ಗಾಡಿಯಲ್ಲಿ ಹೋಗಿರಿ. ಮುಂಜಾನೆ ನಾನು ಒಂದು ಸೈಕಲ್ ಮಾಡಿಕೊಂಡು ಬರುತ್ತೇನೆ. ಅಲ್ಲೇ ಪುಷ್ಪ ಹಾಕಿ ನೋಡೋಣ. ನಿಮ್ಮ ಮನೆ ದೇವರ ಮುಂದೆ ಕೂಡಾ ಆಗಬಹುದು. ನನ್ನದೇನೂ ಅಡ್ಡಿ ಇಲ್ಲ. ನಿಮ್ಮಿಚ್ಛೆ ಇದ್ದಂತೆ ಆಗಲಿ!''

"ದೈವೀಚ್ಛೆ ಇದ್ದಂತೆ ಆಗಲಿ" ಎಂದವರು ಮಾತು ಮುಗಿಸಿದರು.

ಮರುದಿನ ಮುಂಜಾನೆ ಆನಂದರಾಯನು ಸೈಕಲ್ ಮೇಲೇರಿ ಬಂಗಾಡಿಗೆ ಹೋದ. ಗೋಪಾಲರಾಯರು ಅವನ ದಾರಿ ಕಾಯುತ್ತಿದ್ದರು. ಮನೆ ದೇವರ ಮುಂದೆ ಪುಷ್ಪ ತೆಗೆಸಿ ನೋಡಲು ಅವರು ಇಷ್ಟಪಡಲಿಲ್ಲ. "ಕೊಲ್ಲಿ ದೇವಸ್ಥಾನ ಒಳ್ಳೇದು'' ಎಂದವರು ಅಭಿಪ್ರಾಯಪಟ್ಟರು. ಆನಂದರಾಯ ಅದಕ್ಕೆ ಸಮ್ಮತಿಸಿದ. ಮತ್ತು ಗೋಪಾಲರಾಯರು ಅರವಿಂದ ನನ್ನು ಕೊಲ್ಲಿಗೆ ಮುಂದಾಗಿ ಕಳಿಸಿದ್ದರು.

ಕೊಲ್ಲಿ ದೇವಸ್ಥಾನಕ್ಕೆ ಅವರ ಮನೆಯಿಂದ ಸಾಧಾರಣ ಎರಡು ಮೈಲುಗಳ ದೂರ. ಬಂಗಾಡಿಗೆ ಅದೇ ದೊಡ್ಡಗುಡಿ. ಬಂಗಾಡಿ ಬೈಲಿನ ವಾಯವ್ಯ ಮೂಲೆಯಲ್ಲಿದೆ. ಅದರ ಹಿಂಬದಿ ಘೋರಾರಣ್ಯ. ಇದಿರು ಬಂಗಾಡಿ ಬೈಲು. ದೇವಸ್ಥಾನ ಬಹಳ ದೊಡ್ಡದಲ್ಲ. ಅದರ ಕಟ್ಟಡ ಅಷ್ಟು ಭವ್ಯವಾದುದೂ ಅಲ್ಲ. ಆದರೆ ಗರ್ಭಗುಡಿ, ಮುಖಮಂಟಪಗಳೆಲ್ಲ

ಶಿಲಾನಿರ್ಮಿತ. ಕಂಬಗಳೆಲ್ಲ ಕಲ್ಲಿನವು. ಗೋಡೆಗೆ ಕೂಡಾ ಕಲ್ಲಿನ ದೊಡ್ಡ ದೊಡ್ಡ ತುಂಡುಗಳು, ಮಾಡಿಗೆ ಕಲ್ಲಿನಹಲಿಗೆಯ ಛಾವಣೆ! ಯಾವ ಕಾಲದ ಗುಡಿಯೋ, ಯಾವ ರಾಯನ ಕೈವಾಡವೋ! ಬಲ್ಲಾಳರಾಯ ಕಟ್ಟಿಸಿದ ನೆಂಮ ಕೆಲವರು ಹೇಳುತ್ತಾರೆ. ದೇವರು ಪೂರ್ವಕ್ಕೆ ಮುಖಮಾಡಿ ಬಲ್ಲಾಳ ರಾಯನ ದುರ್ಗವನ್ನು ನೋಡುತ್ತಿರುವುದರಿಂದ ಹಾಗೆ ನುಡಿವರು. ಬಂಗಾಡಿಯ ಚಂದ್ರಶೇಖರ ಬಂಗರಾಜ ರಚಿಸಿದನೆಂದು ಇನ್ನೂ ಅನೇಕರ ನಂಬಿಗೆ. ಅದೇನಿದ್ದರೂ ಇದು ಅತ್ಯಂತ ಪುರಾತನವಾದುದು. ಹೊದೆಸಿದ ಕಲ್ಲಿನ ಹಲಿಗೆ ಹಂಚುಗಳು ಮೇಲೆ ಚಲಿಸುವ ಮಳೆಗಾಲದ ಮುಗಿಲಿನ ಬಣ್ಣದೊಂದಿಗೆ ಸೆಣಸಾಡುತ್ತಿವೆ. ಕತ್ತಲೆ, ಗೋಡೆಯ ಕಲ್ಲಿನ ಅಣು ಅಣುಗಳಲ್ಲಿ ಸೇರಿ ಕರಿಕಟ್ಟಿದೆ. ಬಾವಲಿ, ಗಬ್ಬಿಲಗಳಿಗೆ ಅದು ಗುಹೆ. ಮುಸು, ಮಂಗ, ಅಳಿಲುಗಳಿಗೆ ಅದು ನಿತ್ಯ ವಿಹಾರಸ್ಥಳ. ಗುಡಿಯ ಸುತ್ತಲೂ ಬೆಳೆದಿರುವ ಆಲ, ಮಾವು, ಅಶ್ವತ್ಥ ಮರಗಳೂ ಅವುಗಳಿಗೆ ಒಳ್ಳೇ ಆಶ್ರಯ. ಗುಡಿಯ ಬಲಕ್ಕೆ "ತಲೆಯ ಮೇಗಡೆ ಬೇರು, ಕೆಳಗೆ ಕೊಂಬೆಲೆ ಚಿಗುರು'' ಗಳಿಂದ ವಿಸ್ತಾರವಾಗಿ ವ್ಯಾಪಿಸಿ ಬೆಳದಿರುವ ಅಂತಹ ಒಂದು ಗೋಳಿಮರದ ನೆರಳಲ್ಲಿ ಭೂತ ಸ್ಥಾನವಿದೆ. ಇದಿರಿನ ತೇರು ಬೀದಿಯ ಅಕ್ಕಪಕ್ಕಗಳಲ್ಲೂ, ಗುಡಿಯ ಹಿಂಬದಿಯಲ್ಲೂ ಘೋರಾರಣ್ಯವಿದೆ. ಹೀಗಾಗಿ ಅಲ್ಲೊಂದು ರೀತಿಯ ಭಯದ ವಾತಾವರಣವಿದೆ. ದೇವರ ದರ್ಶನಾಪೇಕ್ಷಿಗಳು ವಿರಳ. ವರುಷಂಪ್ರತಿ ನೆರೆವ ಉತ್ಸವಕ್ಕೆ ಜನಜಾತ್ರೆಯಾಗುತ್ತದೆ. ನವರಾತ್ರಿ ದೀಪಾವಳಿಗಳಿಗೆ ಆಚೆ ಈಚೆ ಇರುವ ಕೆಲವು ಜನ ಬರುತ್ತಾರೆ. ಉಳಿದ ಸಮಯ ಆರಾಧನೆಯ ಕ್ರಮಗಳನ್ನೆಲ್ಲ ಅರ್ಚಕರು ತಪ್ಪದೇ ನಡೆಸುತ್ತಾರೆ! ಅದಕ್ಕಾಗಿ ವರುಷಂಪ್ರತಿ ದೇವಸ್ಥಾನಕ್ಕೆ ಸರಕಾರದಿಂದ ಬರುವ ತಸದೀಕಿನಲ್ಲಿ, ವಿಧವೆಗೆ ಕೊಡುವ ಅಶನಾರ್ಥದ ಹಾಗೆ ಅಲ್ಪಸ್ವಲ್ಪ ಅವರಿಗೆ ದೊರೆಯುತ್ತದೆ. ಅಷ್ಟರಿಂದಲೇ ಅವರ ಹೊಟ್ಟೆ ಬಟ್ಟೆ ನಡೆಯುವುದು ಕಠಿನ. ಆದುದರಿಂದ ಮಂತ್ರ, ತಂತ್ರ, ಜ್ಯೋತಿಷ್ಯ, ಭವಿಷ್ಯ, ಮದುವೆಮುಂಜಿಗಳನ್ನು ಅವರು ಕೈಕೊಂಡಿದ್ದಾರೆ. ಅದರಲ್ಲೇ ಹೊತ್ತು ಹೋಗುತ್ತದೆ. ಹೀಗಾಗಿ ಕೊಲ್ಲಿ ದೇವರ ಪೂಜೆಗೆ ಹೊತ್ತು ಗೊತ್ತಿಲ್ಲ. ಒಂದು ದಿನ ಸೂರ್ಯೋದಯಕ್ಕೆ ಬಾಗಿಲು ತೆಗೆದರೂ ತೆಗೆದರೇ! ಇನ್ನೊಂದು ದಿನ ನಿರ್ಮಾಲ್ಯತೊಳೆದು

ಅಭಿಷೇಕವಾದಾಗ ಸೂರ್ಯ ನಡುನೆತ್ತಿಗೆ ಬರುತ್ತಾನೆ. ಮತ್ತೊಂದು ದಿನ ದೇವರು ಗಂಧಾಕ್ಷತೆ ಧಾರಣ ಹೊಂದಿದಾಗ ಸೂರ್ಯ ಗುಡಿಯ ಹಿಂದಿನ ಕುದುರೆ ಮುಖ ಶಿಖರದ ಆಚೆ, ಮರೆಯಾಗುವುದೂ ಉಂಟು.

ಗೋಪಾಲರಾಯರು ಇದನ್ನು ಚೆನ್ನಾಗಿ ಬಲ್ಲರು. ದೇವಸ್ಥಾನದಲ್ಲಿ ಪುಷ್ಪ ತೆಗೆಸಿ ನೋಡಲು ನಿರ್ಧರಿಸಿ ಆಗಿದೆ. ಆನಂದರಾಯನೂ ಬಂದಿರು ವನು. ಸ್ನಾನ ಸಂಧ್ಯಾವಂದನೆ, ದೇವರ ಪೂಜೆ ಇತ್ಯಾದಿ, ಮುಗಿಸಿ ಕೊಲ್ಲಿಗೆ ಹೋದಾಗ ಸ್ವಲ್ಪ ಹೊತ್ತಾಗುತ್ತದೆ. ಅಷ್ಟರೊಳಗೆ ಅಲ್ಲಿ ಪೂಜೆ ಮುಗಿದು ಹೋದರೆ ಕೆಲಸವಾಗುವುದಿಲ್ಲ. ಅಲ್ಲದೆ ಅದೊಂದು ದೊಡ್ಡ ಅಪಶಕುನ! ಅದರ ಬದಲು ಪೂಜೆ ಮೂರು ನಾಲ್ಕು ಗಂಟೆಗಾದರೂ ಅನಾನುಕೂಲವೇ ಸರಿ. ವ್ಯರ್ಥ ಅಷ್ಟು ಹೊತ್ತು ಕಾಯುತ್ತ ಕುಳಿತಿರಬೇಕು. ಬಂದ ಅತಿ ಥಿಯ ಹೊಟ್ಟೆ ಒಣಗಿಸಬೇಕು! ಅದು ಸರಿಯಲ್ಲ. ಆದುದರಿಂದ "ಇಷ್ಟು ಹೊತ್ತಿಗೆ, ಇಂತಹ ಕೆಲಸಕ್ಕೆ ನಾವು ಬರುತ್ತೇವೆ. ಬಂದ ಮೇಲೆಯೇ ಪೂಜೆ ಮಾಡಬೇಕು" ಎಂದು ಅರವಿಂದನ ಮೂಲಕ ಅವರು ಅರ್ಚಕರಿಗೆ ಹೇಳಿ ಕಳಿಸಿದರು. ಪುಣ್ಯಕ್ಕೆ ಅವರು ಆ ದಿನ ಮಾಟ, ಮಂತ್ರ, ಬಲಿಮೆ, ಗೃಹ ಪ್ರವೇಶ, ನಾಮಕರಣ, ನಾಗಪ್ರತಿಷ್ಠೆ ಎಂದು ನೆವ ಹೇಳಿ ಹೊರಟಿರಲಿಲ್ಲ. ಅರವಿಂದ ತಂದೆಯ ಸಂದೇಶ ಮುಟ್ಟಿಸಿದ ಕೂಡಲೇ ಅವರು "ಓಹೋಹೋ! ಪರಮ ಸಂತೋಷ! ಅವರು ಬಂದಮೇಲೆಯೇ ಮಂಗಳಾರತಿ ಮಾಡು ತ್ತೇನೆ! ಹಾಗೇ ಆಗಲಿ!" ಎಂದು ಹೇಳಿ ಹಾರಾಡಿದರು.

ಸೂರ್ಯ ನೆತ್ತಿಗೇರಲು ಇನ್ನೂ ಅಷ್ಟು ದೂರದಲ್ಲಿದ್ದಾಗಲೇ ಗೋಪಾಲ ರಾಯರ ಪೂಜೆ ಪುನಸ್ಕಾರಗಳು ಮುಗಿದುವು. ಅವರು ಜಪತಪಕ್ಕೆ ಕುಳಿತ ನೇರಳೆ ಬಣ್ಣದ ಪಟ್ಟೆ ಮಡಿಯಲ್ಲೇ ಹೊರಡಲು ಸಿದ್ಧರಾದರು. ಆನಂದ ರಾಯನಿಗೆ ಅಂತಹ ಮಡಿ ಮೈಲಿಗೆಯ ಸಂಪ್ರದಾಯಗಳು ಅನವಶ್ಯವಾಗಿವೆ. ಶುಭ್ರಬಟ್ಟೆಯೇ ಮಡಿ ಎಂದವನ ತಿಳುವಳಿಕೆ. ಆದುದರಿಂದ ಅವನ್ನೇ ಧರಿಸಿ ನಿಂತ. ದೇವಸ್ಥಾನ ದೂರವಿದ್ದುದರಿಂದ ಜಲಜಮ್ಮ ಬರಲಿಲ್ಲ. ಬರುವ ಸಂಪ್ರದಾಯವೂ ಇಲ್ಲ. ಕಾವೇರಿಯಂತೂ ಕನ್ಯೆ. ಅರವಿಂದ ಹಣ್ಣು ಕಾಯಿ ಹರಿವಾಣ ಹಿಡಿದುಕೊಂಡ. ಮೂವರು ಒಟ್ಟಿಗೆ ಹೊರಡಬಾರದೆಂದು ಅರ ವಿಂದನನ್ನು ಗೋಪಾಲರಾಯರು ಸ್ವಲ್ಪ ಮೊದಲೇ ಕಳಿಸಿದರು. ಸ್ವಾಮಿಗಳ

ಮುಂದೆ ಹೋಗುವ ಗಿಂಡಿ ಮಾಣಿಯಂತೆ ಅವನು ಗಾಡಿ ರಸ್ತೆ ತೊರೆದು ಒಳದಾರಿ ಹಿಡಿದು ಹೋದ. ತಂದೆ ಮತ್ತು ಆನಂದರಾಯ ನೆಟ್ಟಗೆ ಹಿಂದಿನಿಂದ ಬಂದಾಗ ಯಾರಾದರೂ ಕೆಂಪು ವಸ್ತ್ರಧಾರಿಗಳು, ಮಡಿಕೆ ಹೊತ್ತ ಕುಂಬಾರರು, ವಿಧವೆಯರು ಇದಿರಾಗಬಾರದೆಂದು ಅವನು ಅವರ ಆಜ್ಞೆಯಂತೆ ಕಣ್ಣಿನಲ್ಲಿ ಎಣ್ಣೆ ಹಾಕಿಕೊಂಡು ಆಚೀಚೆ ನೋಡುತ್ತ ನಡೆದ! ದಾರಿಯಲ್ಲಿ ಸುಳಿವ ನಾಯಿಗಳ ಮೇಲೂ ಅವನದು ವಕ್ರದೃಷ್ಟಿ. ಬಾಳೆಹಣ್ಣನ್ನು ಕಂಡು ಅಕ್ಕಪಕ್ಕದ ಮರದಲ್ಲಿ ಕುಳಿತು ಕಿರಿಚಿವ ಕೆಂಪಣ್ಣನವರಿಗೂ ಕಲ್ಲಣ್ಣನ ಪೂಜೆ ಆಯಿತು. ಅವನು ಕೊಲ್ಲಿ ಸೇರಿದಾಗ ಭಟ್ಟರೂ ಪೂಜಾ ವಿಧಿವಿಧಾನಗಳಲ್ಲಿ ತೊಡಗಿದ್ದರು.

ಗೋಪಾಲರಾಯರು ಕೈಕಾಲು ತೊಳೆದುಕೊಂಡು ಗುಡಿಗೆ ಪ್ರವೇಶಿಸಿದರು. ಕೈಜೋಡಿಸಿಕೊಂಡು, ನಾಮಸ್ತೋತ್ರ ಪಠಿಸುತ್ತ ಗರ್ಭಗುಡಿಗೆ ಪ್ರದಕ್ಷಿಣೆ ಬಂದರು. ಆ ಮೇಲೆ ಮುಖಮಂಟಪಕ್ಕೆ ಏರಿ ದೇವರಿಗೆ ಸಾಷ್ಟಾಂಗ ನಮಸ್ಕಾರ ಹಾಕಿದರು. ಪೂಜೆಗೆ ಹೊತ್ತಾಯಿತು. ಮೂರ್ತಿಯ ಪಕ್ಕಕ್ಕೆ ಹಚ್ಚಿದ ನಂದಾದೀಪದ ಜ್ವಾಲೆಗೆ ದೇವರ ಮುಖ ಕಾಣುತ್ತದೆ. ಸರ್ವಾಂಗಗಳಿಗೂ ಮಲ್ಲಿಗೆ, ಗೋರಟಿಗೆಗಳನ್ನು ಏರಿಸಲಾಗಿದೆ. ಭಟ್ಟರು ಗಟ್ಟಿಯಾಗಿ ವೇದಮಂತ್ರಗಳನ್ನು ಘೋಷಿಸುತ್ತ ಆರತಿಗಾರಂಭಿಸಿದರು. ಗೋಪಾಲರಾಯರು ಅದೇ ಮಂತ್ರಗಳನ್ನು ಭಟ್ಟರೊಂದಿಗೆ ಪುನರುಚ್ಚರಿಸುತ್ತ ಕೈಮುಗಿದು ನಿಂತರು. ಮೇಲೆ ಜೋತಾಡುತಿದ್ದ ಗಂಟೆಗಳನ್ನು ಅರವಿಂದ ಬಾರಿಸ ತೊಡಗಿದ. ಆನಂದರಾಯ ಕೈಜೋಡಿಸಿ ಮೂಕ ಪಶುವಿನಂತೆ ನಿಂತುಕೊಂಡ. "ಈಗ ಮಂಗಳಾರತಿಯಾಗುತ್ತದೆ" ಎಂದು ಭಟ್ಟರು ಒಳಗಿಂದಲೇ ಹೇಳಿ, ಎದ್ದು ಎಡಗೈಯ್ಯಲ್ಲಿದ್ದ ಗಂಟಾಮಣಿಯನ್ನು ಕೆಳಗಿಟ್ಟು ಎರಡೂ ಕೈಗಳಲ್ಲಿ ದೊಡ್ಡ ಆರತಿಯನ್ನು ಎತ್ತಿ ಬೆಳಗಿದರು. ಆ ಮೇಲೆ ಎಲ್ಲರೂ ಏಕಕಾಲದಲ್ಲಿ ದೇವರಿಗೆ ಎರಗಿದರು. ಭಟ್ಟರು ಸ್ವತಃ ಮಂಗಳಾರತಿ ತೋರಿಸಿ, ತೀರ್ಥ ಪ್ರಸಾದ ಕೊಟ್ಟರು. ಆ ಮೇಲೆ ಒಂದು ಹರಿವಾಣ ತುಂಬಾ ಮಲ್ಲಿಗೆ ಹೂ ತುಂಬಿ ಮುಖಮಂಟಪಕ್ಕೆ ಬಂದು "ಇನ್ನು ನೀವಿಬ್ಬರೂ ನಿಮ್ಮ ನಿಮ್ಮ ಗುರುಹಿರಿಯರು, ಕುಲದೇವರನ್ನು ನೆನಸಿಕೊಳ್ಳಿ. ಆ ಮೇಲೆ ಮನಸ್ಸಿನಲ್ಲಿ ಬಗೆದ ಮಂಗಲ ಕಾರ್ಯಕ್ಕೆ ಮಧುಸೂಧನನ ಕೃಪೆಕೋರಿ ಪ್ರಾರ್ಥಿಸಿಕೊಳ್ಳಿ!

ದೇವರು ನಿಮ್ಮನ್ನು ಅನುಗ್ರಹಿಸಲಿ!" ಎಂದು ಅವರೂ ಪ್ರಾರ್ಥಿಸಿ, ಹರಸಿ, ಹರಿವಾಣಕ್ಕೆ ಕೈ ಹಾಕಿ ಸ್ವಲ್ಪ ಹೂವನ್ನು ತೆಗೆದು ಗೋಪಾಲರಾಯರ ಕೈಯಲ್ಲಿ ಕೊಟ್ಟರು. ಅವರು ಜೋಡಿ ಹೂಗಳನ್ನು ಬೇರೆ ಬೇರೆ ತೆಗೆದಿಟ್ಟರು. ಕೊನೆಗೆ ಒಂದು ಒಂಟಿ ಹೂ ಉಳಿಯಿತು. ಅವರ ಮೋರೆ ನಗುವಿನಿಂದ ಅರಳಿತು. "ದೈವೀಚ್ಛೆ ಇದೆ" ಎಂದು ಭಟ್ಟರೂ ಸಂತೋಷಪಟ್ಟರು. ಪುನಃ ಅವರು ಹೂ ತೆಗೆದು ನೋಡಲಿಲ್ಲ. ಏಕೆಂದರೆ ಪ್ರಥಮ ಸಲ ಸರಿ ಜೋಡಿ ಬಂದರೆ ಆಗಲಿಲ್ಲವೆಂದರಿತು ಪುನಃ ಪುನಃ ಮೂರು ಸಲ ತೆಗೆದು ಲೆಕ್ಕಿಸುವುದು ಲೋಕರೂಢಿ. ಮೊದಲೇ ಮುಗುಳಿ ಪುಷ್ಪಗಳು ಬಂದರೆ ಪುನಃ ದೈವಪರೀಕ್ಷೆಯ ಅಗತ್ಯವಿಲ್ಲ. ಆನಂದರಾಯನಿಗೆ ಗೋಪಾಲರಾಯರು ಇದನ್ನು ಸ್ಪಷ್ಟಪಡಿಸಿದರು. ಅವನು ಸುಮ್ಮನೆ ತಲೆ ಅಲ್ಲಾಡಿಸಿದ. ಆದರೆ ಅವನ ಹೃದಯ ಇಷ್ಟು ಹೊತ್ತಿನ ವರೆಗೂ ಕೊಪ್ಪರಿಗೆ ನೀರಿನಂತೆ ಕುದಿಯುತಿತ್ತು. ದೈವ ಪರೀಕ್ಷೆಯ ಈ ಪದ್ಧತಿಯ ಬಗ್ಗೆ ಎಳ್ಳಷ್ಟೂ ಭಕ್ತಿ ಅವನಲ್ಲಿರಲಿಲ್ಲ. ಆದರೆ ಭಯವಿತ್ತು. ಆ ಭಯ ದೇವರ ಭಯವೂ ಅಲ್ಲ. ಸಂಶಯದ ಭೀತಿ! ಈ ರೀತಿ ಪುಷ್ಪ ತೆಗೆದು ಪರೀಕ್ಷಿಸುವುದು ಒಂದು ರೀತಿಯ ಜೂಜು ಎಂದವನ ಕಲ್ಪನೆ. ಅದರಲ್ಲೊಂದು ದೈವೀ ಚಮತ್ಕಾರ, ಮಹಿಮೆಗಳಿವೆ ಎಂದು ಅವನು ನಂಬಲಾರ. ಅದೃಷ್ಟದ ಆಟಗಳಲ್ಲಿ ಇದು ಒಂದು ಪಗಡೆಯ ಆಟ. ಆದರೆ ಅರ್ಚಕರ ಮಾತು ಒತ್ತಟ್ಟಿಗಿರಲಿ, ವಿದ್ಯಾವಿನಯ ಸಂಪನ್ನರಾದ ಗೋಪಾಲರಾಯರೂ ಈ ಕ್ಷುಲ್ಲಕ ವಿಧಿಗೆ ಇಷ್ಟು ಮಹತ್ವ ಕೊಟ್ಟುದುದೂ ಅದರ ಮೇಲೆ ಸಂಪೂರ್ಣ ಭಕ್ತಿ ವಿಶ್ವಾಸದಿಂದ ನಡೆದುಕೊಂಡುದುದೂ ಅವನಿಗೇ ತುಂಬಾ ಆಶ್ಚರ್ಯವನ್ನುಂಟು ಮಾಡಿದೆ. ಏನೋ ಅವನ ಅದೃಷ್ಟ ಒಳ್ಳೇದು. ಒಳ್ಳೇದಾಯಿತು. ಒಂದು ವೇಳೆ ಕೂಡಿ ಬಾರದೇ ಇದ್ದರೆ ಗೋಪಾಲರಾಯರು ಮುಂದೆ ಬಂಧುತ್ವದ ವಿಚಾರಕ್ಕೆ ತಿಲಾಂಜಲಿ ಎರೆಯುತ್ತಿದ್ದರೆಂದು ಅವನು ಖಂಡಿತವಾಗಿಯೂ ಮನಗಂಡ.

ದೇವಸ್ಥಾನದಲ್ಲಿ ಪುಷ್ಪ ತೆಗೆಸಿ ನೋಡುವುದೆಂದರೆ ಒಂದು ರೀತಿಯಲ್ಲಿ ನಿಶ್ಚಯ ತಾಂಬೂಲವಾದಂತೆಯೇ ಸರಿ. ಕೊಡುವ ತೆಗೆದುಕೊಳ್ಳುವ ಮನಸ್ಸಿದ್ದರೆ ಮಾತ್ರ ಈ ದೈವೀ ಪರೀಕ್ಷೆಯ ನಿರ್ಣಯಕ್ಕೆ ಬರುತ್ತಾರೆ. ಅದು ಇಷ್ಟ ಫಲಪ್ರಾಪ್ತಿಯಾಗಿ ಪರಿಣಮಿಸಿದ ಮೇಲೆ ಮುಂದೆ ಎರಡೂ ಪಕ್ಷದ

ವರು ಕೂಡಿ ಸೀರೆ ಆಭರಣ ಇತ್ಯಾದಿ ಕನ್ಯಾಲಂಕಾರ, ಮದುವೆಯ ದಿನ ಮತ್ತು ಸ್ಥಳಗಳ ನಿಶ್ಚಯ ನಿಷ್ಕರ್ಷೆ ಮಾಡಿಕೊಳ್ಳುವರು. ಕೈಗೆ ಎರಡೆರಡು ಚಿನ್ನದ ಬಳೆ, ಕೊರಳಿಗೆ ಒಂದು ಸರ, ಮಂಗಳ ಸೂತ್ರ ಇವುಗಳನ್ನು ಗೋಪಾಲರಾಯರೇ ಮಾಡಿಸಬೇಕೆಂದೂ ಅದಕ್ಕೆ ತಗಲುವ ವೆಚ್ಚವನ್ನು ತಾನು ಅವರಿಗೆ ಕೂಡಲೇ ಕೊಡುವೆನೆಂದೂ ಆನಂದರಾಯ ತಿಳಿಸಿದ. ಮದುವೆ ಮಾತ್ರ ಬೇಗನೇ ಆಗಬೇಕೆಂದು ಅವನ ಅತ್ಯಾತುರ. "ಮಳೆಗಾಲ ಬರಲು ಇನ್ನು ತಡವಿಲ್ಲ. ಹೆಚ್ಚೆಂದರೆ ಇನ್ನೊಂದೆರಡು ವಾರ! ಅಷ್ಟರೊಳಗೇ ಆದರೆ ಒಳ್ಳೇದು" ಎಂದವನ ಮತ! ಹೌದು. ಮತ್ತೆ ಬಂಗಾಡಿಗೆ ಬಂದು ಹೋಗಲೂ ಅಸಾಧ್ಯ. ಮೂರು ನಾಲ್ಕು ತಿಂಗಳು ಮದುವೆಯನ್ನು ಮುಂದೆ ಹಾಕಿದಂತೆಯೇ ಸರಿ. ಅಷ್ಟು ಕಾಲ ವಿಲಂಬ ಮಾಡಲು ಅವನಿಷ್ಟವಿಲ್ಲ. ಬೇಗನೇ ಆಗಬೇಕು. ಮತ್ತು ರಾಮೇಶ್ವರ ಅಥವಾ ತಿರುಪತಿಯಲ್ಲಿ ಮದುವೆಯಾಗುವುದೂ ಲೇಸೆಂದು ನುಡಿದ.

ಗೋಪಾಲರಾಯರು ಈ ರೀತಿ ಏಳನೇ ತಿಂಗಳಲ್ಲಿ ಹುಟ್ಟಿ ಬಂದವರಲ್ಲ. ಈಗಲೇ ಅವಸರ ಅವಸರದಿಂದ ಕೆಲಸವಾಗಿದೆಯೆಂದು ಅವರ ಮನಸ್ಸಿನೊಳಗೊಂದು ಕಳ್ಳ ಅಡಗಿ ಕೂತಿದೆ. ಹುಡುಗಿಗೆ ಆಭರಣ ಮಾಡಿಸಲು ಕೆಲವು ವಾರಗಳು ಬೇಕು. ಅನ್ಯರಾರೂ ಅಲ್ಲದಿದ್ದರೂ ಹೆಂಡತಿಯು ಕಡೆಯ ಹೇಮಾಭೀಮರಿಗೆ ತಿಳಿಸದಿದ್ದರೆ ಅಪವಾದ ಬರುವ ಭೀತಿಯಿದೆ. ಅದಕ್ಕೆ ಸ್ವತಃ ತಾನು ಹೋಗಬೇಕು. ಅಥವಾ ಅರವಿಂದನನ್ನಾದರೂ ಕಳಿಸಬೇಕು. ಇದೆಲ್ಲ ದಿನ, ಎರಡು ದಿನಗಳಲ್ಲಿ ಮುಗಿಯುವ ಕೆಲಸವಲ್ಲ. ರಾಮೇಶ್ವರ, ತಿರುಪತಿಗಳಲ್ಲಿ ಮದುವೆಯಾಗುವುದು ಶ್ರೇಯಸ್ಕರವೇ! ಆದರೆ ದೇವಸ್ಥಾನದಲ್ಲೇ ಮದುವೆಯಾಗುವುದಿದ್ದರೆ ಅದಕ್ಕೆ ಅಲ್ಲಿ, ಅಷ್ಟು ದೂರ ಹೋಗಬೇಕೆಂದೇನು? ಇಲ್ಲಿ, ಈ ಕೊಲ್ಲಿ ದೇವರ ಮುಂದೆ ಯಾಕಾಗಬಾರದು? ದೇವರೆಂದರೆ ಎಲ್ಲ ಒಂದೇ! ಎಲ್ಲ ಕಡೆಗಳಲ್ಲೂ ಇದ್ದಾನೆ! ಅಲ್ಲದೆ ಅಷ್ಟು ದೂರದ ಪ್ರಯಾಣ ಕಷ್ಟ ನಷ್ಟಗಳೆಲ್ಲ ಉಳಿಯುತ್ತವೆ. ಮದುವೆಗೆ, ಇದ್ದ ನಾಲ್ಕು ಜನ ನೆಂಟರೂ ಅಷ್ಟು ದೂರ ಬರಲಾರರು. ಕರೆದುಕೊಂಡು ಹೋಗುವುದೆಂದರೆ ಖರ್ಚು. ಇಂತಹ ಉಭಯ ಸಂಕಟ ಉಚಿತವಲ್ಲ. ಅದಕ್ಕಿಂತ ಅದೇ ಖರ್ಚಿಗೆ, ಇಲ್ಲೇ, ಈ ಹಿರಿಯರ ಮನೆಯಲ್ಲೇ, ಹೂವಿನ ಬದಲು

ಹೂವಿನ ಎಸಳಾದರೂ ಹಾಕಿ, ಧಾರೆಯೆರೆಯುವುದು ಧರ್ಮ. ಅವರಿಗೆ ಇರುವ ಹೆಣ್ಮಗಳೂ ಓಬ್ಬಳೇ. ಸ್ವಲ್ಪ ಹೆಚ್ಚಾದೀತು; ಸ್ವಲ್ಪ ಕಡಿಮೆ ಆದೀತು; ಅವನ್ನೆಲ್ಲ ನೋಡುವುದರಲ್ಲಿ ಅರ್ಥವಿಲ್ಲ. ಊರಿನ ಜನರೂ ಏನಂದಾರು? ದೈವ ದೇವರು ಮೆಚ್ಚುವ ಕಾರ್ಯವೂ ಅಲ್ಲ ಇತ್ಯಾದಿ ವಿಚಾರಗಳನ್ನು ಅವರು ಅರುಹಿದರು.

"ಆಗಲಿ! ಇಲ್ಲೇ ಆಗಲಿ! ಹೇಗಾದರೂ ಮಾಡಿ ನೀವು ಒಂದು ದಿನದೊಳಗೆ ಮುಗಿಸಿ ಬಿಡಿ. ಅದಕ್ಕೆ ವಿಶೇಷ ವೆಚ್ಚ, ವಿಜ್ರಂಭಣೆ ಮಾಡುವುದೂ ಅಗತ್ಯವಿಲ್ಲ. ನಾವು ಬರುವವರು, ಬಹಳ ಜನರಿಲ್ಲ. ನಮ್ಮಿಂದ ನಿಮಗೆ ಯಾವುದೇ ರೀತಿಯ ತೊಂದರೆಯೂ ಆಗಲಾರದು. ಹಾಗಿರುವಾಗ ನೀವು ಆದಷ್ಟು ಬೇಗನೇ ಮಾಡಿ ಮುಗಿಸಿದರೆ ಒಳ್ಳೇದು" ಎಂದವನು ತಿಳಿಸಿದ.

ಅವರು ಮನೆಯಿಂದ ಸ್ವಲ್ಪ ದೂರದ ವರೆಗೂ ಬಂದು "ಈ ವಿಷಯದಲ್ಲಿ ಸ್ವಲ್ಪ ಅವಕಾಶ ಕೊಡಿ. ಏನೆಂಬುದನ್ನು ನಾನು ಇನ್ನೂ ವಿಚಾರಿಸಿ ಕೆಲವು ದಿನಗಳ ಮೇಲೆ ತಿಳಿಸುತ್ತೇನೆ. ಜೋಯಿಸರನ್ನು ಕಂಡು ಲಗ್ನ ಮುಹೂರ್ತ ಯಾವಾಗ ಇದೆ, ಇಲ್ಲ ಎಂದು ಕೇಳುತ್ತೇನೆ. ನಾನು ಬಂದರೂ ಬಂದೆ; ಅರವಿಂದನನ್ನು ಕಳಿಸಿದರೂ ಕಳಿಸಿದೆ" ಎಂದಂದು ಬೀಳ್ಕೊಂಡರು.

ಆನಂದರಾಯನಿಗೆ ಹೋದಾಗ ಇದ್ದ ಉತ್ಸಾಹ ಬಂದಾಗ ಉಳಿಯಲಿಲ್ಲ. ಅವನು ಹೋದುದು ಮುಂಜಾನೆ. ಆದುದರಿಂದ ದೇಹ ಹೆಚ್ಚು ಶಕ್ತಿಯುತವಾಗಿತ್ತು. ಇಳಿಜಾರು ರಸ್ತೆಯಲ್ಲಿ ಗಾಲಿಗಳು ತನ್ನಿಂದ ತಾವೇ ಉರುಳುತಿದ್ದುವು! ಯಾವುದೋ ಒಂದು ಅದೃಶ್ಯರೂಪ ಅವನ ಮನಸ್ಸನ್ನು ಹಿಡಿದೆಳೆದಂತಾಗುತಿತ್ತು. ಬೇಗನೆ ಬಂಗಾಡಿ ಮುಟ್ಟಿದ. ಆದರೆ ಮರಳಿದುದು ಮಧ್ಯಾಹ್ನದ ಮೇಲೆ! ಹೊಟ್ಟೆ ಭಾರ. ಕೈಕಾಲುಗಳ ಶಕ್ತಿ ಉಡುಗಿದೆ. ರಸ್ತೆ ಕೂಡಾ ಏರು ಪೇರು! ಗೋಪಾಲರಾಯರು ಯಾವ ನಿಶ್ಚಿತ ಉತ್ತರವನ್ನೂ ಕೊಡಲಿಲ್ಲ. ಅಲ್ಲದೆ ಕನ್ಯೆಯ ಮುಖದರ್ಶನ ಲಾಭ ಕೂಡಾ ಆಗದಿದ್ದುದರಿಂದ ಮನಸ್ಸಿಗೆ ನೆಮ್ಮದಿಯಿಲ್ಲ. ಮನೆಯೊಳಗೆ, ಹೊರಗೆ, ಎಲ್ಲೆಲ್ಲೂ ಅವಳ ಸಾನ್ನಿಧ್ಯವನ್ನು ಅವನು ಗುರುತಿಸಿದ. ಆದರೆ ಅವಳನ್ನು ಕಾಣಲಿಲ್ಲ. ಬಳೆಗಳ ಕಿಣಿ ಕಿಣಿ ನಿನಾದವನ್ನು ಆಲಿಸಿದ. ಆದರೆ ಅವಳ ಮಾತುಗಳು ಕೇಳಿಸಲಿಲ್ಲ. ಗೋಡೆಯಲ್ಲಿ ತೂಗಹಾಕಿದ ಭಾವಚಿತ್ರವನ್ನು

ನೋಡಿದ. ಆದರೆ ಅವಳ ವಿಚಿತ್ರ ಮನೋಭಾವ ಅವನಿಗೆ ಅರ್ಥವಾಗಲಿಲ್ಲ. ಈ ರಹಸ್ಯ ಚಿಂತನೆಯಲ್ಲಿಯೇ ದಾರಿ ಸಾಗಿತು.

ಚಿಂತೆಯಲ್ಲೇ ಅವನು ದಿನಗಳೆದ ಮತ್ತು ಬಂಗಾಡಿಯ ದಾರಿ ನೋಡಿದ. ಮೂರು ನಾಲ್ಕು ದಿನಗಳ ಮೇಲೆ ಗೋಪಾಲರಾಯರು ಒಂದು ಚೀಟಿ ಕೊಟ್ಟು ಕಳಿಸಿದರು. ಸುದೈವದಿಂದ ಅದು ನಾರಾಯಣನ ಕೈಗೆ ಸಿಗದೆ, ಆನಂದರಾಯನ ಕೈಗೇ ಬಂತು. ಆನಂದರಾಯ ನಾರಾಯಣನ ಕಣ್ಣು ತಪ್ಪಿಸಿ, ಅಂದೇ ಬಂಗಾಡಿಗೆ ಹೋದ. ಮತ್ತು ಈ ಸಲ ದಿನ ನಿಶ್ಚಯ ಮಾಡಿಕೊಂಡೇ ಮರಳಿದ. ಮದುವೆಗೆ ಹತ್ತೇ ದಿನಗಳಿವೆ ! ಈ ಮುಹೂರ್ತ ತಪ್ಪಿದರೆ ಮುಂದೆ ಶ್ರಾವಣ ಮಾಸಕ್ಕೇ ಸರಿ. ಆದುದರಿಂದ ಅವನ ಇಚ್ಛೆಯಂತೆ ಗೋಪಾಲರಾಯರು ಅದೇ ದಿನ ಜರುಗಿಸಲು ಸಮ್ಮತಿಸಿದರು. ಒಂದೇ ದಿನದ ಮದುವೆಗೂ ಅವರು ಒಪ್ಪಿಕೊಳ್ಳಬೇಕಾಯಿತು. “ನಾಲ್ಕು ದಿನಗಳ ಮದುವೆ ಈಗಿನ ಕಾಲಕ್ಕೆ ಅನವಶ್ಯ. ವ್ಯರ್ಥ ಪರಿಶ್ರಮ ! ನಿರರ್ಥಕ ಧನವ್ಯಯ ! ವೇಳೆಯ ಅಪವ್ಯಯ ! ಕಾಳ, ಬೋಳ, ಕೂಳುಬಕ್ಕ ಮುಕ್ಕರನ್ನು ಕರೆದು ತಿಂದು, ತಿನ್ನಿಸಿ, ತೇಗಿ ತೇಲಾಡಿ, ಓಲಾಡುವುದರಲ್ಲಿ ಅರ್ಥವಿಲ್ಲ. ಅದೆಲ್ಲ ಹಳೇಗಾಲದ ಹಳಸಿದ ಸಾಂಪ್ರದಾಯಗಳು” ಎಂದವನು ಮತ್ತೆ ಮತ್ತೆ ಗಾಳಿ ಊದಿದ. ಅವರೂ ಅದನ್ನು ಕೇಳಿ ಪೊಯ್ಯೆಂಡಿನಂತೆ ಉಬ್ಬಿದರು. ಎಲ್ಲ ಚಿಟುಕಿನಲ್ಲಿ ಮುಗಿಸಲು ಅವರೂ ಒಪ್ಪಿದರು.

ಮದುವೆಯ ದಿನ ಮುಂಜಾನೆ ಆನಂದರಾಯ ಒಂದು ಟ್ಯಾಕ್ಸಿ ಮಾಡಿದ. ತನ್ನ ಕೆಲವು ಇಷ್ಟಮಿತ್ರರ ಮನೆಗಳಿಗೆ ಅದನ್ನು ಓಡಿಸಿ, ಅವರನ್ನು ಒತ್ತಾಯದಿಂದ ಹಿಡಿದುಕೊಂಡು ಬಂದ. ಅವರಲ್ಲಿ ಒಬ್ಬಿಬ್ಬರು ಆಫೀಸರರು. ಕೆಲವರು ಇಸ್ಪೀಟು ಆಟದ ಅವನ ಗೆಳೆಯರು. ಮಲೆನಾಡಿನೊಳಗೆ ಹರಿಣ ಶಿಕಾರಿಗೆ ಹೋಗುವ ಲಹರಿಲೋಲ, ಸ್ತ್ರೀಲೋಲ, ಕುಡುಕ, ಸೋಮಾರಿ ಆಫೀಸರರಂತೆ ಅವರು ಕಾಣುತ್ತಿದ್ದರು. “ಸ್ವತಃ ನನ್ನ ಮದುವೆ'' ಎಂದು ಆನಂದರಾಯ ಹೇಳಿದರೂ ಅವರು ನಂಬಲಿಲ್ಲ. ಏನೋ “ಪಿಕ್‌ನಿಕ್ ಪಾರ್ಟಿ” ಇದೆ, ಇಲ್ಲದಿದ್ದರೆ ಜುಮಲಾಬಾದ್ ಕೋಟೆ ಹತ್ತುವ ಕಾರ್ಯಕ್ರಮವಿದೆ, ಅಥವಾ ಬಂಗಾಡಿಯಲ್ಲಿ ಯಾರದೋ ದೊಡ್ಡ ಜಮೀನುದಾರರ ಮನೆಯಲ್ಲಿ ಮದುವೆಯಿದೆ ಎಂದು ಅವರು ಮೊದಮೊದಲು ಬಗೆ

ದಿದ್ದರು. ಆದರೆ ಬಂಗಾಡಿ ಮುಟ್ಟಿದ ಮೇಲೆ ಗೋಪಾಲರಾಯರು ವಾದ್ಯ ದೊಂದಿಗೆ ಈ ದಿಬ್ಬಣದವರನ್ನು ಸ್ವಾಗತಿಸಿದಾಗ ಅವರು ಹಗಲುಗನಸು ಗಳಿಂದ ಎಚ್ಚರ ಹೊಂದಿದರು. ಅವರ ಆಶ್ಚರ್ಯಕ್ಕೆ ಪಾರವೇ ಇಲ್ಲ. ತಮ್ಮನ್ನು ಬಿಟ್ಟು, ಮದುವಣಿಗನ ಕಡೆಯಿಂದ ಅವನ ತಾಯಿ-ತಂದೆ, ಅಕ್ಕತಂಗಿ, ಬಂಧುಬಳಗ, ಕೊನೆಗೆ ಒಂದು ಮುತ್ತೈದೆ, ಇವರ್ಯಾರೂ ಇಲ್ಲದಿದ್ದುದನ್ನು ಕಂಡು ಅವರ ಸೋಜಿಗ ಇನ್ನಷ್ಟು ಹೆಚ್ಚಾಯಿತು ! ದಿಬ್ಬಣ ದವರಿಗೆ ಸಲ್ಲುವ ಆದರ ಗೌರವಗಳಿಗೆಲ್ಲ ಅವರೇ ಪಾತ್ರರಾದರು. ಅಂತಹ ಮಾನಮರ್ಯಾದೆಗಳನ್ನು ಮುಟ್ಟಿಸಿಕೊಂಡಾಗ ಅವರಿಗೆ ಬೇಸರವಾಗು ತ್ತಿತ್ತು. ತಮ್ಮ ಅನರ್ಹತೆ ಮತ್ತು ಅಚಾತುರ್ಯಕ್ಕಾಗಿ ಅವರು ಕಳವಳ ಪಡುತ್ತಿದ್ದರು. ಇಲ್ಲಿಂದ ಹೇಗಾದರೂ ಬೇಗ ಪಾರಾಗಿ ಹೋಗಬೇಕೆಂದು ಅವರು ಬಯಸಿದರು. ಧಾರೆ ಊಟವಾದ ಬಳಿಕ ಅವರು ಬಹಳ ಹೊತ್ತು ನಿಲ್ಲಲಿಲ್ಲ. ಮರುದಿನ ಮುಂಜಾನೆಯ ವರೆಗೆ ನಿಂತರೆ ಅವರೊಟ್ಟಿಗೆ ತಾನೂ ಬರುವೆನೆಂದು ಆನಂದರಾಯ ಎಷ್ಟು ಹೇಳಿದರೂ ಅವರು ಕೇಳಲಿಲ್ಲ. ಕೊನೆಗೆ ಅವರನ್ನು ಬಿಟ್ಟು ಬರಲು ಟ್ಯಾಕ್ಸಿಯವನಿಗೆ ಹೇಳಿದ. ದಾರಿ ಯುದ್ದಕ್ಕೂ ಅವರು ಏನೇನೋ ಟ್ಯಾಕ್ಸಿಯವನಿಗೆ ಕೇಳದ ಹಾಗೆ ಗುಸು ಗುಸು ಮಾತನಾಡುತ್ತಿದ್ದರು. ಇದರಲ್ಲಿ ಏನೋ ಒಂದು ರಹಸ್ಯವಿದೆ ಎಂದವರ ಸಂದೇಹ ! "ಆನಂದರಾಯನಿಗೆ ತಾಯಿತಂದೆ ಯಾರೂ ಇಲ್ಲವೇ ? ಅವನು ತಬ್ಬಲಿಯೇ ? ಇದು ಪ್ರೇಮ ವಿವಾಹವೋ ಏನೋ ? ಹುಡುಗಿಯ ಹೊಟ್ಟೆ ಸ್ವಲ್ಪ ದೊಡ್ಡದಾಗಿ ಕಂಡಿತಲ್ಲ ! ಈ ಡಾಕ್ಟರರ ಅವಸ್ಥೆಯೇ ಹೀಗೆ. ಅಲ್ಲಲ್ಲಿ ಹಗಲೂ ಇರುಳೂ ರೋಗ ಪರೀಕ್ಷೆಯ ನೆವ ಹೇಳಿ ಹೋಗುತ್ತಾರೆ. ಹಗಲು ಕಂಡ ಬಾವಿಗೆ ರಾತ್ರಿ ಬೀಳುತ್ತಾರೆ. ಏನೋ ಹಾಗೇ ಆಗಿದೆ ! ಇಲ್ಲದಿದ್ದರೆ ಹೀಗಾಗಿರಲಿಕ್ಕಿಲ್ಲ. ತಾಯಿತಂದೆ ಬಂಧು ಬಳಗದವರು ಈ ಮದುವೆಗೆ ಒಪ್ಪಿರಲಿಕ್ಕಿಲ್ಲ. ಅದಕ್ಕೆಂದೇ ಬಂದಿರ ಲಿಕ್ಕಿಲ್ಲ. ಆ ನಾರಾಯಣನನ್ನು ಕೇಳಿವರೆ ತುರುಬು ಔಟಾಗುತ್ತದೆ" ಎಂದವರು ಉದ್ಗಾರ ತೆಗೆದರು.

ಬೆಳ್ತಂಗಡಿ ಮುಟ್ಟಿದ ಮೇಲೆ ಟ್ಯಾಕ್ಸಿಯಿಂದ ಇಳಿದ ಒಬ್ಬಿಬ್ಬರು ತಂತಮ್ಮ ಮನೆಗಳಿಗೆ ತೆರಳದೆ "ಆನಂದ ಆಸ್ಪತ್ರೆ''ಗೆ ಬಂದರು. ನಾರಾಯ

ಣನನ್ನು ಕಂಡು ಕೇಳಿದರು:

"ಏನೋ, ನಾರಾಯಣ! ನಿನ್ನ ಡಾಕ್ಟರರಿಗೆ ಅಲ್ಲಿ ಲಗ್ನ! ನೀನು ಇಲ್ಲೇ ಇದ್ದಿಯಲ್ಲೋ! ರಾಮನನ್ನು ಬಿಟ್ಟು ಹನುಮಂತ ನಿಂತ ಹಾಗಾಯಿತಲ್ಲ!"

ನಾರಾಯಣ ಕಂಪೌಂಡರನ ಕೋಣೆಯಿಂದ ಹೊರಗೆ ಬಂದು "ಏನಂದಿರಿ? ಯಾರದು ಲಗ್ನ?'' ಎಂದು ಕುತೂಹಲದಿಂದ ಕೇಳಿದ.

"ನಿನ್ನ ಡಾಕ್ಟರರದೋ! ನೀನೆಲ್ಲಿದ್ದೀ? ನಿನಗೆ ಗೊತ್ತೇ ಇಲ್ಲ—ಪಾಪ!'' ಎಂದವರು ವ್ಯಂಗ್ಯ ಉದ್ಗಾರ ತೆಗೆದರು.

"ನನಗೆ ಗೊತ್ತಿಲ್ಲ ಸ್ವಾಮಿ! ನನ್ನಾಣೆ!'' ಎಂದು ನಾರಾಯಣ ನುಡಿದು "ಯಾವ ಹುಡುಗಿ? ಯಾವಾಗ ಲಗ್ನ? ಎಲ್ಲಿ?" ಎಂದೆಲ್ಲ ಪ್ರಶ್ನಿಸಿದ. ಅವರು ವಿವರಿಸಿದ ಮೇಲೆ ಅವನು ಸಿಟ್ಟಿನಿಂದಲೂ ವ್ಯಸನದಿಂದಲೂ ನಿಟ್ಟುಸಿರಿಟ್ಟು ನುಡಿದ "ನೀವು ನನಗೆ ಮೊದಲೇ ಹೇಳಲಿಲ್ಲವಲ್ಲ! ಹೇಳಿದ್ದರೆ ನಾನು ಒಂದು ಸೈಕಲ್ ಮೇಲಾದರೂ ಬಂಗಾಡಿಗೆ ಬರುತ್ತಿದ್ದೆ. ಒಂದು ಹೆಂಡತಿ ಜೀವಂತ ಇರುವಾಗ ಇನ್ನೊಂದನ್ನು ಡಾಕ್ಟರ್ ಹೇಗೆ ಮಾಡಿಕೊಳ್ಳುತ್ತಿದ್ದನೋ, ಅವರು ಹೇಗೆ ಕೊಡುತ್ತಿದ್ದರೋ ನೋಡುತ್ತಿದ್ದೆ. ಈಗ ಕೆಲಸ ಕೆಟ್ಟಿತು! ಇನ್ನು ಮಾತನಾಡಿ ಏನು ಪ್ರಯೋಜನ?"

ನಾರಾಯಣ ಗೊಣಗಿದುದನ್ನು ಕೇಳಿ ಅವರು ಕ್ಷಣಹೊತ್ತು ಸ್ತಂಭೀಭೂತರಾದರು ಮತ್ತು ಆ ಮೇಲೆ ಚೇತರಿಸಿಕೊಂಡು "ಡಾಕ್ಟರರಿಗೆ ಈಗ ಒಂದು ಹೆಂಡತಿ ಇದೆಯೋ ನಾರಾಯಣ?'' ಎಂದು ಕೇಳಿದರು.

"ಇದೆ. ನಾಲ್ಕಾರು ವರುಷಗಳಿಂದಲೂ ಇದ್ದಾಳೆ''

ಅವನ ಮಾತಿನ ಅಂತರ್ಯ ಅವರಿಗೂ ಅರ್ಥವಾಗಲಿಲ್ಲ ಮತ್ತು ಅವರು ಪುನಃ ಕೇಳಿದರು "ಎಲ್ಲಿ ಇದ್ದಾರೆ ಅವರು?''

"ಮಂಗಳೂರಲ್ಲಿ!"

"ನಿನಗೆ ಹೇಗೆ ಗೊತ್ತು? ನೀನು ನೋಡಿದ್ದೀಯಾ?''

"ಹಾಗೆಂದರೆ ಏನು ಸ್ವಾಮಿ! ಅವಳು ನನ್ನ ಅಕ್ಕ!"

ಅದನ್ನು ಕೇಳಿದ ಕೂಡಲೇ ಚೇಳು ಕಚ್ಚಿದವರಂತೆ ಅವರು ಕುರ್ಚಿಯಿಂದೆದ್ದು ಹೊರಟುಹೋದರು. ನಾರಾಯಣನೂ ಆಸ್ಪತ್ರೆಗೆ ಬೀಗಹಾಕಿದ.

# ೫ನೇಯ ಅಧ್ಯಾಯ

ನಾರಾಯಣ ಮಂಗಳೂರು ರಸ್ತೆ ಹಿಡಿದು ನಡೆದ. ಸ್ವಲ್ಪ ದೂರ ನಡೆದು ಹೋದಾಗಲೇ ಗಟ್ಟದಿಂದ ಕಾಫಿ ಬೀಜ ಹೇರಿಕೊಂಡು ಹಿಂದಿನಿಂದ ಬಂದ ಒಂದು ಮೋಟಾರ್ ಲಾರಿಯನ್ನು ನಿಲ್ಲಿಸಿ, ಅದನ್ನೇರಿದ. ಅದು ಮಂಗಳೂರಿನ ಹಂಪನಕಟ್ಟೆ ನಿಲ್ದಾಣ ಮುಟ್ಟಿದಾಗ ಮಧ್ಯರಾತ್ರಿಯೇ ಆಯಿತು. ವಿದ್ಯುದ್ದೀಪಗಳ ಬೆಳಕಿದ್ದರೂ ರಸ್ತೆಯಲ್ಲಿ ಜನ ಸಂಚಾರವಿಲ್ಲ. ಎರಡು ಮೂರು ಅಂತಸ್ತಿನ ಮನೆ, ಅವುಗಳ ಸುತ್ತುಮುತ್ತು ಬೆಳೆದ ಗಗನ ಚುಂಬಿತ ತೆಂಗಿನ ಮರ, ಇವುಗಳ ನೆರಳೂ ರಸ್ತೆಯ ಮೇಲೆ ಅಲ್ಲಲ್ಲಿ ಪಸರಿಸಿದೆ. ಒಬ್ಬನೇ ನಡೆದು ಹೋಗಲು ಅಂಜಿಕೆ. ಅಲ್ಲದೆ ಅವನ ಅಕ್ಕ ವಾಸಂತಿಯ ಮನೆಯು ಇರುವುದೂ ಉರ್ವದಲ್ಲಿ. ಹಂಪನ ಕಟ್ಟೆಯಿಂದ ಸಾಧಾರಣ ಮೂರು ಮೈಲುಗಳ ದೂರ ಇಷ್ಟೇ ಇದೆ. ದಾರಿಯಲ್ಲಿ ನಾಯಿಗಳು ಹರಿದು ತಿನ್ನುವಂತೆ ಮೈ ಮೇಲೆ ಏರಿ ಬರುತ್ತಿವೆಯೆಂಬುದನ್ನು ಬಲ್ಲ. ಹಿಂದೊಮ್ಮೆ ಬಂದಾಗ ಅವನಿಗೆ ಅಂತಹ ಅನುಭವವಾಗಿದೆ. ಆದುದರಿಂದ ನಾರಾಯಣ ಒಂದು "ಜಟ್ಕಾ" ಮಾಡಿಕೊಂಡೇ ಬಂದ.

ರಸ್ತೆಯ ಮಗ್ಗುಲಲ್ಲಿ ಮನೆ. ಜಟ್ಕಾದಿಂದ ಇಳಿದು ಹತ್ತಿಪ್ಪತ್ತು ಹೆಜ್ಜೆಗಳನ್ನು ಇಡಬೇಕು. ತಗ್ಗು ಸ್ಥಳ. ದಾರಿ ಕೊರಕಲು. ಮನೆಗೊಂದು ಪಾಗಾರವೂ ಇದೆ. ಅದಕ್ಕೆ ಕದಗಳಿಲ್ಲದ ದ್ವಾರ. ಅದನ್ನು ದಾಟಿ ಬಂದರೆ ಅಂಗಳದಲ್ಲಿ ತೆಂಗಿನ ಮರಗಳಿಗೆ ಕಟ್ಟಿದ ಕಟ್ಟೆ. ಆ ಮುಖಮಂಟಪಕ್ಕೂ ಮೂರು ನಾಲ್ಕು ಮೆಟ್ಟಲುಗಳು. "ಬ್ಯಾಟರಿ" ಇಲ್ಲದಿದ್ದರೆ ಅಲ್ಲಿ ಇಲ್ಲಿ ಎಡವಿ ಬೀಳುವುದೇ ಸೈ! ನಾರಾಯಣ ಇದನ್ನರಿತೇ ಸಣ್ಣ ಬ್ಯಾಟರಿ ತಂದುದರಿಂದ ಲಗುಬಗೆಯಿಂದಲೇ ಒಂದು ಬಾಗಿಲು ತಟ್ಟಿ "ಅಕ್ಕಾ! ಅಕ್ಕಾ!" ಎಂದು ಕರೆದ. ಎರಡು ಸಲ ಕರೆಯುವುದರೊಳಗೆ ಅವಳಿಗೆ ಎಚ್ಚರವಾಯಿತು. ಕಿಟಕಿಯ ಕದ ತೆರೆದು "ಯಾರು? ಯಾರು?" ಎಂದು ಕೇಳಿದಳು. ನಾರಾಯಣನೆಂದು ತಿಳಿದ ಮೇಲೆ "ಏನೋ, ಇಷ್ಟು ರಾತ್ರಿಯಲ್ಲಿ ಬಂದು ಬಿಟ್ಟೆ? ಯಾವಾಗ ಮಂಗಳೂರಿಗೆ ಬಂದೆ, ಏನು ಕಥೆ? ಸಿನಿಮಾಕ್ಕೆ ಹೋಗಿದ್ದೀಯಂತ ಕಾಣುತ್ತದೆ! ಮತ್ತೇನು!" ಎಂದು ಹೇಳುತ್ತಲೇ ಬಾಗಿಲು ತೆರೆದಳು.

"ಎಲ್ಲಿಯ ಸಿನಿಮಾ! ನಮ್ಮದೇ ಒಂದು ಸಿನಿಮಾ! ಆನಂದರಾಯ ಬೇರೊಂದು ಮದುವೆ ಮಾಡಿಕೊಂಡು ಬಿಟ್ಟ! ಅದೇ ಕಥೆ ಹೇಳಲು ಬಂದೆ!"

"ಮದುವೆ ಮಾಡಿಕೊಂಡರು!'' ಎಂದು ವಾಸಂತಿ ಆಶ್ಚರ್ಯದಿಂದ ಉಚ್ಚರಿಸುತ್ತ ಅಲ್ಲೇ ಕುರ್ಚಿಯ ಮೇಲೆ ಕುಳಿತಳು.

"ಹೌದು! ಮಾಡಿಕೊಂಡ!'' ಎಂದಂದು ನಾರಾಯಣ ಉಪ್ಪು ಖಾರ ಬೆರಸಿ ಒರೆದ; ಜರೆದ. ವಾಸಂತಿ ಒಂದು ತೋಳನ್ನು ಮೇಜಿನ ಮೇಲೆ ಚಾಚಿ, ಅದನ್ನೇ ತಲೆದಿಂಬು ಮಾಡಿ, ತಲೆಯನ್ನೂರಗಿಸಿ, ಮೌನವಾಗಿ ಕೇಳಿದಳು. ಅವಳು ಬಿಸುಸುಯ್ಯುವುದು ಆಗೊಮ್ಮೆ ಈಗೊಮ್ಮೆ ನಾರಾಯಣನಿಗೆ ಕೇಳಿಸಿತು. ಅವನು ಲಾಟಾನು ಬತ್ತಿಯನ್ನು ಏರಿಸಿ, ಅಲ್ಲೇ ಇದ್ದ ಒಂದು ಕಾಲ್ಮಣೆಯ ಮೇಲೆ ಕುಳಿತುಕೊಂಡ. ಅವಳು ಬಿಕ್ಕಿ ಬಿಕ್ಕಿ ಅಳುತಿದ್ದಳು. ಎಡಗೈಯಿಂದ ಸೆರಗನ್ನು ಎಳೆದುಕೊಂಡು ಕಣ್ಣನ್ನೊರಸಿಕೊಳ್ಳುತಿದ್ದಳು. ನಾರಾಯಣ ಮೆಲು ದನಿಯಿಂದ ಕೇಳಿದ :

"ನಿನಗೆ ಇದು ಗೊತ್ತೇ ಇಲ್ಲೇನು?''

"ಇಲ್ಲ''

ಅವನು ಸ್ವಲ್ಪ ಯೋಚಿಸಿ "ಅವನು ಇಲ್ಲಿಗೆ ಬಾರದೆ ಎಷ್ಟು ಕಾಲವಾಯ್ತು?'' ಎಂದು ಪ್ರಶ್ನಿಸಿದ.

"ತಿಂಗಳಾಗುತ್ತ ಬಂತು!''

"ಏನಾದರೂ ಜಗಳವಾಡಿದಿರಾ?"

ಅವಳು ಉತ್ತರವನ್ನೀಯಲಿಲ್ಲ. ಆದರೆ ಯಾವಾಗ ಹಾಗೆ ತಾನು ಜಗಳವಾಡಿದ್ದೆನೆಂದು ನೆನಸಿಕೊಳ್ಳಲಾರಂಭಿಸಿದಳು. ಮತ್ತು ಅದನ್ನೆಲ್ಲ ಈಗ ಪುನಃ ಪುನಃ ಸ್ಮರಿಸಿ ಹೆಚ್ಚು ಹೆಚ್ಚಾಗಿ ಅಳತೊಡಗಿದಳು.

ನಾರಾಯಣ ದನಿ ಏರಿಸಿ ಗದರಿಸಿದ: "ಅಳು! ಅಳು! ನೀನು ಅದಕ್ಕೇ ಆದಿ. ನಿನ್ನಿಂದ ಮತ್ತೇನಾದೀತು? ಅತ್ತರೆ ಕೆಲಸವಾಗುತ್ತದಾ?''

ವಾಸಂತಿ ದುಃಖದಿಂದಲೂ ಬೇಸರದಿಂದಲೂ ಕಣ್ಣೊರಸಿಕೊಂಡು ಕೇಳಿದಳು: 'ಮತ್ತೇನು ಮಾಡಬೇಕನ್ನುತ್ತೀ ಈಗ! ಬಾವಿಗೆ ಹಾರಲಾ!'

ನಾರಾಯಣ ಅರೆಕ್ಷಣ ಸ್ತಂಭೀಭೂತನಾದ. ಆ ಮೇಲೆ ಸಿಟ್ಟಿನಿಂದ ವ್ಯಂಗ್ಯವಾಗಿ ಉಸುರಿದ: "ಬೇಷ್! ಬೇಷ್ ಮಾತಾಡಿದಿ! ಬಾವಿಗೆ ಹಾರು

ತ್ತೀನಂತ ಅಂದಿ! ಅಲ್ಲಾ! ಅಬ್ಬಬ್ಬ! ನಿಮ್ಮ ಹೆಂಗಸರ ತಲೆಯಲ್ಲಿ ಇಂತಹ ಬುದ್ಧಿ ಹ್ಯಾಗೆ ಬರುತ್ತದೋ! ಆ ಪರಮಾತ್ಮನೇ ಬಲ್ಲ. ಮಾತೆತ್ತಿದರೆ ಕಣ್ಣಿನಿಂದ ಕಾವೇರಿ, ಭಾಗೀರಥಿ ಹರಿಯಲು ಸುರು! ಸ್ವಲ್ಪ ಗಟ್ಟಿ ಮಾತನಾಡಿದರೆ ಸರಿ, ಹಗ್ಗ ಬಾವಿ ಮಾತು! ಹ್ಯಾಗೆ ನಿಮ್ಮನ್ನು ಆ ಬ್ರಹ್ಮ ಸೃಷ್ಟಿ ಮಾಡಿದನೋ! ಆಗಲಿ, ಅದೂ ಒಂದು ಪ್ರಕರಣ ಆಗಿ ಹೋಗಲಿ! ಬಾವಿ ಎಲ್ಲಾದರೂ ನೋಡಿ ಬಂದಿದ್ದೀಯಾ? ಮತ್ತೆ ನೀರು ಇದೆಯೋ ಇಲ್ಲವೋ ಎಂದು ಮೊದಲೇ ನೋಡಿಕೊಂಡಿರು. ಇಲ್ಲದಿದ್ದರೆ ಕೈಕಾಲು ಮುರಿದೀತು. ಪ್ರಾಣವೂ ಹೋಗಲಿಕ್ಕಿಲ್ಲ! ಬಾವಿಗೆ ಹಾರುತ್ತಾಳಂತೆ, ಬಾವಿಗೆ! ಎಂತಹ ಹುಚ್ಚು ಮಾತನಾಡುತ್ತೀ ನೋಡು! ಅಹಹಾ! ಏನು ಹೇಳಲಿ ನಿನ್ನ ಬುದ್ಧಿಗೆ! ಅಕ್ಕ, ಅಮ್ಮ ಕೇಳಿದರೆ ಏನಂದಾರು! ಅಹಹಾ!"

ಅಮ್ಮ ಅಕ್ಕ ಎಂದು ನಾರಾಯಣನೆಂದ ಕೂಡಲೇ ವಾಸಂತಿ ಅವರನ್ನು ನೆನಸಿ ಮತ್ತೆ ದುಃಖಿಸಿದಳು. "ನನ್ನನ್ನು ಊರಿಗೆ ಕಳಿಸಿ ಬಿಡು!" ಎಂದೂ ಹೇಳಿದಳು.

"ಹೂಂ! ಊರಿಗೆ ಹೋಗುತ್ತೀಯಾ?" ಎಂದವನು ಪ್ರಶ್ನಿಸಿ ಮತ್ತೆ ಇಂತೆಂದ: "ಅಲ್ಲಿ ಹೋಗಿ ಏನು ಮಾಡುವವಳು? ಚೆಪ್ಪು, ಚೆಪ್ಪು ಗುದ್ದುತ್ತೀಯಾ?"

ಅವಳು ಮೌನ. ನಾರಾಯಣ ಕಾಲ್ಮಣಿಗಳನ್ನು ಎರಡೂ ಕೈಗಳಿಂದ ಎತ್ತಿ ಸ್ವಲ್ಪ ಅವಳ ಕಡೆ ಸರಿದು ಕುಳಿತು ಹೇಳಿದ: "ಏ! ಹುಚ್ಚಿಯ ಹಾಗೆ ಮಾಡಬೇಡ! ಇಲ್ಲಿ ಕೇಳು. ಹೀಗೆ ಅತ್ತರೆ ಕೆಲಸವಾಗುವುದಿಲ್ಲ. ಅವನ ಹತ್ತಿರ ಹಣವಿದೆ. ನಿನ್ನಿಂದ ಎಷ್ಟು ಸಾಧ್ಯವೋ ಅಷ್ಟನ್ನು ಬೇಗ ದೋಚಿಕೋ! ಸಾವಿರ ಸುಳ್ಳು ಹೇಳು ಅಳು. ಹೊರಳಾಡು. ಮರುಳು ಮಾಡು. ನಿನ್ನಿಂದ ಏನೇನು ಮಾಡಲಾದೀತೋ ಅವನ್ನೆಲ್ಲ ಮಾಡು ಅವನ ಮುಂದೆ! ಈಗ ಹಾಗೆ ನಡೆದು, ನಟಿಸಿ, ಕಸಿದುಕೊಂಡರೆ ಸಿಕ್ಕೀತು. ಮತ್ತೆ ದಕ್ಕಲಿಕ್ಕಿಲ್ಲ. ಇನ್ನು ಮೋಹ ಅತ್ತ ಎಳೆದೀತು. ಇತ್ತ ಅವನು ಮತ್ತೆ ಬರಲಿಕ್ಕೂ ಇಲ್ಲ. ಬಂದರೂ ನಂಬಬೇಡ ಅದು ಗುಳ್ಳೆ ಸರಿ! ಅವನ ಮೇಲಿನ ವ್ಯಾಮೋಹ ಬಿಟ್ಟು ಬಿಡು. ನೀನು ಬೇರೆ ದಾರಿ ನೋಡುವುದೂ ಒಳ್ಳೇದೇ!"

ವಾಸಂತಿ ದೀನ ಸ್ವರದಿಂದಲೇ ಕೇಳಿದಳು: "ನಾನು ಬೇರೆ ಏನು

ಮಾಡಲಿ ನಾರಾಯಣ ?"

" ಏನು ಮಾಡಲಿ ಎಂದು ನನ್ನನ್ನೇ ಕೇಳುತ್ತೀಯಲ್ಲ !'' ಎಂದವನು ಕೊಂಕು ಮಾತುಗಳನ್ನೆಸೆದು, ನೆಟ್ಟ ದೃಷ್ಟಿಯಿಂದ ಅವಳನ್ನೊಮ್ಮೆ ನಖ ಶಿಖಾಂತ ದಿಟ್ಟಿಸಿದ. "ನೀನು ಏನು ಮಾತನಾಡುತ್ತೀ? ಏನು ಮಾಡಬೇಕೆಂದು ಹೇಳಿ ಕೊಡಬೇಕೇ ನಿನಗೆ? ನೀರಿನಲ್ಲಿ ಇದ್ದ ಮೀನಿಗೆ ಈಸಲು ಯಾರು ಹೇಳಿ ಕೊಡುತ್ತಾರೆ? ರೆಕ್ಕೆಗಳಿದ್ದ ಹಕ್ಕಿಗೆ ಆಕಾಶದಲ್ಲಿ ಹಾರಲು ಯಾರೂ ಕಲಿಸುವ ಅಗತ್ಯವಿಲ್ಲ! ನಿನ್ನಲ್ಲಿ ರೂಪವಿದೆ, ಯೌವನವಿದೆ! ನಿನ್ನ ನೋಟಕ್ಕೆ, ಸೌಂದರ್ಯಕ್ಕೆ ಮನಸೋಲದವರು ಯಾರು? ನೀನು ಚೆನ್ನಾಗಿ ಬಲ್ಲ ಆ ಕಲೆಯನ್ನು ನಾನು ನಿನಗೆ ಹೇಳಿ ಕೊಡಬೇಕೆ?" ಎಂಬ ಭಾವಾರ್ಥ ಅದರಲ್ಲಿ ಹುದುಗಿತ್ತು. ಅವಳು ಅದನ್ನು ಚೆನ್ನಾಗಿ ಗ್ರಹಿಸಿಕೊಂಡಳು ಮತ್ತು ತಲೆಯನ್ನು ತಗ್ಗಿಸಿದಳು.

ನಾರಾಯಣ ಯೋಚಿಸಿ ಉಸುರಿದ: " ಇಕೋ, ಇನ್ನು ನನ್ನನ್ನು ಅವನು ಬಹಳ ದಿನ ಇರಗೊಡಲಾರ. ಎಷ್ಟು ದಿನ ನಡೆದೀತೋ ಹೇಳಲಾರೆ. ಈಗಲೇ ತಿಂಗಳು ತಿಂಗಳು ಸಂಬಳ ಕೊಡಲು ಗೊಣಗುತ್ತಾನೆ. ಇನ್ನು ಆ ರಂಭೆ ಬಂದರಂತೂ ಮತ್ತೇನು ರಾದ್ಧಾಂತವಾಗುತ್ತದೋ ಏನೋ! ಆದುದರಿಂದ ನಾನೂ ಬೇಗನೇ ಅಲ್ಲಿಂದ ಜಾರಲು ಹವಣಿಸುತ್ತೇನೆ. ಯಾವುದಾದರೊಂದು ಹಳ್ಳಿಗೆ ಹೋಗಿ ಒಂದು ಸಣ್ಣ ಆಸ್ಪತ್ರೆ ತೆರೆಯಬೇಕೆಂದಿದ್ದೇನೆ. ತೆರೆದ ಮೇಲೆ ನೀನೂ ಅಲ್ಲಿಗೆ ಬಾ. ನಿನ್ನನ್ನು ನಾನೇ ಕರೆದೊಯ್ಯುತ್ತೇನೆ. ಅಷ್ಟರವರೆಗೆ ಗಡಿಬಿಡಿ ಮಾಡಬೇಡ. ಸುಮ್ಮನಿರು.''

ಅವಳು ಸುಮ್ಮಗೇ ಇದ್ದಳು !

ಅವನೇ ಮಾತು ಮುಂದುವರಿಸಿದ: ''ಆಸ್ಪತ್ರೆ ತೆರೆಯಲು ನನ್ನ ಕೈಯಲ್ಲಿ ಕಾಸಿಲ್ಲ. ಏನಿಲ್ಲೆಂದರೂ ಒಂದು ಮೇಜು, ಎರಡು ಮೂರು ಕುರ್ಚಿ, ಒಂದೆರಡು ಕಪಾಟು, ಸ್ವಲ್ಪ ಔಷಧ ಬೇಡವೇನು? ಒಂದು ಸಾವಿರ ರೂಪಾಯಿಯಾದರೂ ಬೇಕೇ ಬೇಕು. ನೀನು ಕೊಟ್ಟರ ಮತ್ತೆ ನಿನಗೆ ವಾಪಾಸು ಕೊಡುತ್ತೇನೆ. ನನ್ನ ಜೀವವಿದ್ದರೆ ಕೊಡುತ್ತೇನೆ.''

"ನನ್ನ ಕೈಯಲ್ಲಿ ಎಲ್ಲಿದೆ ಹಣ? ನಾನೆಲ್ಲಿಂದ ಕೊಡಲಿ? ಹೇಳು" ಎಂದು ಅವಳು ಕೇಳಿದಳು.

ಅವನು ಧ್ವನಿಗೂಡಿಸಿದ: "ನಿನ್ನಲ್ಲಿ ಇರಲಿಕ್ಕಿಲ್ಲ. ಆದರೆ ಅವನಲ್ಲಿದೆ. ಅವನಿಂದ ಅಷ್ಟನ್ನಾದರೂ ಸೆಳೆದುಕೋ! ಈಗಲೇ ನೀನು ಏನಾದರೂ ಮಾಡಿ ಸಾಧಿಸಿದರೆ ಸಿಕ್ಕೀತು! ಇಕೋ, ಅದಕ್ಕೆ ನಾನು ಒಂದು ಉಪಾಯ ಹೇಳುತ್ತೇನೆ. ನಾನು ನಸು ಬೆಳಿಗ್ಗೆ ಬಸ್ ಹಿಡಿದು ಹೊರಡುತ್ತೇನೆ. ನೀನು ಸಂಜೆಯ ಮೋಟಾರಿಗೆ ಬಾ. 'ಸ್ಟ್ಯಾಂಡ್'ನಿಂದ ಇಳಿದು ನೆಟ್ಟಗೆ ಆಸ್ಪತ್ರೆಗೆ ಬಾ. ಬಂದವಳೇ ಒಳಗೆ ಹೋಗಿ ಕುಳಿತುಕೋ. ಗುಲ್ಲೆಬ್ಬಿಸಬೇಡ. ಜಗಳ ಮಾಡಬೇಡ. ಅವನು ಸಿಟ್ಟಾಗಿ ನುಡಿವರೆ ನೀನು ಇದಿರುತ್ತರ ಕೊಡಬೇಡ. ಸುಮ್ಮಗಿರು. ನನಗೇನೂ ಗೊತ್ತಿಲ್ಲವೆಂದು ನಾನೂ ನಟಿಸುತ್ತೇನೆ. ಮತ್ತೆ ವಾಪಸು ಬರಲು ಬಸ್ಸೂ ಇಲ್ಲ. ಮರುದಿನ ಬೆಳಿಗ್ಗೆ ನಸುಕಿನ ಮೋಟಾರಿಗೆ ಕಳಿಸಿ ಕೊಡುತ್ತೇನೆ. ನಾನು ಹೇಳಿದ ಹಾಗೆ ಮಾಡು. ಅತ್ತರೆ ವ್ಯರ್ಥ. ಅತ್ತುಸತ್ತರೂ ಈ ಜಗತ್ತಿನಲ್ಲಿ ಯಾರೂ ಕೇಳುವುದಿಲ್ಲ. ನಿನ್ನ ಹಾಗೆ ಮೃದು ಮೆತ್ತಗಿದ್ದರೂ ಬಾಳುವುದು ಕಠಿನ. ಅಂತಹ ಜನರ ಮೇಲೆ ಹತ್ತು ಜನರು ಕಲ್ಲು ಹೊತ್ತು ಹಾಕುವವರೇ! ಅವನನ್ನೇ ನಂಬಿ ನಂಬಿ ನಂಬಿಕೊಂಡು ಬಂದುದಕ್ಕೆ, ಈಗ ಆ ನಂಬಿಯಣ್ಣ ನಿನ್ನ ಕೈಗೆ ಹೇಗೆ ತಾಳತಂಬೂರಿ ಕೊಟ್ಟ ನೋಡು! ಬದ್ಮಾ......."

ನಾರಾಯಣ ಬೈಗಳ ಮಳೆಗರೆದ. ವಾಸಂತಿ ಅಲ್ಲಿಂದ ಎದ್ದು ಹೋದಳು. ಇನ್ನೊಂದು ಲಾಟಾನನ್ನು ಹೊತ್ತಿಸಿದಳು. ಮತ್ತು ಫಕ್ಕನೇ ಪುನಃ ಅವನಿದ್ದಲ್ಲಿ ಬಂದು "ನಿನ್ನ ಊಟ ಆಗಿದೇನೋ? ಹಂ! ನಾನು ಆಗಲೇ ಕೇಳಲು ಮರೆತೆನಲ್ಲ!" ಎಂದು ಹಳಹಳಿಸಿದಳು.

"ಆಗಿದೆ. ಬಿಡು!"

"ಸುಳ್ಳು! ಎಲ್ಲಿ ಆಗಿದೆ? ಅಲ್ಲಿಂದ ಹೊರಡುವಾಗ ಏಳೆಂಟು ಗಂಟೆಯಾಗಿರಬಹುದು. ಅಲ್ಲಿಂದ ಇಲ್ಲೇ ಬಂದೆಯಲ್ಲ! ಏನಾದರೂ ಕಾಫಿ ತಿಂಡಿ ತೆಗೆದುಕೊಂಡಿಯೋ ಏನೋ! ನಿಜ ಹೇಳು! ನನ್ನ ಹತ್ತಿರ ಯಾಕೆ ಸುಳ್ಳು ಹೇಳುತ್ತೀ?"

"ಫಲಾಹಾರ ಆಗಿದೆ. ಇನ್ನೇನು ಬೇಡ. ಬಿಡು!"

"ನನಗೆ ಗೊತ್ತು!" ಎಂದವಳು ಮೋರೆ ತಿರುಗಿಸಿ ಒಳಗೆ ಹೋದಳು. ಪಾತ್ರೆ ಪರಡಿಯ ಟಣ ಟಣ ಸಪ್ಪಳವೂ ಆಯಿತು. "ಈಗ ಏನನ್ನೂ

ಮಾಡಬೇಡ. ಮಧ್ಯ ರಾತ್ರಿ ಆಯ್ತು. ತಿಂದರೆ ಪಿತ್ತ ಜೀರ್ಣವೂ ಆಗ ಲಿಕ್ಕಿಲ್ಲ'' ಎಂದವನು ಹೇಳತೊಡಗಿದರೂ ಆವಳು ಕೇಳದೆ ಅವಲಕ್ಕಿಗೆ ಮಜ್ಜಿಗೆ ಎರೆದು, ಉಪ್ಪು ಜೆರಸಿ, ತಂದು ಕೊಟ್ಟಳು. ಮನೆಯಲ್ಲಿದ್ದ ಒಂದು ನೀಲಂ ಮಾವಿನ ಹಣ್ಣಿನ ಸಿಪ್ಪೆ ಹಾರಿಸಿ, ಹೋಳು ಮಾಡಿ, ತಟ್ಟೆ ಯಲ್ಲಿ ಹಾಕಿದಳು. ಅವನು ಅವೆಲ್ಲವನ್ನು ಮುಗಿಸಿದಾಗ ಅವನಿಗೊಂದು ಹಾಸಿಗೆಯನ್ನು ತಯಾರಿಸಿದಳು. ಮಲಗಿದ ನಾರಾಯಣ ಸ್ವಲ್ಪ ಹೊತ್ತಿನ ವರೆಗೆ ಮಾತನಾಡಿದ. ಮೊದಮೊದಲು ಅವನು ಆನಂದರಾಯನ ಆದಿ ಪುರಾಣವನ್ನು ಬಿಚ್ಚತೊಡಗಿದ. ಆದರೆ ಅವಳು ಬೇಸರದಿಂದ “ಬೇರೆ ಏನನ್ನಾದರೂ ಹೇಳು” ಎಂದು ಹೇಳಿದುದರಿಂದ ಮಲೆನಾಡು, ಅಲ್ಲಿಯ ಜನರು, ಅಲ್ಲಿಯ ಸಂಪತ್ತು, ಸಂಪ್ರದಾಯ, ಅರಣ್ಯದ ಪ್ರಾಣಿಗಳು ಇವುಗಳ ನ್ನೆಲ್ಲ ವಿವರಿಸಿದ. ಆ ಮೇಲೆ ಅವಳು “ಊರಿಂದ ಪತ್ರ ಬಂದಿದೆಯೇ?” ಎಂದು ಪ್ರಶ್ನಿಸಿದಳು. ಅವನು ಉತ್ತರ ಕೊಡುತ್ತ ನಿದ್ದೆ ಹೋದ. ಆದರೆ ವಾಸಂತಿಗೆ ನಿದ್ದೆ ಹಿಡಿಯಲಿಲ್ಲ. ಊರು, ಕೇರಿ, ತಾಯಿ ಅಕ್ಕಂದಿರೇ ಅವಳ ಕಣ್ಣಮುಂದೆ ಕಟ್ಟಿದಂತಾದರು. ಒಂದಿನದೆಲ್ಲವನ್ನೂ ಅವಳು ಪರಿ ಭಾವಿಸಿದಳು.

ವಾಸಂತಿ ಹುಟ್ಟಿದುದು ಉಡುಪಿಯಲ್ಲಿ. ಅವಳು ವಾರಾಂಗನೆ. ತಾಯಿ ಚಂದ್ರಾವತಿ. ವಾಸಂತಿಗೆ ಇಬ್ಬರು ಅಕ್ಕಂದಿರೂ ಇದ್ದಾರೆ. ನಾರಾಯಣ ಕಿರಿ ತಮ್ಮ. ಕುಲದ ಮೂಲವೇನೋ ಅವಳಿಗೆ ಗೊತ್ತಿಲ್ಲ. ಜಾತಿ ಕಸುಬನ್ನು ಅವಳ ತಾಯಿ ನಿತ್ಯ ವ್ಯವಹಾರದಲ್ಲಿ ಅನುಸರಿಸಿಲ್ಲ. ಒಮ್ಮೆ ಒಬ್ಬ ಶ್ರೀಮಂತನ ಮಡದಿಯಂತೆಯೇ ಜೀವಿಸುತ್ತಿದ್ದಳು. ಅವನು ತೀರಿಕೊಂಡ ಮೇಲೆ ಮತ್ತೊಬ್ಬನ ಹೆಂಡತಿಯಂತಿರುವಳು. ಮಕ್ಕಳಿಗೆ ನಾಲ್ಕಕ್ಷರ ಕಲಿ ಸಲು ಬಗೆದಳು. “ಎಂಟನೇ ದರ್ಜೆಯ ವರೆಗೆ ಕಲಿಸಿದರೆ ಒಳ್ಳೇದು. ಅಷ್ಟ ರೊಳಗೆ ಲಗ್ನವಾದರೆ ಆಯಿತು. ಇಲ್ಲದಿದ್ದರೆ ಎಲ್ಲಾದರೂ ಉಪಾಧ್ಯಾಯಿನಿ ಕೆಲಸವನ್ನಾದರೂ ಮಾಡಿ ಹೊಟ್ಟೆ ಹೊರೆದುಕೊಳ್ಳಲಾಗುತ್ತದೆ” ಎಂದು ಹೇಳುತ್ತಿದ್ದಳು. ಅದೃಷ್ಟವಶಾತ್ ವಾಸಂತಿಯ ಅಕ್ಕಂದಿರಿಗೆ ಯೋಗ್ಯ ಹುಡು ಗರು ದೊರೆತರು. ಇಬ್ಬರಿಗೂ ಲಗ್ನವಾಯಿತು. ಒಬ್ಬನಿಗೆ ಮುಂಬಯಿಯಲ್ಲಿ ನೌಕರಿಯಿದೆ. ಹೆಂಡತಿಯನ್ನು ಅಲ್ಲಿಗೇ ಕಟ್ಟಿಕೊಂಡು ಹೋಗಿದ್ದಾನೆ.

ಒಂದೆರಡು ಮಕ್ಕಳೂ ಇವೆ. ಇನ್ನೊಬ್ಬಳು ಪೆಡ್ರೂರಿನಲ್ಲಿದ್ದಾಳೆ. ಅವಳ ಗಂಡನಿಗೆ ಉಣಲು ತಿನಲು ಕಡಿಮೆಯಿಲ್ಲ. ಹಿರಿಯರ ಸ್ವತಃ ಮನೆಯೂ ಇದೆ. ಮಕ್ಕಳು ಮರಿಯೂ ಬಹಳ ಅವರಿಗೆ.

ವಾಸಂತಿ ಕಿರಿಯವಳು. ಅವರೆಲ್ಲರಿಗಿಂತಲೂ ಅನುರೂಪಳು. ಆದುದ ರಿಂದ ಹಿರಿಯಡ್ಕದಿಂದ ಜಾತಿ ಬಾಂಧವರು ಕನ್ಯಾ ಕೇಳಲು ಒಂದೆರಡು ಸಲ ಬಂದುದೂ ಉಂಟು. ಆದರೆ ಅವಳಿಗೆ ಓದಿನ ಮೇಲೆ ಹೆಚ್ಚು ಇಷ್ಟ. ಮುಂಬಯಿ, ಪೆಡ್ರೂರುಗಳಲ್ಲಿರುವ ಅಕ್ಕಂದಿರೂ ಆಗಾಗ ಅಲ್ಪಸ್ವಲ್ಪ ಹಣ ಕಳಿಸಿ ವಿದ್ಯಾ ವ್ಯಾಸಂಗಕ್ಕೆ ನೆರವಾಗುತ್ತಿದ್ದರು. ಆದುದರಿಂದ ಎಸ್. ಎಸ್. ಎಲ್. ಸಿ ವರೆಗಾದರೂ ಕಲಿಯಲು ಅವಳ ಆತುರ. ವರುಷ ವರುಷ ಅವಳು ಪಾಸಾಗುತ್ತ ಮುಂದುವರಿದುದನ್ನು ಕಂಡ ತಾಯಿ ಚಂದ್ರಾವತಿಗೂ ಅದು ಇಷ್ಟವೆನಿಸಿತು. ಅಲ್ಲದೆ ಹಿರಿಯಡ್ಕದ ನೆಂಟರು ಅಷ್ಟು ಶ್ರೀಮಂತರೇನೂ ಅಲ್ಲ. "ಸಣ್ಣವಳು; ಇನ್ನೂ ಸ್ವಲ್ಪ ಕಲಿಯಲಿ. ಅವಳನ್ನು ಯಾರಾದರೂ ಲಗ್ನವಾದಾರು ! ಯಾರಾದರೂ ಬಂದಾರು" ಎಂದು ಸ್ವಸಂತುಷ್ಟಳಾಗಿ ದ್ದಳು. ಆದರೆ ಚಂದ್ರಾವತಿ ನೆನಸಿದಂತೆ ಆಗಲಿಲ್ಲ.

ವಾಸಂತಿ ಚೆಲುವೆ. ಬಳ್ಳಿಯಂತಹ ಬಳುಕುವ ಎಳೆ ಶರೀರ. ನೀಳ ವಾದ ಕೈಕಾಲುಗಳು. ಉಟ್ಟ ತೆಳು ಸೀರೆಯೂ ಪಾರದರ್ಶಕ. ಒಳಗಿನ ಲಂಗದಲ್ಲಿ ಚಿತ್ರಿಸಿದ ಬಣ್ಣ ಬಣ್ಣದ ಹೂಗಳು ಕಂಗೊಳಿಸುತ್ತಿದ್ದುವು. ಉದ್ದ ವಾದ ತುಂಬುಗೂದಲು. ಒಂದು ದಿನ ನಾಗವೇಣಿಯಂತೆ ಅವನ್ನು ಕಟ್ಟಿ ಕೊಂಡು ಬರುತಿದ್ದಳು. ಇನ್ನೊಂದು ದಿನ ಎರಡು ಜಡೆಗಳು ಬೆನ್ನಮೇಲೆ ಜೋತಾಡುತಿದ್ದುವು. ಮತ್ತೊಂದು ದಿನ ಮುಂಬಯಿ ನಾರಿಯಂತೆ ಸೂಡಿ. ಹೆರಳು ಹೆಣೆದು, ದುಂಡಗೆ ಸುತ್ತಿ, ಮೇಲೆ ಮಲ್ಲಿಗೆಯ ಸರ ಸಿಕ್ಕಿಸುತಿದ್ದುದೂ ಅಪರೂಪವಲ್ಲ. ಅವಳ ಮೈ ಬಣ್ಣಕ್ಕೆ ಮಲ್ಲಿಗೆಯೂ ನಾಚಿ ಮುದುಡು ತಿತ್ತೋ ಏನೋ ! ಹಾಲ್ಮೊಗದಲ್ಲಿ ಯಾವಾಗಲೂ ನಗೆ ಮಲ್ಲಿಗೆ. ಸದಾ ತಾಂಬೂಲ ಮೆದ್ದ ಹಾಗೆ ಕೆಂಪಗಾದ ತುಟಿಗಳು! ಸುನಾಸಿಕ. ನಿರ್ಮಲ ತಿಳಿ ಕಣ್ಣಾಲಿಗಳು. ಅತ್ತಿತ್ತ ಕಣ್ಣು ಹರಿಸದೆ ಪಾರಿವಾಳದ ಪಕ್ಕಿಯಂತೆ ಅವಳು ಶಾಲೆಗೆ ನಡೆದು ಹೋಗುತಿದ್ದಾಗ ಎಲ್ಲರ ಕಣ್ನೋಟವೂ ಅವಳ ಕಡೆಗೇ. ಹಾಗೆ ಯಾರ ಕಣ್ಣು ತಾಗಿತೋ, ಕೂಡಿತೋ ಏನೋ,

ವಾಸಂತಿ ಶಾಲೆಗೆ ಹೋಗುವುದನ್ನು ನಿಲ್ಲಿಸಬೇಕಾಗಿ ಬಂದಿತು.

ಅಂದಿನ ಮನೋಗತಿಯನ್ನು ಸ್ಮರಿಸಿಕೊಂಡರೆ ಈಗಲೂ ವಾಸಂತಿಗೆ ನೈಜುಂ ಎಂದೆನಿಸುತ್ತದೆ. ಅವಳ ದುಃಖ ದುಮ್ಮಾನ ಅಪಮಾನಗಳನ್ನು ಹೇಳಲಳವಲ್ಲ. ಯಾರಿಗೂ ಮೋರೆ ತೋರಿಸುವ ಧೈರ್ಯವಿಲ್ಲ. ಮನೆಯ ಒಂದು ಕೋಣೆಯಲ್ಲಿ ಕಿಟಕಿ ಬಾಗಿಲುಗಳನ್ನು ಮುಚ್ಚಿ ಸದಾ ಕುಳಿತಿರು ತ್ತಿದ್ದಳು. ಅವಳ ಕಣ್ಣುಗಳಿಂದ ಹರಿದ ಕಂಬನಿ ದಿಂಬಿನ ಹತ್ತಿಯನ್ನು ಒದ್ದೆ ಮಾಡಿತ್ತು. ಮತ್ತು ಬಿಸಿಯಾದ ತನ್ನ ಹಣೆಯನ್ನು ಆ ತಂಪಿಗೆ ಒತ್ತಿ ಹಿಡಿ ದಿದ್ದಳು. ತಾಯಿಯ ನಿಷ್ಠುರ ಮಾತುಗಳು ಎಷ್ಟು ! ಅವಳಾಡಿದ ಬೈಗಳು ಎಷ್ಟು ! ಅಷ್ಟನ್ನು ಅವಳು ಎಲ್ಲಿ ಯಾವಾಗ ಕಲಿತಿದ್ದಳೋ ! ಹೇಗೆ ಉರು ಹಾಕಿ ನೆನಪಿನಲ್ಲಿಟ್ಟುಕೊಂಡಿದ್ದಳೋ ! "ಯಾರು? ಮಾಸ್ತರರೋ! ಯಾರು ಹೇಳು !'' ಎಂದು ಗದರಿಸಿ ಜಬರಿಸಿ ಕೇಳಿದಳು. "ಅವರನ್ನು ಎಳೆದು ತಂದು ನಿನಗೆ ಮದುವೆ ಮಾಡುತ್ತೇನೆ. ಹೆಸರು ಹೇಳು !" ಎಂದು ಗರ್ಜಿಸಿದಳು. ಆದರೆ ವಾಸಂತಿ ಬಾಯಿ ಬಿಡಲಿಲ್ಲ.

"ಹೇಳು ! ಹೇಳು ! ನಿನ್ನ ಮೇಲೆ ಕಲ್ಲು ಹೊತ್ತು ಹಾಕಿದ ಆ ಪಾಪಿಯ ಹೆಸರು ಹೇಳು. ಅಂತವನ ಮೇಲೆ ನಿನಗೆ ದಯೆಯೇ ? ನಿನ್ನನ್ನು ಜೀವಂತ ಕೊಲ್ಲಲೆತ್ನಿಸಿದ ಪಾತಕಿಯ ಮೇಲೆ ನಿನಗೆ ಇನ್ನೂ ಪ್ರೀತಿಯೇ ? ನೀನೆಂಥ ಹೆಣ್ಣು ? ನಾನಾಗುತಿದ್ದರೆ ಹೀಗೆ ಬಿಡುತಿದ್ದಿಲ್ಲ. "ಮಗನೇ, ಆಗ ನಾನು ನಿನಗೆ ಬೇಕಾಯ್ತು! ಈಗ ಬೇಡವೇನು ? ಮದುವೆ ಮಾಡಿಕೋ!'' ಎಂದು ಗಂಟು ಬೀಳುತಿದ್ದೆ. ನೀನು ಯಾಕೆ ಹೆದರುತ್ತೀ ಹೇಳು !" ಎಂದು ಚಂದ್ರಾ ವತಿ ಚಡಪಡಿಸಿದಳು.

"ಯಾರನ್ನು ದೂರಿ ಏನು ಫಲ? ಎಲ್ಲ ನನ್ನ ಕರ್ಮ ! ನನ್ನದೇ ತಪ್ಪು!" ಎಂದು ವಾಸಂತಿ ಹೇಳಿ ಕಂಬನಿಗರೆದಳು.

"ಹೌದು ನಿನ್ನದೇ ಕರ್ಮ ! ಅವನದಲ್ಲ ! ಆದರೆ ಈಗ ಅದರ ಫಲ ಅನುಭವಿಸುವವರು ಯಾರು ? ಅವನು ಯಾರೋ. ............... ಗಟ್ಟಿಗ ! ರೆಕ್ಕೆ ಅಗಲಿಸಿ ಹಾರಿ ಹೋದ. ಆದರೆ ನೀನು ಏನು ಮಾಡುತ್ತೀ ? ಬಾವಿಗೆ ಹಾರುತ್ತಿಯೇನು ? " ಎಂದೂ ಅವಳು ಒಮ್ಮೆ ಕೇಳಿದಳು.

ಆಗ ನಿಜವಾಗಿಯೂ ಬಾವಿಗೆ ಹಾರುವ ವಿಚಾರವನ್ನೂ ಅವಳು

ಮಾಡಿದಳು. ಅದು ಚಂದ್ರಾವತಿಗೆ ಹೇಗೆ ಗೊತ್ತಾಯಿತೋ! ಆ ಕ್ಷಣದಿಂದ ಅವಳ ಕೋಪಾಟೋಪ ಇಳಿಯಿತು. ತಾಯಿ ಹೃದಯದ ಕಾರುಣ್ಯದಿಂದ ಮಾತನಾಡಿಸತೊಡಗಿದಳು. "ಹುಚ್ಚಿ! ಇನ್ನು ಪ್ರಾಣ ತೆಗೆದುಕೊಂಡು ಅದೊಂದು ಗಲಾಟೆಯನ್ನು ಎಬ್ಬಿಸಬೇಕೆಂದು ಮಾಡಿದ್ದೀಯೇನು? ಈಗಲೇ ನಾಲ್ಕು ಜನರಿಗೆ ಸುದ್ದಿ ಗೊತ್ತಾಗಿದೆ. ಇನ್ನು ನೀನು ಬಾವಿಗೆ ಹಾರಿದರಂತೂ ರಾಷ್ಟ್ರಾದ್ಯಂತ ಹಬ್ಬುತ್ತದೆ. ನನ್ನ ವಿಚಾರ ಬಿಡು. ನಿನ್ನ ಅಕ್ಕ ಭಾವಂದಿರೂ ನಾಲ್ಕು ಜನರ ಮುಂದೆ ತಲೆ ಎತ್ತಿ ನಡೆಯಲಾಗಲಾರದು. ಆದದ್ದು ಈಗ ಆಗಿ ಹೋಯ್ತು. ಅದರ ಬಗ್ಗೆ ಇನ್ನು ಚಿಂತಿಸಬೇಡ. ಮೊದಲಿನಿಂದಲೇ ನೀನು ಎಲ್ಲ ಸಂಗತಿಯನ್ನೂ ನನ್ನೊಡನೆ ನುಡಿಯುತಿದ್ದರೆ ಈಗ ಇಂತಹ ಪ್ರಸಂಗ ಬರುತಿದ್ದಿಲ್ಲ. ತಾಯಿ ಹತ್ತಿರವೂ ಹೇಳದೆ ಗುಟ್ಟಾಗಿದ್ದೀಯಾ! ಮುಚ್ಚಿಕೊಳ್ಳುವ ವಿಷಯವನ್ನು ಮುಚ್ಚಿಕೊಳ್ಳಬೇಕು. ಇಂತಹ ವಿಷಯ ವನ್ನು ಮುಚ್ಚಿಟ್ಟುಕೊಳ್ಳುವುದೇ? ಅದು ಆಗುತ್ತದೆಯೇ? ಬುದ್ಧಿಯಿಲ್ಲದೆ ಹೇಗೆ ಜಾರಿ ಬಿದ್ದೆ ನೋಡು! ಈಗ ಮತ್ತೆ ತಲೆ ಕೆಡಿಸಿಕೊಂಡು ಹಗ್ಗ, ಬಾವಿ ಎಂದು ಚಿಂತಿಸುತಿದ್ದೀಯಾ! ಛೂ! ನಾನಿಲ್ಲ ಇಲ್ಲಿ ಜೀವಂತ? ನಿನ್ನ ಕಷ್ಟ ಕಾರುಣ್ಯ ಸ್ಥಿತಿ ನನಗೆ ಅರ್ಥವಾಗುವುದಿಲ್ಲವೇನು? ನೀನು ಇಷ್ಟೇಕೆ ವ್ಯಥೆಪಡಬೇಕು? ಇಷ್ಟೇಕೆ ಕಣ್ಣೀರು ಸುರಿಸಬೇಕು! ಈ ರೀತಿ ಹತಾಶಳಾ ಗುವ ಕಾರಣವಿಲ್ಲ. ನಾನಿದ್ದೇನೆ, ಬಿಡು!'' ಎಂದು ಸಂತೈಸಿದಳು.

ಆ ಮೇಲೆ ತಾಯಿ ಮುಂಬಯಿಗೆ ಪತ್ರ ಹಾಕಿಸಿದಳು. ವಾಸಂತಿಯನ್ನು ಸ್ವಲ್ಪ ಸಮಯ ಅಲ್ಲಿಗೆ ಕಳಿಸಿ ಬಿಡುವ ಯೋಚನೆ ಅವಳಿಗೆ. ಆದರೆ ಅಲ್ಲಿ ಇರಲು ಸ್ಥಳಾನುಕೂಲವಿಲ್ಲವೆಂದು ಉತ್ತರ ಬಂತು. ಮತ್ತೆ ಪೆರ್ಡೂರಿಗೂ ಹೋಗಿ ಬಂದಳು. ಆ ಎರಡನೇ ಮಗಳು ಬಾಣಂತಿ. ಅಲ್ಲಿಯೂ ಸರಿಯಾ ಗಲಿಲ್ಲ. ಕೊನೆಗೆ ಒಂದು ದಿನ ಸಂಜೆ ಚಂದ್ರಾವತಿ ಡಾ|| ಆನಂದರಾಯನ ಆಸ್ಪತ್ರೆಗೆ ಬಂದಳು. ಕತ್ತಲಾದ ಮೇಲೆ ಅವನು ಜಟ್ಕಾ ಮಾಡಿಕೊಂಡು ಚಂದ್ರಾವತಿಯ ಮನೆಗೆ ಹೋದ.

ಅವನಿಗೆ ವಾಸಂತಿಯ ಪರಿಚಯವಾದುದು ಹಾಗೆ!

# ೬ನೇಯ ಅಧ್ಯಾಯ

ಚಂದ್ರಾವತಿಯು ವಾಸಂತಿಯ ಕೈ ಹಿಡಿದು ಡಾಕ್ಟರನ ಮುಂದೆ ನಿಲ್ಲಿಸಿದಾಗ ವಾಸಂತಿ ಅನುಭವಿಸಿದ ಸಂವೇದನೆ ವರ್ಣನಾತೀತ! ಭೀತಿಯಿಂದ ಅವಳ ಕೈಕಾಲುಗಳು ನಡುಗಿದವು. ಹಣೆಯಲ್ಲಿ ಬೆವರೊಡೆಯಿತು. ನಾಲಿಗೆ ಅಲುಗಾಡಲಿಲ್ಲ. ಕಣ್ಣಿನಿಂದ ನೀರು ಧಾರಾಕಾರವಾಗಿ ಹರಿಯಿತು. ಆದರೆ ಡಾಕ್ಟರನು ಗದರಿಸದೆ ನಸುನಗುತ್ತ ಮಾತನಾಡಿ ಸಾಂತ್ವನಗೊಳಿಸಲೆತ್ನಿಸಿದ. ಆ ಮೇಲೆ ಅವನು ಎರಡು ಮೂರು ಸಲ ಬಂದಾಗಲೂ ಧೈರ್ಯ ಬಿತ್ತಿದ. "ಇದಕ್ಕೇಕೆ ಇಷ್ಟು ಚಿಂತೆ ಮಾಡುತಿದ್ದೀಯಾ?" ಎಂದು ಒಮ್ಮೆ ಹೇಳಿ ವಾಸಂತಿಯ ಕಿವಿಯನ್ನು ಮೆಲ್ಲನೆ ಹಿಂಡಿದ. ಅದರಿಂದ ನಿಜವಾಗಿಯೂ ವಾಸಂತಿ ಧೈರ್ಯವನ್ನು ಪುನಃ ಗಳಿಸಿದಳು. ಹೀಗೆ ಒಂದೆರಡು ತಿಂಗಳುಗಳು ಉರುಳಿದುವು.

ಈಗ ಡಾಕ್ಟರನ ಮೇಲೆ ಅವಳಿಗೆ ತುಂಬಾ ಅಭಿಮಾನ. ಪ್ರೀತ್ಯಾದರ. ಅವನು ಬಂದನೆಂದರೆ ಸಾಕು, ಚಿಗರಿಯಂತೆ ನೆಗೆದು ಬಂದು ಓರೆಯಾಗಿ ನಿಂತುಕೊಳ್ಳುವಳು. ಅವನ ಆ ನಗು ಮೊಗವನ್ನು ಕಣ್ತುಂಬ ನೋಡಲು ಆಶೆ. ಅವನ ಮೃದು ವಚನಗಳನ್ನು ಕೇಳಲು ಆ ಕಿವಿಗಳಿಗೆ ಆತುರ. "ಡಾಕ್ಟರರಿಗೆ ಒಂದು ಸಿಂಗಲ್ ಚಹಾ ಮಾಡಿ ಕೊಡು'' ಎಂದು ತಾಯಿ ಹೇಳಿದಾಗ ಅವಳಿಗೆ ಸಂತೋಷವಾಗುತಿತ್ತು. ತನ್ನೆದೆಯಲ್ಲಿ ಸೆಲೆಯಾಗಿರುವ ಪ್ರೀತಿ, ಕೃತಜ್ಞತೆಗಳ ಜೇನು ತೊಟ್ಟನ್ನು ಚಹಾಕ್ಕೆ ಬೆರೆಸಲು ಸಾಧ್ಯವಾಗುತಿದ್ದರೆ ವಾಸಂತಿ ಹಾಗೆ ಮಾಡುತಿದ್ದಳು! ಹಾಗೆ ಮಾಡಿರದಿದ್ದರೂ ಡಾಕ್ಟರನಿಗೆ ಆ ಚಹಾದ ಮೇಲೆ ಎಷ್ಟು ಪ್ರೀತಿ! ಆ ಚಹಾದ ಮೇಲಿನ ಪ್ರೀತಿ ಕೊನೆಗೆ, ಅವಳ ಮೇಲಿನ ಪ್ರೀತಿಯೇ ಎಂದೂ ಅವಳಿಗೆ ಹೊಳೆಯಿತು. ಅದರಿಂದ ಅವಳೂ ಏನೋ ಒಂದು ರೀತಿಯ ಮನೋ ತಲ್ಲಣದಿಂದ ತಪಿಸ ತೊಡಗಿದಳು. ತುಂಬಿ ಹೂವಿನ ಸೌಂದರ್ಯ, ಸುಗಂಧಗಳಿಗೆ ಮನಸೋತು ಬಂದು ಎರಗಿತೋ ಅಥವಾ ತುಂಬಿಯನ್ನು ತನ್ನೆಡೆ ಎಳೆದುಕೊಳ್ಳಲು ಸೌಂದರ್ಯ ಮತ್ತು ಸುವಾಸನೆ ಬೀರಿತೋ ಹೇಳಬೇಕಾಗಿಲ್ಲ. ಹೇಗೋ ಹಾಗಾಯಿತು. ಒಮ್ಮೆ ತಾಯಿ ಸೂಚಿಸಿದಂತೆ ಮಗಳು ಮನೆಯ ಹಿಂದಿನ

ತೋಟವನ್ನು ತೋರಿಸಲು ಅವನನ್ನು ಕರೆದುಕೊಂಡು ಹೋದಳು. ಅರಳಿದ್ದ ಒಂದು ಗುಲಾಬಿಯನ್ನು ಕಿತ್ತು ವಾಸಂತಿ ಅವನಿಗರ್ಪಿಸಿದಳು. ಅವನು ಅದರ ಪರಿಮಳವನ್ನು ಆಘ್ರಾಣಿಸಿದಾಗ ಏನೋ ಒಂದು ಆನಂದದ ಗುಂಗಾಯಿತು. ಅರೆದೆರೆದ ನೋಟದಿಂದ ವಾಸಂತಿಯನ್ನು ನೋಡಿದ ಮತ್ತು ಅದೇ ಕಾಲಕ್ಕೆ ಅವಳ ದೃಷ್ಟಿ ಕೂಡಿತು. ಅವಳು ಕಿಸಕ್ಕನೇ ಮುಗುಳು ನಗೆ ಬೀರಿ, ಹೆಬ್ಬೆರಳಿನಿಂದ ನೆಲವನ್ನು ತೀಡಿದಳು. ಅವಳ ಬಳಿ ಹಾದು ಹೋದಾಗ "ಈ ಹೂವಿಗಿಂತ ಈ ಹೂವೇ ಚಂದ!" ಎಂದು ಅವನು ಪಿಸುಗುಟ್ಟಿದ.

"ಆ ಹೂವನ್ನು ಕೋಟಿಗೆ ಸಿಕ್ಕಿಸಿದಿರಿ! ಈ ಹೂವಿಗೆಲ್ಲಿ ಸ್ಥಳ ಕೊಡುತ್ತೀರಿ?'' ಎಂದವಳು ಕೇಳಿದಳು.

"ಇಲ್ಲಿ '' ಎಂದವನು ಹೇಳಿ ತನ್ನೆದೆ ತಟ್ಟಿಕೊಂಡ.

"ಹಾಗಾದರೆ ಈ ಹೂವಿನ ಭಾಗ್ಯವೇ ಸರಿ!'' ಎಂದು ಹೇಳಿ ಅವಳು ನಕ್ಕಳು. ಅವನಿಗೂ ನಗು ಬಂದಿತು. ಇಬ್ಬರ ನಗುವಿನ ಅಲೆಗಳೂ ಒಂದರೊಳಗೊಂದು ಮಧುರ ಮಿಲನ ಹೊಂದಿದುವು. ಮತ್ತು ಆ ಮಾಧುರ್ಯದ ಅದೃಶ್ಯ ಸುಳಿ ಅವರೀರ್ವರನ್ನೂ ಸುತ್ತಿತು.

ಇನ್ನೊಮ್ಮೆ ವಾಸಂತಿ ಚಹಾ ತಂದಾಗ ಆನಂದರಾಯ ಕಪ್ಪು ತೆಗೆದುಕೊಳ್ಳಲು ಕೈ ಚಾಚಿದ. ಆಗ ಅವಳ ಬೆರಳುಗಳನ್ನು ತೆಗೆದುಕೊಳ್ಳುವವನಂತೆ ಹಿಡಿದ. ಅವಳು ಅತ್ತಿತ್ತ ನೋಡಿ ಅವನನ್ನು ಚಿವುಟಿ ಒಳಗೋಡಿದಳು.

ಒಮ್ಮೆ ಬಂದವನು "ಮತ್ತೆ ಶಾಲೆಗೆ ಹೋಗಬಹುದಲ್ಲ!'' ಎಂದು ನುಡಿದ. ಅವಳ ಮುಖ ಬಾಡಿತು. ಮತ್ತು ಅದನ್ನು ಕಂಡ ಆನಂದರಾಯನೂ ಮುದುಡಿಕೊಂಡ. "ಮನೆಯಲ್ಲೇ ಇದ್ದೀಯಲ್ಲ! ನಿನಗೆ ಹೊತ್ತು ಹೋಗಲಿಕ್ಕಿಲ್ಲ! ಆದುದರಿಂದ ಹಾಗೆ ಕೇಳಿದೆ" ಎಂದು ಕೂಡಿಸಿದ.

"ಮನೆಗೆಲಸವಿದೆ. ಅದರಲ್ಲಿ ಹೊತ್ತು ಹೋಗುತ್ತದೆ. ಉಳಿದ ವೇಳೆ ಓದುತ್ತೇನೆ" ಎಂದವಳು ನುಡಿದಳು.

"ಓದುತ್ತಿದ್ದೀಯಾ? ಏನು?"

"ಕಥೆ ಕಾದಂಬರಿಗಳು!''

"ಓಹೋ!" ಎಂದವನು ಹೇಳಿ ತಲೆದೂಗಿದ.

ಇನ್ನೊಮ್ಮೆ ಅವನು ಬಂದಾಗ ಒಂದು ಕಾದಂಬರಿಯನ್ನು ತಂದ.

ಅವಳು ಅದನ್ನೋದಿದ ಬಳಿಕ ಇನ್ನೊಂದನ್ನು ತಂದಿತ್ತ. ಪುಸ್ತಕಗಳು ಆ ರೀತಿ ಕೈಯಿಂದ ಕೈಗೆ ಬದಲಾಯಿಸಿದುವು. ಪುಸ್ತಕಗಳೊಳಗೆ ಸಣ್ಣ ಚೀಟಿಗಳೂ ಬಂದುವು. ಪುಸ್ತಕದೊಂದಿಗೆ ಆ ಕೈಗೆ ಈ ಕೈ ತಾಗಿತು. ಆ ಸುಖಸ್ಪರ್ಶದಿಂದ ಇಬ್ಬರಿಗೂ ರೋಮಾಂಚನವಾಯಿತು.

ಒಂದು ದಿನ ಮುಂಜಾನೆ, ನಾರಾಯಣ ಆನಂದರಾಯನ ಆಸ್ಪತ್ರೆಗೆ ಬಂದು ಒಂದು ಚೀಟಿ ಕೊಟ್ಟು ಶಾಲೆಗೆ ಹೋದ. "ತಲೆನೋವು ! ಸಂಕಟ ! ಅಗತ್ಯ ಬರಬೇಕು !'' ಎಂದು ವಾಸಂತಿ ಬರೆದಿದ್ದಳು. ಡಾಕ್ಟರ್ ತನ್ನ ಔಷಧದ ಪೆಟ್ಟಿಗೆಯನ್ನು ಸೈಕಲ್ಲಿನ ಹಿಂಬದಿ ಕಟ್ಟಿ ಸವಾರಿ ಮಾಡಿದ. ಮನೆಯಲ್ಲಿ ಚಂದ್ರಾವತಿ ಇರಲಿಲ್ಲ. ಅವನು ಅದನ್ನು ಲಕ್ಷಿಸಿ ಕೇಳಲು "ಪೆರ್ಡೂರಿಗೆ ಬೆಳಿಗ್ಗೆ ಮೋಟಾರಿನಲ್ಲಿ ಹೋಗಿದ್ದಾಳೆ. ಸಂಜೆ ಬರುತ್ತಾಳೆ'' ಎಂದು ವಾಸಂತಿ ತುಂಟ ನಗೆ ಬೀರಿದಳು.

"ಅವಕ್ಕೇ ಇಷ್ಟು ತಲೆನೋವು ಬಂದಂತೆ ತೋರುತ್ತದೆ'' ಎಂದು ಅನನೂ ಅಪಹಾಸದ ದನಿಯಲ್ಲೇ ನುಡಿದು, ಅನಾಸಿನ್ ಗುಳಿಗೆಯೊಂದನ್ನು ಕೊಟ್ಟ ಮತ್ತು ಚಹಾದೊಂದಿಗೆ ಅದನ್ನು ನುಂಗಲು ತಿಳಿಸಿದ. "ಕುಳಿತಿರಿ. ಚಹಾ ಮಾಡುತ್ತೇನೆ" ಎಂದವಳು ಹೇಳಿ ಒಳಗೆ ಹೋದಳು. ಅವನು ಕೆಲವು ನಿಮಿಷಗಳ ವರೆಗೆ ಅಲ್ಲೇ ಕುಳಿತ. ಆ ಮೇಲೆ ಮೈಮುರಿದು ಆಕಳಿಸಿದ. ಅವಳು ಪುನಃ ಬಂದು "ಯಾಕೆ ಬೇಸರವಾಗಿದೆಯೇನು ?'' ಎಂದು ಪ್ರಶ್ನಿಸಿದಳು.

"ಹೌದು ಮತ್ತೆ. ನನ್ನನ್ನು ಇಲ್ಲಿ ಕುಳ್ಳಿರಿಸಿ ನೀನು ಒಳಗೆ ಗವಿಯಲ್ಲಿ ಸೇರಿಕೊಂಡರೆ ಬೇಸರ ಬರುವುದಿಲ್ಲ?''

"ಒಳಗೆ ಬನ್ನಿ ಹಾಗಾದರೆ ! ನಾನು ಬೇಡವೆಂದಿಲ್ಲ'' ಎಂದು ಹೇಳಿ ಅವಳು ನುಸುಳಿ ಹೋದಳು.

ಅವನು ಬೂಟುಗಳನ್ನು ಬಿಚ್ಚಿ ಅಡಿಗೆ ಕೋಣೆಯ ಹೊಸ್ತಿಲ ಬಳಿ ನಿಂತುಕೊಂಡ. ಊದುಗೊಳವೆಯಿಂದ ವಾಸಂತಿ ಒಲೆಯೂದುತಿದ್ದವಳು ತಿರುಗಿ "ಇಲ್ಲಿ ಹೊಗೆ. ಹೊರಗೆ ಕುಳಿತಿರಿ. ಚಹಾ ತರುತ್ತೇನೆ" ಎಂದಳು.

"ನನಗೆ ಚಹಾ ಬೇಕಾಗಿಲ್ಲ. ಚಹಾ ನಿನಗೆ. ತಲೆನೋವಿನ ಗುಳಿಗೆ ತೆಗೆದುಕೊಳ್ಳಲು ನಿನಗೆ ಅದು ಬೇಕು''

ಅವಳು ಏನೂ ಉತ್ತರವನ್ನೀಯಲಿಲ್ಲ. "ನಿಮಗೆ ಮತ್ತೇನು ಬೇಕು?" ಎಂದು ಕಣ್ಸನ್ನೆಯಿಂದಲೇ ಪ್ರಶ್ನಿಸಿದಳು.

ಆನಂದರಾಯನು ಅಡಿಗೆ ಕೋಣೆಯೊಳಗೆ ಕಾಲಿಟ್ಟ. ಅವಳು ಒಂದು ಮಣೆಯನ್ನು ಸರಿಸಿ "ಕುಳಿತುಕೊಳ್ಳಿ" ಎಂದಳು. ಅವನು ಯಾಂತ್ರಿಕವಾಗಿ ಕುಳಿತುಕೊಂಡ. ವಾಸಂತಿ ಹೊರಗಿನ ಬಾಗಿಲು ಹಾಕಿ ಬಂದಳು. ಅವಳ ಸೆರಗೂ ಜಾರಿ ಹೋಯಿತು.

ಆನಂದರಾಯ ಅವಳನ್ನು ಫಕ್ಕನೇ ತಬ್ಬಿಕೊಂಡು ಚುಂಬಿಸಿದ ಮತ್ತು ಪಿಸುಗುಟ್ಟಿದ: "ಇಕೋ, ಇದೇ ನನಗೆ ಬೇಕಾದ ಚಹಾ! ಈ ಅಮೃತದ ಮುಂದೆ ಆ ಚಹಾ ವಿಷ!"

ವಾಸಂತಿ ಆ ಬಾಹುಪಾಶವನ್ನು ತಪ್ಪಿಸಿಕೊಂಡು ಓಡಿದಳು. ಅವನು ಬೆಂಬತ್ತಿ ಬಂದ. ಅವಳು ಕೂಡಲೇ ತಿರುಗಿ ಅವನ ಕೊರಳಿಗೆ ಎರಡೂ ಕೈಗಳನ್ನು ಸುತ್ತಿ ಅವನು ಕೊಟ್ಟುದುದನ್ನು ಮರಳಿ ಮುಟ್ಟಿಸಿದಳು. ಅಲ್ಲಿಂದ ಮುಂದೆ ಇಬ್ಬರೂ ಒಳಗೆ ಮಂಚದಲ್ಲಿ ಮೈಗೆ ಮೈ ಸೋಂಕಿ ಕುಳಿತು ಮಾತನಾಡಿದರು. ಅವನು ಆಡಿದ ಮೃದು ವಚನಗಳು ಇನ್ನೂ ವಾಸಂತಿಯ ಕಿವಿಯಲ್ಲಿ ಪ್ರತಿಧ್ವನಿಸುತ್ತಲೇ ಇವೆ. ಮಾತಿನಿಂದ ಮೈ ಜುಮ್ಮೆನಿಸಿತು. ಇಬ್ಬರೂ ಹರೆಯದವರು. ಇಬ್ಬರೂ ರೂಪ ಜೀವಿಗಳು. ಇಬ್ಬರೂ ತ್ವರಿತ ಸುಖಾತುರರು. ಅವಳ ನಳಿದೋಳುಗಳು ಅವನ ಕೊರಳಿಗೆ ಸುತ್ತಿದ್ದುವು. ತಳಿರಿನಂತಹ ಅವನ ಕೈ ಅಮೃತಕಲಶಗಳೆರಡರ ಮೇಲೆ ಸುಳಿದಾಡಿದುವು. ಆ ಸೋಂಕಿನ ಸೊಗಸು ಇನ್ನೂ ವಾಸಂತಿಯ ಸ್ಮೃತಿಯಲ್ಲಿ ರಸಝರಿಯಾಗಿ ಹರಿಯುತ್ತಿದೆ.

ಚಂದ್ರಾವತಿ ಸಂಜೆ ಬಂದಳು. ಮಗಳ ವಿಲಕ್ಷಣ ಮುಖ ಭಾವಗಳಿಂದಲೇ ಅವಳು ಅರ್ಥ ಮಾಡಿಕೊಂಡಳು. ಅವಳು ಅನುಭವಿ. ಕಾಮ ಕಲಾ ನಿಪುಣೆ. ಸ್ತ್ರೀಪುರುಷರ ವೇಷಭೂಷಣ, ನಗು ನೋಟ, ಬೇಟಗಳಿಂದಲೇ ಅವರ ಗುಣಶೀಲಗಳನ್ನರಿವ ಜ್ಞಾನವುಳ್ಳವಳು. ಆದರೆ ತನ್ನ ಸಂದೇಹವನ್ನು ಫಕ್ಕನೆ ಹೊರಗೆ ತೋರಿಸಿಗೊಡಲಿಲ್ಲ. ಪೆರ್ಡೂರಿನ ಸ್ಥಿತಿಗತಿಗಳನ್ನೇ ಮಗಳ ಮುಂದೆ ತೋಡಿಕೊಂಡಳು. ಊಟವಾದ ಮೇಲೆ ಹಾಸಿಗೆಗೆ ವಾಸಂತಿಯನ್ನು ಕರೆದು ನಗುತ್ತಲೇ ಕೇಳಿದಳು: "ಡಾಕ್ಟರ್

ಈ ಹೊತ್ತು ಯಾಕೆ ಬರಲಿಲ್ಲ?"

"ಬಂದಿದ್ದರು."

"ಚಹಾ ಮಾಡಿಕೊಟ್ಟೆಯೋ ಇಲ್ಲವೋ? ನಾನಿಲ್ಲವೆಂತ ಮಾತನಾಡಿಸದೆ ಹಾಗೆಯೇ ಕಳಿಸಿದೆಯಾ? "

"ಇಲ್ಲ. ಸ್ವಲ್ಪ ಹೊತ್ತು ಇಲ್ಲೇ ಇದ್ದರು."

"ಹೌದು. ನನಗೆ ಗೊತ್ತಿದೆ. ನೀನು ಹೇಳುವುದೇ ಬೇಡ. ನಿನ್ನ ಮೇಲೆ ಮರುಳಾಗಿ ಬಿಟ್ಟಿದ್ದಾನೆ! ಅದಕ್ಕೆ ದಿನಂಪ್ರತಿ ಬಂದು ತುಂಬಿಯಂತೆ ಗುಂಯಿಗುಡುತಿದ್ದಾನೆ!''

ವಾಸಂತಿಯ ಮುಖ ಅರಳಿತು. ಮತ್ತು ಅವಳು ಗೋಣನ್ನು ತಗ್ಗಿಸಿದಳು.

ಚಂದ್ರಾವತಿ ತನ್ನ ಕೈಯಿಂದ ಅವಳ ಗಲ್ಲವನ್ನೆತ್ತಿ ಆ ಮುದ್ದಾದ ಮುಖವನ್ನು ದಿಟ್ಟಿಸಿದಳು. ವಾಸಂತಿಯ ಕಣ್ಣುಗಳು ಒದ್ದೆಯಾದುವು. ಮತ್ತು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಚಂದ್ರಾವತಿ ಅವಳನ್ನು ತಬ್ಬಿ, ಅವಳ ತಲೆಯನ್ನು ನೇವರಿಸಿದಳು. ಬೆನ್ನಿನ ಮೇಲೆ ಕೈ ಆಡಿಸಿದಳು. ಅವಳ ಕಂಬನಿಯನ್ನು ಸೆರಗಿನಿಂದ ಒರಸುತ್ತಾ ಹೇಳಿದಳು: "ನಿನಗೂ ಅವನ ಮೇಲೆ ಪ್ರೇಮವಿದೆ ಎಂದು ಬಲ್ಲೆ. ಅದನ್ನು ಅರಿಯಲಾರದವಳೆಂದು ತಿಳಿದಿದ್ದೀಯಾ! ಆದರೆ ನೀನು ವಂಚಿತಳಾಗಬಾರದೆಂದು ನನ್ನ ಆಸೆ. ಅಂದವಾದ ಒಂದು ಹೂ ಅರಳಿದ ಮೇಲೆ ಅದನ್ನು ಯಾರಾದರೂ ಮುಡಿಯಲ್ಲಿ ಧರಿಸಿದರೇ ಚಂದ. ಅಥವಾ ದೇವರ ಪಾದಕ್ಕಾದರೂ ಅರ್ಪಿಸಬೇಕು. ಸುಮ್ಮನೆ ಯಾರು ಯಾರೋ ಅದನ್ನು ಹಿಡಿದು ಹಿಚುಕಿ ಹಾಳುಗೆಡವಬಾರದು. ಅದೇ ನನ್ನ ಹಂಬಲ. ಒಮ್ಮೆ ಒಂದು ಪಾಠ ಕಲಿತ ಮೇಲೆ ಪುನಃ ಜಾರಿ ಬೀಳಬಾರದಲ್ಲ!"

"ಇಲ್ಲಮ್ಮಾ!''

"ಒಳ್ಳೇದು! ಅವನು ಬರಲಿ. ನಾನು ಮಾತನಾಡುತ್ತೇನೆ."

ಮರುದಿನ ಆನಂದರಾಯನೂ ಬಂದ. ಮತ್ತು ಸ್ವತಃ ತಾನೇ ಚಂದ್ರಾವತಿಯೊಡನೆ ತನ್ನ ಪ್ರೇಮಾಭಿಲಾಷೆಯನ್ನು ಹೇಳಿದ. ಮರೆಯಲ್ಲಿ ನಿಂತು ವಾಸಂತಿ ಅದೆಲ್ಲವನ್ನೂ ಆಲಿಸಿದ್ದಳು. "ಹೆಂಡತಿಯಂತೆಯೇ ನೋಡುತ್ತೇನೆ.

ಜೀವಂತ ಇರುವ ವರೆಗೆ ಬೇರೆ ಮದುವೆ ಮಾಡಿಕೊಳ್ಳಲಾರೆ" ಎಂದು ನುಡಿದ. ಅದರಿಂದ ಅವಳಿಗೆ ಸಂತೋಷವಾಗಿತ್ತು. ಅವಳ ತಾಯಿ ಕೂಡಾ ಪ್ರಸನ್ನ ಳಾದಳು. ಒಂದು ದಿನ ತನ್ನ ನೆಂಟರಿಷ್ಟರನ್ನು ಕರೆಸಿ ಮಧ್ಯಾಹ್ನ ಭೋಜನ ಸಮಾರಂಭ ಮಾಡಿಸಿದಳು. ಅದೇ ದಿನ ಸಂಜೆ ದೇವರಿಗೆ ಹಣ್ಣು ಕಾಯಿ ಮಾಡಿಕೊಂಡು ಬರಲೂ ವಾಸಂತಿಯನ್ನು ದೇವಸ್ಥಾನಕ್ಕೆ ಕಳಿಸಿದ್ದಳು. ಆಗ ಆನಂದರಾಯನು ಕೊಟ್ಟಿದ್ದ ಜರತಾರಿ ಸೀರೆ, ಕುಪ್ಪಸಗಳನ್ನು ಅವಳು ತೊಟ್ಟುಕೊಂಡು ಮದುವಣಿಗಳಂತೆ ಮೆರೆದು ಬಂದುದೂ ಇದೆ. ಅದೇ ರಾತ್ರಿ ಮನೆ ದೇವರ ಮುಂದೆ ಆನಂದರಾಯ ಅವಳ ಕೊರಳಿಗೆ ಕರಿಮಣಿ ಕಟ್ಟಿದ್ದ. ಅವರೀರ್ವರೂ ಕೈ ಕೈ ಹಿಡಿದುಕೊಂಡು ಕುಣಿಯುತ್ತ ಅಟ್ಟಕ್ಕೇ ರಿದರು. ಒಂದೊಂದು ಮೆಟ್ಟಲಿನಲ್ಲಿ ನಿಂತು ನಿಂತು ಅವನು ಅವಳನ್ನು ಚುಂಬಿ ಸಿದ. ಅಟ್ಟಕ್ಕೆ ಬಂದ ಮೇಲೆ ಅವಳನ್ನು ಎತ್ತಿ ಗರಗರ ತಿರುಗಿಸಿ, ಎದೆಗವಚಿ ಕೊಂಡು ಸುಖ ಸುಪ್ಪತ್ತಿಗೆಯಲ್ಲಿ ಒರಗಿಸಿದ. ಮೇಣದ ಎರಡು ಬೊಂಬೆಗ ಳಂತೆ ಅವರು ಹೆಣೆದುಕೊಂಡರು. ಜಡಬೊಂಬೆಗೆ ಪ್ರಾಣವಾಯುವನ್ನು ಊದುವಂತೆ ಅವನು ಅವಳ ಕಿವಿಯೊಳಗೆ ಪ್ರೇಮದ ಮಧುರ ಮಾತುಗಳನ್ನು ಆಡಿದ. ದೇಹ ದೇಹವ ಸೋಂಕಿ ಇಬ್ಬರೂ ಸೊಗಸಿದರು.

ಹೀಗೆ ದಿನ, ವಾರ, ತಿಂಗಳುಗಳು ಉರುಳಿದುವು. ಆನಂದರಾಯ ಹೆಂಡತಿಯಂತೆ ಅವಳೊಡನೆ ಜೀವಿಸಿದ. ಆದರೆ ವಾಸಂತಿಯನ್ನು ತನ್ನ ಮನೆಗೆ ಕರೆದೊಯ್ಯಲಿಲ್ಲ. ಪ್ರತ್ಯೇಕ ಬಿಡಾರವನ್ನೂ ಮಾಡಲಿಲ್ಲ. ವಾಸಂತಿ ತನ್ನ ತಾಯಿ ಮನೆಯಲ್ಲೇ ಇದ್ದಳು. ಆನಂದರಾಯ ತನ್ನ ಹಿರಿಯರ ಮನೆ ಯಲ್ಲೇ ವಾಸಿಸಿದ. ಕತ್ತಲಾದ ಮೇಲೆ ತನ್ನ ಆಸ್ಪತ್ರೆಯ ಬಾಗಿಲು ಹಾಕಿ ಕೊಂಡು ಚಂದ್ರಾವತಿಯ ಮನೆಗೆ ಅವನು ನುಸುಳುತಿದ್ದ. ಒಂದೊಂದು ದಿನ ಬೆಳಗಾಗುವ ಮೊದಲೇ ಅವನು ಎದ್ದು ಹೋಗುತಿದ್ದುದೂ ಉಂಟು. ಆದರೆ ಒಂದೊಂದು ರಾತ್ರಿ ಬಹಳ ರಾತ್ರಿಯ ವರೆಗೂ ಪ್ರೇಮಲೀಲೆಗಳಲ್ಲಿ ಅವರು ಮಗ್ನರಾಗುತಿದ್ದರು. ಸುಂದರಿಯೂ ಸುಭಾಷಿಣಿಯೂ ಆದ ವಾಸಂತಿ ಯೊಡನೆ ಕಾಲ ಕಳೆದುದೇ ಅವನಿಗೆ ಗೊತ್ತಾಗುತಿದ್ದಿಲ್ಲ. ಅವಳ ತುಟಿಗ ಳಲ್ಲೂ ಎಷ್ಟು ಮಾಧುರ್ಯ ! ಅಂಗಕಾಂತಿಯೆಷ್ಟು ! ಅವಳ ಪ್ರತಿಯೊಂದು ಹಾವ ಭಾವ, ಲಾಲನೆ, ನೋಟ ಬೇಟಗಳಲ್ಲಿ ಒಂದೊಂದು ಮದನರಹಸ್ಯ

ವಿರುತ್ತಿತ್ತು. ಮತ್ತು ಕ್ಷಣಕ್ಷಣಕ್ಕೆ ಆನಂದರಾಯನ ಪ್ರೇಮ ಕಾಮ ಕೆರಳು ತ್ತಿತ್ತು. ಹೀಗಾಗಿ ಎಷ್ಟು ಚುಂಬನ, ಆಲಿಂಗನ ಭೋಗಸುಖಗಳನ್ನು ಅನು ಭವಿಸಿದರೂ ಅವನ ಮನದ ದಾಹಕ್ಕೆ ತೃಪ್ತಿಯಾಗುತ್ತಿದ್ದಿಲ್ಲ. ಅಂತಹ ರಾತ್ರಿಗಳಲ್ಲಿ ಅವನು ನಿದ್ದೆ ಮಾಡಿದುದೇ ಕಡಿಮೆ. ಬೆಳಗಿನ ಜಾವಕ್ಕೆ ಕಣ್ಣಿಗೆ ಜೊಂಪು ಹಿಡಿಯುತ್ತಿತ್ತು. ವಾಸಂತಿ ತನ್ನ ನಳಿದೋಳುಗಳನ್ನು ಬಿಡಿಸಿ ಕೊಂಡು, ವಸ್ತ್ರಾಲಂಕೃತೆಯಾಗಿ ಸದ್ದುಮಾಡದೆ ಹೋಗುತ್ತಿದ್ದಳು. ಮತ್ತು ಅವನಿಗೆ ಸ್ನಾನಪಾನಕ್ಕೆ ಮನೆಯಲ್ಲೇ ಸಿದ್ಧಗೊಳಿಸುತ್ತಿದ್ದಳು. ಅವೆಲ್ಲವನ್ನೂ ತಯಾರಿಸಿದ ಮೇಲೆಯೇ, ಆಸ್ಪತ್ರೆಗೆ ತೆರಳಲು ಅವನಿಗೆ ಹೊತ್ತಾಯಿತೆಂದು ಗಂಟೆ ನೋಡಿ, ಮೆಲ್ಲಗೆ ಬಂದು ಗಲ್ಲ ತೀಡಿ ಎಬ್ಬಿಸುತ್ತಿದ್ದಳು. ಆಗ ಅವನು ಪುನಃ ಅವಳನ್ನು ತನ್ನ ಎದೆಯ ಮೇಲೆ ಎಳೆದುಕೊಂಡು, ಅವಚಿ ಹಿಡಿದು ಕೊಂಡರೂ ಹಿಡಿದುಕೊಂಡನೇ. ಆ ಮೇಲೆ ಅವಳ ಮನೆಯಲ್ಲೇ ಸ್ನಾನ ಕಾಫಿ ತೀರಿಸಿ ನೆಟ್ಟಗೆ ಆಸ್ಪತ್ರೆಗೆ ಹೋಗುತ್ತಿದ್ದ. ಅಂದು ರಾತ್ರಿ ವಾಸಂತಿಯ ಲ್ಲಿ ಬರುತ್ತಿದ್ದಿಲ್ಲ. ನಿದ್ದೆ ಮತ್ತು ವಿಶ್ರಾಂತಿಗಾಗಿ ತನ್ನ ಮನೆಗೆ ತೆರಳುತ್ತಿದ್ದ.

ಹೀಗಿದ್ದರೂ ಒಂದೊಂದು ದಿನ ಆನಂದರಾಯನ ಮೋರೆ ಸಣ್ಣಗಿರು ತ್ತಿದ್ದುದನ್ನು ವಾಸಂತಿ ಕಾಣುತ್ತಿದ್ದಳು. ಅವನ ಮೋರೆ ಕಂದಿರುತ್ತಿತ್ತು. ಎಂದಿನ ವಿನೋದಲಹರಿ ಇರುತ್ತಿದ್ದಿಲ್ಲ. ಮನಸ್ಸು ಏನೋ ಒಂದು ರೀತಿಯ ಕ್ಷೋಭೆಗೊಳಗಾದಂತೆ ಚಡಪಡಿಸುತ್ತಿದ್ದ. ಅಂತಹ ಸಂದರ್ಭಗಳಲ್ಲಿ "ಏನು? ಯಾಕೆ?" ಎಂದು ವಾಸಂತಿ ಪದೇ ಪದೇ ಕೇಳಿ ಪೀಡಿಸುತ್ತಿದ್ದಿಲ್ಲ. ಮೊದ ಲೊಮ್ಮೆ ಕೇಳಿದಾಗ ಅವನು ಕೋಪದಿಂದ ಬೈದುದುಂಟು. ಸಿಟ್ಟುಬಂದಾಗ ಇದಿರುತ್ತರ ಕೊಡಬಾರದೆಂದೂ ಕೆಣಕಬಾರದೆಂದೂ ಅವಳು ಬೇಗನೇ ಅವನ ಗುಣ ಸ್ವಭಾವವನ್ನು ಅರಿತುಕೊಂಡಳು. ಅವನಿಗೆ ಪ್ರತಿಯೊಂದು ವಿಷಯದಲ್ಲಿಯೂ ಅನುಕೂಲೆಯಾಗಿಯೇ ಇದ್ದಳು. ವೇಳೆಯರಿತು, ಮಾತ ರಿತು ಕೇಳುತ್ತಿದ್ದಳು. ತನ್ನ ಕಾಲುಗಳನ್ನು ತೊಡಕಿಸಿ, ತೊಡೆ ನಡು ಮೊಲೆ ಮೊಗಗಳನ್ನು ಒತ್ತಿ, ದುಂಡು ತೋಳುಗಳಿಂದ ಅಪ್ಪಿ, ಮುದ್ದಿಸಿ, ಅವನ ನಾಲಿಗೆಯನ್ನು ತುಟಿಗಳಿಂದ ಎಳೆದು ಒಳಗಿನ ಮಾತುಗಳನ್ನು ಅವನು ಹೊರಗೆ ಚೆಲ್ಲುವಂತೆ ಮಾಡುತ್ತಿದ್ದಳು.

ಒಮ್ಮೆ ಅವನು ಹೇಳಿದ: "ವಾಸಂತೀ! ಇಲ್ಲಿಂದ ಬೇರೆ ಎಲ್ಲಿಗಾದರೂ

ಹೋಗೋಣವೇ ಎಂದೆನ್ನಿಸುತ್ತಿದೆ ನನಗೆ! ಈ ಊರಲ್ಲಿ ನಿಲ್ಲಲು ಯಾಕೋ ಮನಸ್ಸಿಲ್ಲ!"

"ಯಾಕೆ? ಏನಾಯಿತು?" ಎಂದವನು ಪ್ರಶ್ನಿಸಲಿಲ್ಲ. ಯಾಕೆಂದು ಅವಳು ಚೆನ್ನಾಗಿ ಬಲ್ಲಳು. ಏನಾದರೂ ಅವಳು ವೇಶ್ಯಾಪುತ್ರಿ. ಅವನು ಉತ್ತಮ ಕುಲಸಂಭೂತ. ಆದುದರಿಂದ ಮನೆಯಲ್ಲೂ ಮನೆಯ ಹೊರಗೂ ಜನರು ಹೀಗಳೆಯುತ್ತಿದ್ದಾರೆಂದು ಅವಳು ಊಹಿಸಿರುವಳು. ಕೆಲವರ ಬಾಯಿಂದಲೂ ಅವಳು ಕೇಳಿದ್ದುದುಂಟು! ಸ್ವತಃ ವಾಸಂತಿ ಪರಪುರುಷರನ್ನು ಬಯಸಿದವಳಲ್ಲ. ಆದರೂ ಯಾರಾದರೂ "ಸೂಳೆ! ಸೂಳೆ!" ಎಂದು ಅವಳಿಗೆ ಕೇಳಿಸುವ ಹಾಗೆ ಆಡಿದಾಗ ವಾಸಂತಿಯು ಮೋರೆ ಕಂದಿ ಕುಂದುತಿತ್ತು. ಮತ್ತು ಅವಳು ತಕ್ಷಣ ಅಲ್ಲಿಂದ ಮನೆಗೆ ಬಂದು ಕಂಬನಿ ಸುರಿಸಿದುದುಂಟು. ಹಾಗಿರುವಾಗ ಆನಂದರಾಯನ ಮನೋಕ್ಷೋಭೆಯನ್ನು ಅವಳು ಅರಿಯದವಳಲ್ಲ. ಆದರೆ ಅವನು ಅಂತ ಮೇಲೆ ಅವಳ ಮನಸ್ಸಿನೊಳಗೆ ಒಂದು ಸಂದೇಹ ಹೊಕ್ಕಿತು ವ್ಯಸನವೂ ಅಂಟಿಕೊಂಡಿತು. ಆದುದರಿಂದ ಅವಳು ಬೇಸರದಿಂದಲೇ ನುಡಿದಳು. "ಅಂತೂ ನನ್ನಿಂದ. . ...."

ಆದರೆ ಅವಳ ಮೈಮೇಲೆ ಕೈಯಾಡಿಸುತ್ತಿದ್ದ ಆನಂದರಾಯನು ಅವಳನ್ನು ಕೊವರಿಕೊಂಡು ಅವಳ ಬಾಯಿ ಮುಚ್ಚಿದ. ಅದರಿಂದ ಅವಳು ಹೇಳಬೇಕೆಂದಿದ್ದ ಮಾತುಗಳು ಬಾಯಿಯೊಳಗೇ ಕರಗಿ ಹೋದುವು.

ಆ ಮೇಲೆ ಅವಳು ಕೇಳಲೆತ್ತಿಸಲಿಲ್ಲ. ಅವನನ್ನು ಆದಷ್ಟು ಪ್ರೇಮ ಕಾಮಗಳ ವಾತಾವರಣಕ್ಕೆ ಎಳೆದೊಯ್ಯಲು ಯತ್ನಿಸಿದಳು. ಮೋಹಪಾಶದಿಂದ ಅವನನ್ನು ಬಿಗಿಯಲು ಹವಣಿಸಿದಳು. ಪ್ರೇಮದ ಕಲೆಗಳಲ್ಲಿ ಅವಳು ಪಾರಂಗತಳೇ ಸರಿ. ಅದು ವಂಶಾನುಗತವಾಗಿ ಬಂದ ವಿದ್ಯೆ. ಯೌವನ ಅವಕ್ಕೆ ಕಳೆಯುತ್ತಿದೆ. ಸೌಂದರ್ಯದ ರಸ ಜಿನುಗುತ್ತಿದೆ. ವಿದ್ಯಾಭ್ಯಾಸಂಗದಿಂದ ರಸರುಚಿಗಳನ್ನು ಅವಳು ತಿದ್ದಿ ಬೆಳಸಿಕೊಂಡಿರುವಳು. ಈ ಸಂಪತ್ತಿಗೆ ಅಲಂಕಾರವು ಚಿನ್ನಕ್ಕೆ ಕುಂದಣ ಕಟ್ಟಿದಂತಾಗಿದೆ. ಅವಳ ನಗೆನೋಟಗಳೇ ಮದನ ಜ್ವಾಲೆಯನ್ನೆಬ್ಬಿಸುವಂತಿದ್ದುವು. ಅವಳ ದೇಹದ ಸೋಂಕು ಕುಸುಮ ಮೃದು. ಚಿರತೆಯಂತೆ ಮೆತ್ತಗಿದ್ದರೆ ಮುಳ್ಳಿನಂತೆ ಮುರಿಯುತ್ತದೆ.

ಪಣಿಯಂತೆ ಹೆಣೆದುಕೊಳ್ಳುತ್ತದೆ. ಮದನ ಸುಖದ ಅನಂತ ಸಮುದ್ರದಲ್ಲಿ ಅವನು ಈಸಾಡಿ ಅರೆತೆರೆದ ಕಣ್ಣುಗಳಿಂದ ಮೂರ್ಛೆ ಹೋದವರಂತೆ ಅವಳ ಒತ್ತಿಗೆ ಒರಗುತಿದ್ದ.

ಒಂದು ದಿನ ಹಾಗೆ ಅವನು ಅವಳ ಒತ್ತಿಗೆ ಒರಗಿದ ಮೇಲೆ ವಾಸಂತಿ ತನ್ನ ಕಣ್ಣುಗಳನ್ನರಳಿಸಿ ಅವನ ಮೊಗವನ್ನೂ ಕಣ್ಣುಗಳನ್ನೂ ಸ್ವಲ್ಪ ಹೊತ್ತು ದಿಟ್ಟಿಸಿದಳು. ಆಗ ಎಂದಾದರೊಂದು ದಿನ ಅವನು ತನ್ನನ್ನು ತೊರೆದು ಹೋಗುತ್ತಾನೋ ಏನೋ ಎಂಬ ಸಂದೇಹ ಅವಳನ್ನು ಕಾಡಿಸಿತು. ಅದನ್ನು ನೆನಸಿದಾಗ ಅವಳ ಕಣ್ಣಿನಿಂದ ಒಂದೆರಡು ಹನಿ ಕೆಳಗೆ ಬಿದ್ದುವು. ಮತ್ತು ಅಕಸ್ಮಾತ್ ಆ ಹನಿ ಆನಂದರಾಯನ ಮೋರೆಯ ಮೇಲೆಯೇ ಬಿದ್ದಿತು. ಆಗ ಅವನು ಫಕ್ಕನೇ ಚೇತರಿಸಿಕೊಂಡ. ಮತ್ತು ಅವಳನ್ನು ಬರ ಸೆಳೆದುಕೊಂಡು, ತಬ್ಬಿ, ಕೇಳಿದ: "ವಾಸಂತೀ! ಏನನ್ನು ಚಿಂತಿಸುತ್ತಿದ್ದೀಯಾ?''

ಅವಳು ಬಿಗಿಯಾಗಿ ಅಪ್ಪಿಕೊಂಡು ನುಡಿದಳು: "ಈ ಗಿಳಿ ಈಗೇನೋ ಪಂಜರದಲ್ಲಿದೆ. ಆದರೆ ನನ್ನ ಈ ತೋಳುಗಳಿಗೆ ಸರಳುಗಳಷ್ಟು ಬಲವಿಲ್ಲವಲ್ಲ! ಆದುದರಿಂದ ಗಿಳಿ ಯಾವಾಗ ಹಾರಿ ಹೋಗುತ್ತದೋ ಎಂದು ಚಿಂತಿಸುತಿದ್ದೇನೆ''.

"ಗಿಳಿ ಬಂಧನದೊಳಗೇ ಇರಬೇಕೆಂದು ಬಯಸುತ್ತೀಯಾ?"

"ಇಲ್ಲ. ಆದರೆ ಹಾರಿ ಹೋದಾಗ ನನ್ನನ್ನೂ ತನ್ನೊಂದಿಗೆ ಕರೆದೊಯ್ಯಲಿ ಎಂದು ಅಪೇಕ್ಷಿಸುತ್ತೇನೆ".

ಅವಳ ಆ ಬಯಕೆಯನ್ನು ಕೇಳಿ ಆನಂದರಾಯ ಪ್ರಸನ್ನನಾದ. ಮತ್ತು ಅವಳ ತುಟಿ, ಕಣ್ಣುಗಳನ್ನೆಲ್ಲ ಮತ್ತೆ ಮತ್ತೆ ಮುದ್ದಿಸಿ ಹೇಳಿದ: "ವಾಸಂತೀ! ನಿನ್ನನ್ನು ನಾನು ಬಿಟ್ಟಿರುವುದಿಲ್ಲ. ಮೊದಲು ಎಲ್ಲಾದರೂ ಹೋಗಿ ಆಸ್ಪತ್ರೆ ತೆರೆಯುತ್ತೇನೆ. ಸ್ವಲ್ಪ ಸಮಯದ ವರೆಗೆ ನೀನು ಇಲ್ಲೇ ಇರು. ನೀನು ಬಯಸಿ ಬರೆದಾಗ ಬರುತ್ತೇನೆ. ನಿನ್ನ ನೆನಪಾದಾಗ ನಾನೂ ಬರುತ್ತೇನೆ. ಆ ಮೇಲೆ ಒಂದು ಬಿಡಾರ ಮಾಡಿ ನಿನ್ನನ್ನು ಕರೆದೊಯ್ಯುವುದು ನನ್ನ ಕೆಲಸ. ಇದಕ್ಕೆ ನೀನು ಸಿದ್ಧಳಿದ್ದೀಯಾ, ಹೇಳು."

"ಸಿದ್ಧಳು. ಈಗಿಂದೀಗ ಹೊರಡು ಎಂದರೂ ನಿಮ್ಮೊಂದಿಗೆ ಬರುತ್ತೇನೆ"

ಅವನು ತುಂಟ ನಗೆಯಿಂದ "ಹಾಗಾದರೆ ಈಗ ಹೇಗಿದ್ದೀಯೋ ಹಾಗೇ ಹೊರಡಬೇಕು" ಎಂದು ಹೇಳಿ ಅವಳ ತೊಡೆಯನ್ನು ಹಿಡಿದು ಅಮುಕಿದ.

"ಹುಂ!" ಎಂದವಳು ಸತ್ಕುಲ ಸುವತಿಯಂತೆ ಲಜ್ಜೆ ಮುನಿಸುಗಳನ್ನು ತೋರಿ, ಅವನ ಕಣ್ಣುಗಳನ್ನು ಮುಚ್ಚಿ, ತುಟಿಗಚ್ಚಿದಳು. ಮತ್ತು ಪ್ರೇಮದ ಸವಿಸೊಲ್ಲುಗಳನ್ನು ಪಿಸುಗುಟ್ಟಿದಳು. ಅದರಿಂದ ಪುನಃ ಅವನ ಸರ್ವಾಂಗ ಗಳಲ್ಲಿ ಆತುರವು ತುಂಬಿತು. ಆನಂದರಾಯ ಅವಳೆದೆಯ ಆ ಎರಡು ಮೊಗ್ಗು ಗಳನ್ನು ತನ್ನೆದೆಗೊತ್ತಿಕೊಂಡು ಅರಳಿದ ಕೆಂದಾವರೆಯಂತಿದ್ದ ಮುಖದಲ್ಲಿ ಮುಖವಿಟ್ಟು ಅವಳನ್ನು ಮದನನ ನಿವಾಸಸ್ಥಳಕ್ಕೆ ಕರೆದೊಯ್ದ.

ಸ್ವಲ್ಪ ಕಾಲ ಹೀಗೆಯೇ ಕಳೆಯಿತು. ಆನಂದರಾಯನಿಗೆ ಉಡುಪಿಯ ಲ್ಲಿರಲು ತುಂಬ ಬೇಸರವಾಯಿತು. ಮನೆಗೆ ತೆರಳುವುದನ್ನೂ ನಿಲ್ಲಿಸಿದ. ಅವನ ತಂದೆ ಯಾವಾಗಲೂ ಏನೇನೋ ಗೊಣಗುಟ್ಟಿದರು. ತಾಯಿ ಅಡಿಗೆ ಮನೆ ಯಿಂದ ಹೊರಗೆ ಬಂದು ಅವನನ್ನು ಮಾತನಾಡಿಸಲಿಲ್ಲ. ತಂಗಿ ಕೂಡಾ ಮಾತು ಬಿಟ್ಟಳು. ಅವನ ಮಿತ್ರರು ಕೂಡಾ ಹಿಂದೆ ಮುಂದೆ ಆಡಿಕೊಳ್ಳ ಲಾರಂಭಿಸಿದರು. ಆಸ್ಪತ್ರೆಗೆ ಬರುವ ರೋಗಿಗಳ ಸಂಖ್ಯೆ ಕೂಡಾ ಇಳಿಯಿತು. ಮೊದಲೇ ಅವನಿಗೆ ವಿಶೇಷ ಸಂಪಾದನೆ ಇರಲಿಲ್ಲ. ಈ ಉಡುಪಿಯಲ್ಲಿ ಹೋಟೇಲುಗಳಂತೆ ರಸ್ತೆಯೊಂದರಲ್ಲಿ ನಾಲ್ಕು ಡಾಕ್ಟರರ ಬೋರ್ಡುಗಳಿವೆ. ಆದುದರಿಂದ ಆನಂದರಾಯ ಕುಂದಾಪುರ, ಕಾರ್ಕಳ, ಪುತ್ತೂರು, ಕಾಸರ ಗೋಡು ಇತ್ಯಾದಿ ಕಡೆಗಳಿಗೆ ತೆರಳಿ ತಿರುಗಿ ಬಂದ. ಅಲ್ಲೆಲ್ಲೂ ಅವನಿಗೆ ಪಸಂದ ಕಾಣಲಿಲ್ಲ. ಕೊನೆಗೆ ಬೆಳ್ತಂಗಡಿ ಅವನ ಮನಸ್ಸಿಗೆ ಬಂದಿತು.

ಬೆಳ್ತಂಗಡಿಯಲ್ಲಿ ಆಸ್ಪತ್ರೆ ತೆರೆದ ಮೇಲೆ ಒಂದೆರಡು ವರುಷಗಳ ವರೆಗೂ ವಾಸಂತಿ ಉಡುಪಿಯಲ್ಲೇ ಉಳಿದಳು. ಅವಳಿಗೆ ತೆರಳಲು ಮನ ಸ್ಸೇನೋ ಇತ್ತು. ಆದರೆ ಅವನೇ "ಈಗ ಬೇಡ. ಸ್ವಲ್ಪ ತಡೆ" ಎಂದು ಸಂತೈ ಸಿದ. "ಈಗ ಆಸ್ಪತ್ರೆ ಸುರು ಮಾಡಿದ್ದೇನೆ. ಅಷ್ಟೇ! ಒಂದೆರಡು ವರುಷ ಹೋಗಲಿ'' ಎಂದು ನುಡಿದ. ಮತ್ತು ಈ ಅವಧಿಯಲ್ಲಿ ಅವನು ಆಗಾಗ ಉಡುಪಿಗೆ ಬಂದ. ಅಥವಾ ಅವಳ ಮನೆಗೆ ಬಂದ ಎಂದರೇ ಸರಿಯಾದೀತು! ಏಕೆಂದರೆ ಅವನು ಯಾರಿಗೂ ತಿಳಿಯದಂತೆ ಬರುತಿದ್ದ. "ಯಾರಿಗೂ ಹೇಳ ಬೇಡ." ಎಂದೂ ವಾಸಂತಿಯೊಡನೆ ನುಡಿಯುತಿದ್ದ. ವಾಸಂತಿಯ ಮನೆಯ

ಅಟ್ಟದಿಂದ ಅವನು ಕೆಳಗಿಳಿಯುತಿದ್ದೇ ಇಲ್ಲ. ಸದಾಗಾಲ ಅವಳೂ ಅವನ ಸಾನ್ನಿಧ್ಯದಲ್ಲೇ ಇರುತಿದ್ದಳು. ಅಂತಹ ಸಂದರ್ಭಗಳಲ್ಲಿ ಹಗಲು ಇರುಳಾಗುತಿತ್ತು; ಇರುಳು ಹಗಲಾಗುತಿತ್ತು. ಎರಡು ಮೂರು ದಿನಗಳ ವರೆಗೆ ಅವನು ಇದ್ದು ಸದ್ದಿಲ್ಲದೆ ಹೋಗುತಿದ್ದ. ಮತ್ತೆ ಮೂರು, ಆರು ತಿಂಗಳ ಮೇಲೆಯೇ ಅವನ ದರ್ಶನ! ಇದರಿಂದ ಅವರೀರ್ವರೂ ವಿರಹದುರಿಯಿಂದ ಬಳಲುತಿದ್ದರು. ಅಷ್ಟು ದೀರ್ಘ ಕಾಲದ ವರೆಗೆ ಒಬ್ಬರನ್ನೊಬ್ಬರು ಅಗಲಿ ಇರುವುದು ಬಹಳ ಕಷ್ಟವೆನಿಸಿತು. ಒಂದು ಸಲ ವಾಸಂತಿ ತಾನೂ ಬರುವೆನೆಂದು ಅತ್ತು ಕಣ್ಣೀರ್ಗರೆದಳು. ಆನಂದರಾಯ ಹೊರಟವನು ಹಿಂದೆ ಬಂದು ಮತ್ತೊಂದು ದಿನ ಉಳಿದ.

"ವಾಸಂತೀ! ನೀನಿನ್ನೂ ಸಣ್ಣ ಮಗುವಿನ ಹಾಗೆ ಮಾಡುತಿದ್ದೀಯಲ್ಲ! ಮನೆಯಿಲ್ಲ ಮಾರಿಲ್ಲ. ಒಮ್ಮೆಗೇ ಬರುತ್ತೇನೆಂದು ಹಠ ಹಿಡಿಯುತ್ತೀಯಾ! ಅಲ್ಲಿ ಎಲ್ಲಿ ಇರುತ್ತೀ? ಹುಡುಗಾಟ ಮಾಡುತ್ತೀ ನೋಡು! ಅದು ಈ ಊರಿನ ಹಾಗಲ್ಲ. ನೀನು ಕರಾವಳಿ ನೀರಲ್ಲಿ ಹುಟ್ಟಿ ಬೆಳೆದವಳು. ಅದು ಮಲೆನಾಡು. ಎದ್ದರೆ ಕೂತರೆ ಜ್ವರ. ನಿನಗೆ ಒಗ್ಗಲಿಕ್ಕಿಲ್ಲ. ನಾನು ಬೇರೆ ಎಲ್ಲಾದರೂ ಬಿಡಾರ ಮಾಡುತ್ತೇನೆ'' ಎಂದು ಹೇಳಿ ಸಾಂತ್ವನಗೊಳಿಸಿದ. ಒಂದೆರಡು ತಿಂಗಳುಗಳೊಳಗೆ ಮಂಗಳೂರಲ್ಲಿ ಮನೆ ಬಾಡಿಗೆ ಹಿಡಿದ. ವಾಸಂತಿ ತನ್ನ ತಮ್ಮ ನಾರಾಯಣನೊಡನೆ ಅಲ್ಲಿ ತೆರಳಿದಳು.

ವಾಸಂತಿ ಮಂಗಳೂರಿನ ಈ ಮನೆಯಲ್ಲಿ ವಾಸಿಸಲಾರಂಭಿಸಿ ಸಾಧಾರಣ ಮೂರು ವರುಷಗಳಾದುವು. ಬೆಳ್ತಂಗಡಿಯಿಂದ ಮೂವತ್ತು ಮೈಲುಗಳ ದೂರವಿದೆ ಇಲ್ಲಿಗೆ. ಆದರೂ ಆರಂಭದಲ್ಲಿ ಆನಂದರಾಯ ವಾರಕ್ಕೊಮ್ಮೆ ಬಂದ. ಎರಡು ವಾರಗಳಿಗೊಮ್ಮೆ ಆಗಮಿಸಿದ. ಕೆಲಸ ಹೆಚ್ಚಾಗಿದ್ದಾಗ ತಿಂಗಳ ಅವಧಿಯೂ ಇರುತಿತ್ತು. ವಾರಕ್ಕೊಮ್ಮೆ ಬರಲಿ, ತಿಂಗಳಿಗೊಮ್ಮೆ ಬರಲಿ, ವಾಸಂತಿ ಚಿಂತಿಸುತಿದ್ದಿಲ್ಲ. ಶನಿವಾರ ರಾತ್ರಿ ಬಂದ ಆನಂದರಾಯ ಆದಿತ್ಯವಾರ ಉಳಿದು, ಸೋಮವಾರ ನಸುಬೆಳಿಗ್ಗೆ ಮೋಟಾರ್ ಹತ್ತುತಿದ್ದ. ಭಾನುವಾರವೊಂದೇ ದಿನ ಅವರು ಸಕಲ ಸುಖವನ್ನು ಅನುಭವಿಸುತಿದ್ದರು. ಅವನು ಸಿನಿಮಾಕ್ಕೆ ಅವಳನ್ನು ಕರೆದುಕೊಂಡು ಹೋದ. ಗಾಳಿ ಸವಾರಿಗೆ ಉರ್ವದ ಡಬ್ಬಲ್ ಗುಡ್ಡಕ್ಕೂ ಅವರು ತೆರಳಿದರು. ಒಂದು ಸಲ ಚಾವ

ಟಿ ಗುಡ್ಡದಲ್ಲಿ ಕಾಲು ಚಾಚಿ ಕುಳಿತರು. ಬಂದರದ ಕರಾವಳಿಯಲ್ಲೂ ಅಲೆದರು. ಕದಿರೆಯ ಹಿಂಬದಿಯ ಗುಡ್ಡವನ್ನೇರಿ, ಸಮುದ್ರದಲ್ಲಿ ಮುಳುಗುವ ಸೂರ್ಯನ ಅನಂತ ಸೌಂದರ್ಯ ಶೋಭೆಯನ್ನು ಸವಿದರು. ಅವರು ಹೊರಟಾಗ ಕತ್ತಲೆ ಪಸರಿಸುತಿತ್ತು. ಆದುದರಿಂದ ಮೈಗೆ ಮೈ ತಾಗಿಸಿಕೊಂಡು ಬರುತಿದ್ದರು. ಅದರಿಂದ ಮೈ ಪುಳಕವೇರಿದ ಅವರೀರ್ವರೂ ರಾತ್ರಿ ಮೈಯೊಲೆದಾಟದಲ್ಲಿ ತಲ್ಲೀನರಾಗುತಿದ್ದರು.

ಈ ಮೈಸುಖಕ್ಕಿಂತಲೂ ವಾಸಂತಿಯ ಮನೋ ಸುಖ ಹೆಚ್ಚಿನದು ಉಡುಪಿಯಲ್ಲಿದ್ದಾಗ ಅವಳ ಮನಸ್ಸು ಅಶಾಂತಿಯಿಂದ ಕುಣಿಯುತಿತ್ತು. ಬುದ್ಧಿ ತಿಳಿದಂದಿನಿಂದಲೂ ಹಾಗೆಯೇ. ಗೆಳತಿಯರೊಂದಿಗೆ ಅವಳು ನೆರೆ ಮನೆಗೆ ಹೋದಾಗ "ಹೋಗು! ಹೋಗು!" ಎಂದು ಗದರಿಸಿ ಬಾಗಿಲು ಹಾಕಿಕೊಂಡವರಿದ್ದರು. ಒಳಗೆ ಬರಲು ಬಿಟ್ಟವರು "ಅಡಿಗೆ ಮನೆಗೆ ಬರಬೇಡ. ದೇವರ ಕೋಣೆಗೆ ಬರಬೇಡ." ಎಂದು ಆಕ್ಷೇಪಿಸಿದವರುಂಟು. "ಅದು ಯಾಕೆ?" ಎಂದವಳಿಗೆ ಅರ್ಥವಾಗುತಿದ್ದಿಲ್ಲ. ಅಳುತ್ತಾ ಹಿಂತಿರುಗುತಿದ್ದಳು. ತಾಯಿ ಕೂಡಾ ಅದಕ್ಕೆ ಸರಿಯಾದ ಕಾರಣವನ್ನು ಕೊಡುತಿದ್ದಿಲ್ಲ. ಅವಳಿಗೆ ಬುದ್ಧಿ ತಿಳಿದ ಮೇಲೆಯೇ ಆ ನಿಜ ಪರಿಜ್ಞಾನವಾಯಿತು. ಮತ್ತು ಅದರಿಂದ ಅವಳು ತುಂಬಾ ನೊಂದುಕೊಂಡಳು. ಅವಳ ಎಳೆ, ಸೂಕ್ಷ್ಮ ಮನಸ್ಸಿನ ಮೇಲೆ ಆಗಲೇ ವಜ್ರಾಘಾತವಾದಂತಾಗಿತ್ತು. ಅವಳು ಆಚೆ ಮನೆ, ಈಚೆ ಮನೆಗಳಿಗೆ ಹೋದುದೇ ಇಲ್ಲ. ಶಾಲೆಗೆ ಮಾತ್ರ ತಪ್ಪಿಸುತಿದ್ದಿಲ್ಲ.

ಆದರೆ ಶಾಲೆಯ ಹುಡುಗರು ಅವಳಿಗೆ ಕೊಟ್ಟ ಕಾಟ ಕಡಿಮೆಯೇನಲ್ಲ. ಅವಳು ಕ್ಲಾಸಿಗೆ ಬಂದ ಕೂಡಲೇ ಗುಸು ಗುಸು ಮಾತನಾಡುತ್ತ ಹಲ್ಲು ಕಿರಿಯುತಿದ್ದರು. ಒಮ್ಮೊಮ್ಮೆ ಅವಳ ಹಿಂದೆ ಕೋತಿಗಳಂತೆ ಅಣಕಿಸುತ್ತ ಮನೆಯ ವರೆಗೂ ಬೆಂಬತ್ತಿ ಬರುತಿದ್ದರು. ಅವಳಿಗೆ ಕೇಳಿಸುವಂತೆ ಸಿನಿಮಾ ಅಥವಾ ನಾಟಕದ ಶೃಂಗಾರ ಹಾಡುಗಳನ್ನು ಹಾಡುತಿದ್ದರು. ಅನೇಕ ಸಲ ಅವಳ ವಿಳಾಸಕ್ಕೆ ಪತ್ರಗಳೂ ಬಂದುವು. ಬರೆದವರ ವಿಳಾಸವಿರುತಿದ್ದಿಲ್ಲ. ಅದರಲ್ಲಿ ಅವಳ ಕುಲಶೀಲಗಳನ್ನು ಸೂಚಿಸಿ ತಂತಮ್ಮ ವಾಸನಾಕಾಂಕ್ಷೆಗಳನ್ನು ಬರೆಯುತಿದ್ದರು. ಅದೂ ಅಸಹ್ಯವಾದ ವರ್ಣನೆ. ಅದನ್ನು

ಅವಳು ಹರಿದು ಹರಿದು ಚೂರು ಮಾಡಿ ಬಿಸಿನೀರಿನ ಒಲೆಗೆ ಹಾಕುತಿದ್ದಳು. ಈ ಕುರಿಮಂದೆಯಿಂದ ಅವಳು ಪಾರಾದರೂ ಕುರುಬನ ಕೈಗೆ ಸಿಲುಕಿದಳು. ಮತ್ತು ಅದರಿಂದ ಅವಳು ಅನುಭವಿಸಿದ್ದ ಮಾನಸಿಕ ಮತ್ತು ದೈಹಿಕ ಸಂವೇದನೆಗಳು ಅನಂತ! ಅದು ಹೆಣ್ಣು ಜನ್ಮವೊಂದಕ್ಕೇ ಗೊತ್ತು! ತಾಯಿಯ ನಿಷ್ಠುರ ನುಡಿ, ಹಿತೋಪದೇಶ, ನಿಂದೆ, ಅಪಮಾನಗಳಿಂದ ಅವಳು ಜರ್ಜರಿತಳಾಗಿದ್ದಳು. ಜೀವದ ಮೇಲೆ ಹತಾಶೆ ಮೂಡಿತ್ತು. ಅಂತಹ ಸಂದರ್ಭದಲ್ಲಿ ಆನಂದರಾಯ ಭಾಗ್ಯ ಭಾನುವಿನಂತೆ ಉದಯವಾದ. ಮತ್ತು ಅವಳ ಜೀವನದ ಮೇಲೂ ಬೆಳಕು ಚೆಲ್ಲಿದ.

ಈ ಮಂಗಳೂರಿಗೆ ಬಂದ ಮೇಲೆ ತನ್ನ ಪುನರ್ಜನ್ಮವೇ ಆಗಿದೆ ಎಂದವಳ ಭಾವನೆ. ಇಲ್ಲಿ "ನೀನು ಸೂಳೆ" ಎಂದು ಯಾರೂ ಅವಳ ಹಿಂದೆ ಹೇಳಿ ಹಂಗಿಸಿವವರಿಲ್ಲ. ಯಾರಿಗೂ ಗೊತ್ತೂ ಇಲ್ಲ. ಇಲ್ಲಿ ಜನ ಸಮ್ಮರ್ದ ಬಹಳ. ಇದೊಂದು ಜನ ಸಮುದ್ರವೇ ಸರಿ! ಅಷ್ಟು ಜನರಿಂದ ತುಂಬಿರುವ ನಗರ. ಅವರ ಮಧ್ಯೆ ಅವಳೂ ಬದುಕಿಕೊಂಡಿರುವಳು. ಅವರೊಂದಿಗೇ ಅವಳು ಸುಲಭವಾಗಿ ಮೀನಿನಂತೆ ಈಜುತಿದ್ದಾಳೆ. ಇಬ್ಬರೂ ಸ್ವೇಚ್ಛೆಯಿಂದ ವಿಹರಿಸುತ್ತಾರೆ. ಸತಿಪತಿಯೆಂದು ಜನ ತಿಳಿದಿರುವರೆಂದು ಅವಳ ಗ್ರಹಿಕೆ. ಮತ್ತೆ ಅವಳಾದರೂ ಸುವ್ರತೆಯಾದ ಸತಿಯಂತೆಯೇ ಜೀವಿಸಿದ್ದಾಳೆ. ವೇಶ್ಯಾಕುಲದಲ್ಲಿ ಜನಿಸಿದ್ದೇನೆಂಬ ನೋವು ಮೆಲ್ಲ ಮೆಲ್ಲಗೆ ಮರೆಯಾಗುತ್ತದೆ. ವೇಶ್ಯಾ ಕಸುಬಿಗೆ ತಾಯಿ ಎಲ್ಲಿ ಇಳಿಸುತ್ತಾಳೋ ಎಂಬ ದಿನ ನಿತ್ಯದ ಭಯ ತೊಲಗಿದೆ. ಯಾರು ತನ್ನನ್ನು ಎಳೆದೊಯ್ಯುವರೋ ಎಂಬ ಸಂದೇಹವೂ ಇಲ್ಲ. ಎಲ್ಲರಂತೆ ತಾನೂ ಮರ್ಯಾದೆಯ ಬಾಳು ಬಾಳುತ್ತಿದ್ದೇನೆಂಬ ಆತ್ಮ ಸಂತೋಷದಿಂದ ಅವಳು ಇದ್ದಳು. ತನ್ನ ಬಾಳು ಸಾರ್ಥಕವಾಯಿತೆಂದು ಅವಳು ಭಾವಿಸಿಕೊಂಡಿದ್ದಳು. ಅಂತಹ ಪರಮ ಪುರುಷನ ಋಣವನ್ನು ಏಳೇಳು ಜನ್ಮದ ಸೇವೆಯಿಂದಲೂ ತೀರಿಸಲಾಗದೆಂದು ಬಗೆದಿದ್ದಳು.

ಆದರೆ ಈಗ?

ಇನ್ನು ಮುಂದೆ?

ಆ ಸಂಕಟವನ್ನು ಸಹಿಸಲಾರದೆ ಅವಳು ದುಃಖಿಸತೊಡಗಿದಳು.

ಬಿಕ್ಕಿ ಬಿಕ್ಕಿ ಅಳುವ ಸ್ವರ ನಾರಾಯಣನನ್ನು ಎಚ್ಚರಿಸಿತು. ಅವನು ದೀಪದ ಬತ್ತಿ ಏರಿಸಿ, "ಅಂತೂ ರಾತ್ರಿ ನಿದ್ದೆ ಮಾಡಿಲ್ಲ, ಹೌದಲ್ಲೋ! ಬೇಷ್! ನಿದ್ದೆಗೆಟ್ಟು, ತಲೆಕೆಟ್ಟು ಏನಾದರೂ ತಂದುಕೋ! ಅದೂ ಒಂದು ಬಾಕಿ!'' ಎಂದ.

ಅಷ್ಟರಲ್ಲಿ ಗಡಿಯಾರ ಎಚ್ಚರದ ಗಂಟೆಯನ್ನೂ ಬಾರಿಸಿತು. ದೂರದಿಂದ ಮೋಟಾರ್ ಕೊಂಬಿನ ದನಿ ಕೇಳಿಸಿತು. ತೆಂಗಿನ ಮರಗಳ ಸೋಗೆಗಳ ಮರೆಯಲ್ಲಿ ಗರಿ ಮುದುಡಿ ಕೂತ ಕಾಗೆಗಳ ಬಳಗ ಕಕ್ಕಾಬಿಕ್ಕಿಯಾಗಿ ಹಾರುತ್ತ ಕೂಗತೊಡಗಿದುವು. ವಾಸಂತಿ ಎದ್ದು ಸ್ಟೋವ್ ಹಚ್ಚಲಾರಂಭಿಸಿದಳು.

ನಾರಾಯಣ ಬಿಸಿ ಬಿಸಿ ಕಾಫಿಯ ಒಂದೊಂದು ಗುಟುಕನ್ನು ಕುಡಿಯುತ್ತ ಮಧ್ಯೆ ಒಂದೊಂದು ಮಾತನ್ನೂ ಆಡಿದ: "ಸಂಜೆ ಮೋಟಾರಿಗೆ ಬಾ ಮತ್ತೆ. ನಾನು ಕರೆಯಲು ಬಂದೆ ಎಂದು ಫಕ್ಕನೇ ಹೇಳಬೇಡ! ಮತ್ತೆ ಅವನ ಗಿಲೀಟಿಗೆ ಮೋಸ ಹೋಗಬೇಡ!''

ಅವಳು ಬರೇ ತಲೆ ಅಲ್ಲಾಡಿಸಿದಳು. ಅವನು ಹೊರಟು ಹೋದ ಬಳಿಕ ಪುನಃ ಬಂದು ಹಾಸಿಗೆಯಲ್ಲಿ ಬಿದ್ದುಕೊಂಡಳು. ಕಣ್ಣುಗಳಿಂದ ನೀರು ತನ್ನಂತೆ ಧಾರಾಕಾರವಾಗಿ ಇಳಿಯತೊಡಗಿತು. ಅದು ಎಷ್ಟರವರೆಗೆ ಹರಿಯಿತೋ ಅವಳಿಗೆ ಗೊತ್ತಾಗಲಿಲ್ಲ. ಏಕೆಂದರೆ ನಡುವೆ ಅವಳಿಗೆ ನಿದ್ದೆ ಬಂದಿತು. ಹಾಲಿನವಳು ಬಂದು ಬಾಗಿಲು ತಟ್ಟಿದಾಗಲೇ ಅವಳಿಗೆ ಎಚ್ಚರವಾದುದು.

ದಿನವಿಡೀ ಕೆಲಸ ಬೊಗಸೆಗಳನ್ನು ಮಾಡುತ್ತಿದ್ದಾಗಲೂ ಯೋಚನೆಯೋ. ಬೆಳ್ತಂಗಡಿಗೆ ಹೋಗಬೇಕೋ ಬೇಡವೋ ಎಂದೇ ಅವಳ ವಿಚಾರ. ಕೊನೆಗೆ ನಾರಾಯಣನಿಗೆ ಹಣವನ್ನೊದಗಿಸುವ ಆಶೆಯಿಂದಲ್ಲದಿದ್ದರೂ ಒಮ್ಮೆ ಆನಂದರಾಯನನ್ನು ಕಂಡಾದರೂ ಬರಬೇಕೆಂಬ ಆತುರದಿಂದ ಅವಳು ಮೋಟಾರು ಹತ್ತಿದಳು.

# ೭ ನೇಯ ಅಧ್ಯಾಯ

ಆನಂದರಾಯನ ಅಪೇಕ್ಷೆಯಂತೆ ಲಗ್ನ ಸಮಾರಂಭವು ವಿಶೇಷ ಸಂಭ್ರಮವಿಲ್ಲದೆ ಸಾಂಗವಾಯಿತು. ಗೋಪಾಲರಾಯರ ಸಂಬಂಧಿಕರು, ಅವರ ಹೆಂಡತಿಯ ಕಡೆಯ ಬಂಧುಗಳು, ಬಂಗಾಡಿಯ ನಾಲ್ಕೈದು ಬ್ರಾಹ್ಮಣರ ಮನೆಯ ಸ್ತ್ರೀಪುರುಷರು ಎಲ್ಲರೂ ಕೂಡಿ ಹತ್ತೈವತ್ತು ಜನ. ಊರಿನ ಕೆಲವು ಹಿರಿಯ ಜೈನ ಜಮೀನ್ದಾರರೂ ಉಪಾಧ್ಯಾಯರೂ ಗೋಪಾಲರಾಯರ ಇಷ್ಟಮಿತ್ರರಾಗಿ ಬಂದಿದ್ದರು. ಅವರ ಒಕ್ಕಲುಗಳು, ಅವರ ಹೆಂಡತಿ ಮಕ್ಕಳು, ಅವರ ನೆರೆಹೊರೆಯವರು ಎಲ್ಲರೂ ಸೇರಿ ಮತ್ತೆ ಈ ಐವತ್ತು ಜನ. ಮಂಟಪದ ಇದಿರಿಗೆ ಬಂಧು ಬಳಗದವರೂ ಆಮಂತ್ರಿತರೂ ಕುಳಿತಿದ್ದರು. ಅವರ ಹಿಂದೆ ತಟ್ಟಿಗೊರಗಿ ನಿಂತು, ಕುಳಿತು ಹೊರಗಿನ ಜನ ನೋಡುತಿದ್ದರು. ಒಂದು ಮೂಲೆಯಲ್ಲಿ ಮೂರು ನಾಲ್ಕು ಜನರನ್ನೊಳಗೊಂಡ ಸೇರಿಗಾರರ ಮೇಳ. ಅಂತೂ ಎಲ್ಲಾ ಜನರನ್ನು ಸೇರಿಸಿದರೂ ನೂರಾರರ ಒಳಹೊರಗೆ. ಹೀಗಾಗಿ ಮದುವೆ ಚಪ್ಪರದಲ್ಲಿ ಅಂತಹ ಗದ್ದಲವೇನೂ ಇರಲಿಲ್ಲ. ಹತ್ತಿಪ್ಪತ್ತು ಮುತ್ತೈದೆಯರ ಮುಖವನ್ನೂ ಕಾಣುವಂತಿರಲಿಲ್ಲ. ಮತ್ತು ಅವರ ಮಧ್ಯೆ ತನ್ನ ತಾಯಿ ಹಾಗೂ ತಂಗಿಯ ಮುಖವನ್ನೂ ಅವನು ನೋಡಲಿಲ್ಲ. ಇದರಿಂದ ಅವನ ಮನಸ್ಸಿಗೆ ಸ್ವಲ್ಪ ನೋವುಂಟಾಯಿತು. "ತಂದೆಗೊಂದು ಪತ್ರವನ್ನು ಬರೆಯಬಹುದಿತ್ತು. ತಾಯಿಯನ್ನು ಕರೆದುಕೊಂಡು ಬರಬಹುದಿತ್ತು. ತಂಗಿಗೆ ಕೂಡಾ ನಾನು ಹೇಳಲಿಲ್ಲ." ಎಂದು ಅವನು ಯೋಚಿಸಿದ. ಆ ಭಾವನೆ ಪದೇ ಪದೇ ಬಂದು ಅವನನ್ನು ಚುಚ್ಚಿತು. ಮನಸಿನ ಈ ಹೊಯ್ದಾಟದಿಂದ ಅವನ ಮೋರೆ ಬಾಡಿತು. ಹೋಮದ ಹೊಗೆಯಿಂದ ಕಣ್ಣುಗಳು ಊದಿ ಅವನು ಕಂಬನಿಯನ್ನು ಒರಸಿಕೊಂಡನೆಂದು ಜನ ಕಂಡರೂ ಅದರೊಳಗೆ ದುಃಖದ ಒಂದೆರಡು ಹನಿಗಳೂ ಕೂಡಿದ್ದುವು. ಹೀಗಾಗಿ ಯಾಂತ್ರಿಕವಾಗಿ ಅವನು ಪುರೋಹಿತರು ಹೇಳಿದ ವಿಧಿವಿಧಾನಗಳನ್ನು ಮಾಡುತ್ತ ಮಂಟಪದಲ್ಲಿ ಕುಳಿತುಕೊಂಡ. ಹೊಸತಾಗಿ ಹಸೆಯ ಮೇಲೆ ಕುಳಿತ ಹರೆಯದ ಹಸನ್ಮುಖಿ ಹೆಣ್ಣನ್ನು ಓರೆಗಣ್ಣಿನಲ್ಲಿ ನೋಡುವ, ನಗುವ, ಉಗುರಿಕ್ಕುವ, ವೈಮನೋ

ಚಾಪಲ್ಯವನ್ನೇನನ್ನೂ ಅವನು ತೋರಲಿಲ್ಲ. ಅವಳಾದರೋ ಲಜ್ಜಾಭಾರ ದಿಂದ ತಲೆ ತಗ್ಗಿಸಿಕೊಂಡೇ ಇದ್ದಳು.

ಧಾರೆಯಾದ ಮೇಲೆ ಕೆಲವರು ಹೊರಟರು. ಊಟವಾದ ಮೇಲೆ ಊರಿನವರು ತಂತಮ್ಮ ಮನೆಗಳ ದಾರಿ ಹಿಡಿದರು. ಒಕ್ಕಲು ಮಕ್ಕಳೂ ಒಳಗಿರಲಿಲ್ಲ. ಉಳಿದವರು ಗೋಪಾಲರಾಯರ ಆಪ್ತರಿಷ್ಟರು, ಅಷ್ಟೆ! ಅವರೂ ಅಪರೂಪಕ್ಕೆ ಬಂದವರಾಗಿದ್ದುದರಿಂದ ತಂತಮ್ಮೊಳಗೆ ಸುಖ ದುಃಖದ ಮಾತುಗಳಲ್ಲೇ ಮಗ್ನರಾದರು. ಒಳಹೊರಗಿನ ಜನರ ಊಟ ಉಪಚಾರಗಳಲ್ಲಿ ಅರವಿಂದನಿಗೆ ಎಳ್ಳಷ್ಟೂ ಬಿಡುವಿಲ್ಲ. ಯಾರು ಬಂದರು, ಯಾರು ಹೋದರು, ಯಾರಿಗೆ ಮಾನಮರ್ಯಾದೆ ಮುಟ್ಟಲಿಲ್ಲ, ಯಾರಿಗೆ ಊಟವಾಗಲಿಲ್ಲವೆಂಬ ತೈನಾದಿಯಲ್ಲಿ ಗೋಪಾಲರಾಯರು ಸದಾ ಓಡಾಡ್ತಿದ್ದರು. ಒಳಗೆ ನುಸುಳಿದ ಮಮಮಗಳಂತೂ ನಾಪತ್ತೆಯೇ ಸರಿ. ಹೀಗಾಗಿ ಒಂಟಿಗನ ಮನೋ ವ್ಯಾಕುಲವನ್ನು ಅವನು ಅನುಭವಿಸಿದ. "ಯಾವಾಗ ಕತ್ತಲಾದೀತು! ಯಾವಾಗ ಬೆಳಗಾದೀತು!" ಎಂದು ಅವನ ಯೋಚನೆ. "ಕತ್ತಲೆಯಾದರೆ ಪ್ರಸ್ತದ ಶಾಸ್ತ್ರ ಮುಗಿಸಿಯಾರು! ಬೆಳಗಾದ ಮೇಲೆ ಬೆಳ್ತಂಗಡಿಗೆ ಹೋದರಾಯಿತು!" ಎಂದವನ ಭಾವನೆ. ಆದರೆ ಅದೊಂದೂ ನಡೆಯಲಿಲ್ಲ. ಹೀಗಾಗಿ ಅವನು ತುಂಬಾ ಬೇಸರ ಪಟ್ಟ. ಮರುದಿನ ಸಂಜೆ ಬೆಳ್ತಂಗಡಿಗೆ ಮುಟ್ಟಿದಾಗ ಸ್ವಲ್ಪ ಸಿಟ್ಟಿನ ಮುಖ ಮುದ್ರೆಯೇ ಇತ್ತು.

ಆದರೆ ಅವನು ಆಸ್ಪತ್ರೆಯೊಳಗೆ ಕಾಲಿಟ್ಟ ಕೂಡಲೇ ಮಂಗಳೂರು ಮಲ್ಲಿಗೆಯ ಗಮಗಮ ಪರಿಮಳ ಬಂದಿತು. ಆ ಸುವಾಸನೆ ಮಂಗಳೂರಿನ ನೆನಪು ತಂದು ಕೊಟ್ಟಿತು. ಆ ಪರಿಮಳದೊಂದಿಗೆ ವಾಸಂತಿಯ ಮೈ ಸುಗಂಧವೂ ಬೆರೆತಿದ್ದುದರಿಂದ ವಾಸಂತಿಯೂ ಅವನ ಚಿತ್ತವನ್ನು ಅಲುಗಾಡಿಸಿದಳು. ಆದುದರಿಂದ ಅವನು ಕುರ್ಚಿಯಲ್ಲಿ ಕುಳಿತುಕೊಳ್ಳದೆ ಸುವಾಸನೆಯನ್ನು ಆಘ್ರಾಣಿಸುತ್ತ ಒಳಗೆ ಹೋದ. ಮತ್ತು ಅಲ್ಲಿ ವಾಸಂತಿ ಕುಳಿತುದುದನ್ನು ಕಂಡು "ನೀನು? ಇಲ್ಲಿ?" ಎಂದು ತಬ್ಬಿಬ್ಬಾಗಿ ಕೇಳಿದ. ಮತ್ತೆ ಅವನ ಬಾಯಿಂದ ಮಾತುಗಳೇ ಹೊರಡಲಿಲ್ಲ. ಒಂದು ಕ್ಷಣ ಅಲ್ಲೇ ಸ್ತಂಭದಂತೆ ನಿಂತ.

ಅವನನ್ನು ಕಾಣುವ ಕುತೂಹಲದಿಂದ ವಾಸಂತಿ ಅಷ್ಟು ದೂರದಿಂದ ಬಂದಿದ್ದಳು. ಅವನು ಇದಿರು ಬಂದಾಗ ಸ್ವಲ್ಪ ಕೋಪವೂ ಬಂತು. "ನೀನು ಕಪಟಿ'' ಎಂಬರ್ಥವನ್ನು ಆ ಹುಬ್ಬು ಗಂಟಿಕ್ಕಿದ ಮೋರೆ ನುಡಿಯಿತು. ಹೊರತು, ಅವನು ಮಾತನಾಡಿಸಿದಾಗ ಬೇರೆ ಉತ್ತರ ಬರಲಿಲ್ಲ. ಕೇವಲ ತುಟಿಗಳು ಮಾತ್ರ ಅಲುಗಿದುವು. ಕೋಪತಾಪಗಳಿಂದ ಅವನು ಏನು ಮಾಡುತಿದ್ದನೋ! ಹೊಡೆಯುತಿದ್ದನೋ! ವಾಸಂತಿ ನಿಂತು ಸುತ್ತಲೂ ಜನರಿರುವರೆಂದು ಕಣ್ಣಾಲಿಗಳನ್ನು ತಿರುಗಿಸಿಯೇ ಅವನಿಗೆ ಸನ್ನೆ ಮಾಡಿದಳು. ಮತ್ತು ಅವನು ಮಾತನಾಡ ಬಾರದೆಂದು ತನ್ನ ತೋರು ಬೆರಳಿನಿಂದ ತನ್ನ ತುಟಿಗಳನ್ನು ಒತ್ತಿಕೊಂಡಳು. ಹೆಡೆ ಮುಡಚಿದ ಹಾವಿನಂತೆ, ಅವನು ಅಲ್ಲಿಂದ ಮರಳಿ ಬಂದು ತನ್ನ ಆಸನವಲ್ಲಿ ಕುಳಿತುಕೊಂಡ.

ಡಾಕ್ಟರ್ ಆಸ್ಪತ್ರೆಗೆ ಬಂದ ಸಂಗತಿಯು ಅವನ ಮಿತ್ರರಿಗೆ ಹೇಗೆ ತಿಳಿಯಿತೋ! ಅವನು ಕುರ್ಚಿಯಲ್ಲಿ ಕುಳಿತಾಗಲೇ ಇಬ್ಬರು ಮೂವರು ನಗುತ್ತಾ ಬಂದರು. "ಏನು ಡಾಕ್ಟರರೇ! ನಮಗೆ ಹೇಳದೆ ಗುಟ್ಟಾಗಿ ಲಗ್ನವಾದಿರಂತಲ್ಲ! ನಾವು ಬರುತಿದ್ದರೆ ಅಷ್ಟು ಅನ್ನ ಪೈಸಲಾಗುತ್ತಿತ್ತೆಂದು ಹೆದರಿಕೆಯಾಯ್ತೋ ಹೇಗೆ, ನಿಮಗೆ? ಒಳ್ಳೇ ಜನವಯ್ಯಾ ನೀವು!" ಎಂದು ಉದ್ಗರಿಸಿದರು. "ಹ! ಹ!" ಎಂದು ಡಾಕ್ಟರ್ ಒಣನಗೆ ನಕ್ಕ.

"ಆಗ ಯಾರೋ ಆಸ್ಪತ್ರೆಗೆ ಹೋದ ಹಾಗಾಯಿತಲ್ಲ! ಬರುವಾಗ ಕರೆದುಕೊಂಡೇ ಬಂದಿರೇನು?" ಎಂದು ಮತ್ತೊಬ್ಬ ಕಿರಿಚಿದ.

ಆನಂದರಾಯನ ಹೊಟ್ಟೆಯೊಳಗೆ ಬೆಂಕಿಬಿದ್ದಂತಾಯಿತು. ಅದರ ಉರಿಜ್ವಾಲೆಯಿಂದ ಮೋರೆ ಕೆಂಪಡರಿತು. ಆದರೆ ಮತ್ತೆ ಸಹಿಸಿಕೊಂಡು ಹೇಳಿದ: "ಲಗ್ನವಾದ ಕೂಡಲೇ ಹುಡುಗಿಯನ್ನು ಬೆನ್ನಹಿಂದೆ ಕಳಿಸುತ್ತಾರೇನು? ನೀವು ಹಾಗೆಯೇ ಮಾಡಿದ್ದೀರಾ?"

ಆತನ ಮೋರೆ ಸಪ್ಪಗಾಯಿತು. "ಛೀ! ಛೀ! ಸಿಟ್ಟಾಗಬೇಡಿ ರಾಯರೇ! ಯಾರೋ ಹೊಸಬರು ಆಸ್ಪತ್ರೆಗೆ ತೆರಳುವುದನ್ನು ಕಂಡೆ. ನಿಮ್ಮ ಹೆಂಡತಿ ಆಗಿರಲೂ ಬಹುದು ಎಂದು ತರ್ಕಿಸಿದೆ. ಅಷ್ಟೆ!" ಎಂದವನು ಕೂಡಿಸಿದ.

ಡಾಕ್ಟರ್ ಉತ್ತರವಿತ್ತು: "ಆಸ್ಪತ್ರೆಗೆ ನೂರಾರು ಜನ ಬರುತ್ತಾರೆ,

ಹೋಗುತ್ತಾರೆ.''

"ಹೋಗಲಿ ಸ್ವಾಮಿ. ಅವನ ಮಾತನ್ನೇನು ಕೇಳುತ್ತೀರಿ. ಬಿಟ್ಟು ಬಿಡಿ. ಈಗ ಏನಾದರೂ ಬಾಯಿ ಸಿಹಿ ಮಾಡುತ್ತೀರೋ ಅಥವಾ ಹೀಗೆಯೇ ಒಣ ಒಣ ಠಣ ಠಣ ಮಾತು ಹಾರಿಸುತ್ತೀರೋ ?" ಎಂದು ಮೂರನೆಯವ ಒರೆದ.

ಡಾಕ್ಟರನಿಗೂ ಅಷ್ಟೇ ಬೇಕಾಗಿತ್ತು. "ಈ ಮಾರಿಗಳನ್ನು ಹೇಗೆ ಬೇಗ ಹೊರಗೆ ಹಾಕಲಿ ?" ಎಂದವನೂ ಯೋಚಿಸುತಿದ್ದ. ಆದುದರಿಂದ ಅವನು ಕುರ್ಚಿಯಿಂದೆದ್ದು "ನಡಿಯಿರಿ ! ಬಾಯಿ ಸಿಹಿ ಮಾಡುವುದೇನು ದೊಡ್ಡ ಅಗಾಧ?'' ಎಂದು ಹೇಳಿ ಹೊರಟ. ಹತ್ತಿರದ ಹೋಟೇಲುಗಳು ಚೆನ್ನಾಗಿಲ್ಲವೆಂದು ಹೇಳಿ ದೂರ ಕರೆದುಕೊಂಡು ಹೋದ. ಫಲಾಹಾರ ಮುಗಿಸಿ ಅವನು ಮರಳಿದಾಗ ಕತ್ತಲೆಯೇ ಪಸರಿಸಿತು. ನಾರಾಯಣ ಇದಿರಿನ ಬಾಗಿಲೆಳೆದುಕೊಂಡು ಹೊರಡುವುದರಲ್ಲಿದ್ದ. ಆನಂದರಾಯ ಅವನನ್ನು ನೋಡಿ "ಟಿಫಿನ್ ಕ್ಯಾರಿಯರ್"ನಲ್ಲಿ ಎರಡು ಊಟ ಇಲ್ಲೇ ತೆಗೆದುಕೊಂಡು ಬಾ." ಎಂದು ಹೇಳಿದ. ಪುನಃ ಬಾಗಿಲನ್ನು ಹಾಕಿಕೊಂಡು ಮೇಜಿನ ಮೇಲಿನ ದೀಪವನ್ನು ಸ್ವಲ್ಪ ದೊಡ್ಡದಾಗಿ ಮಾಡಿದ.

ಒಳಗೆ ಬಳೆಗಳ ಕಿಣಿಕಿಣಿ ಸಪ್ಪಳ. ಅದು ಅವನ ಅಂತಃಕರಣವನ್ನು ಅಲುಗಿಸಿತು. ಮೈ ರೋಮಾಂಚವಾಯಿತು. ಅನೇಕ ವರುಷಗಳ ಸ್ನೇಹದ ಎಳೆ ಅವನನ್ನು ಒಳಗೆ ಎಳೆದೊಯ್ದಿತು. ಸದ್ದಿಲ್ಲದೆ ಅವನು ಬಂದು ಅವಳ ಗಲ್ಲವನ್ನು ತೀವಿದ. ಅವನ ಆ ಸುಟ್ಟ ಮೋರೆ ಮುಗುಳು ನಗೆಯನ್ನು ಬೀರಿತು. ಆಗ ಅವಳ ಕಠಿನವಾದ ಕೋಪವೂ ಅಡಗಿ ಹೋಯ್ತು. ಕಂಬನಿಯ ಪ್ರವಾಹವೇ ಇಳಿಯಿತು. ಅದು ಅವನ ಹೃದಯವನ್ನು ಇನ್ನಷ್ಟು ಮೃದುಗೊಳಿಸಿತು. ಕಣ್ಣೋಟ, ಮೋಹದ ಮಾಯೆ, ಆಲಿಂಗನ, ಶಾರೀರಿಕ ಸತ್ಕಾರ, ನಮಸ್ಕಾರಗಳಿಗಿಂತಲೂ ಈ ಕಣ್ಣೀರೇ ಅವನ ಮೇಲೆ ಹೆಚ್ಚಿನ ಪರಿಣಾಮವನ್ನುಂಟು ಮಾಡಿತು.

ರಾತ್ರಿ ನಾರಾಯಣ ಹೊರಗೆ ಎರಡು ಬೆಂಚುಗಳನ್ನು ಜೋಡಿಸಿ ಅದರ ಮೇಲೆ ಜಮಖಾನೆ ಹಾಸಿ ಮಲಗಿಕೊಂಡ. ಒಳಗೆ ಇದ್ದುದು ಆನಂದರಾಯನ ಒಂದೇ ಹಾಸಿಗೆ. ಮತ್ತು ಅದರಲ್ಲೇ ಅವರು ಮಲಗಿ

ಕೊಂಡರು. ಆದರೆ ವಾಸಂತಿ ಮಾತ್ರ ಹೊಸತಾಗಿ ಬಂದ ಮುಗ್ಧೆಯಂತೆ ಹಾಸಿಗೆಯ ಒಂದು ಬದಿಯಲ್ಲಿ, ಆಚೆ ಮುಖ ತಿರುಗಿಸಿ ಒರಗಿದಳು. ಅವನೂ ಇನ್ನೊಂದು ಬದಿ ಸೇರಿದ. ಇಬ್ಬರೂ ಸ್ವಲ್ಪ ಹೊತ್ತಿನ ವರೆಗೆ ಉಕ್ತಿ ಪ್ರತ್ಯುಕ್ತಿಗಳನ್ನು ಆಡಲೇ ಇಲ್ಲ. ಆದರೆ ಮೆಲ್ಲ ಮೆಲ್ಲನೇ ಮದನನು ಪ್ರಸನ್ನನಾಗಿ ಅವರೀರ್ವರ ಕೋಪವನ್ನೂ ನಾಶಪಡಿಸಿದನು. ಮತ್ತು ಇಬ್ಬರೂ ಒಬ್ಬರನ್ನೊಬ್ಬರು ತಬ್ಬಿಕೊಂಡರು.

"ವಾಸಂತೀ?"

"ಏನು ?''

"ನನ್ನ ಮೇಲಿನ ಕೋಪ ಬಿಡು''.

"ಕೋಪಿಸಿ ಏನು ಮಾಡಿದೆ ?''

"ಅಳುತ್ತಿರುವೆಯಲ್ಲ''.

"ಹೌದು. ದು:ಖವಾಗಿದೆ. ಆದರೆ ಅದರಿಂದ ನಿಮಗೇನು ?"

"ನನಗೆ ದುಃಖವಾಗುವುದಿಲ್ಲವೇ ?''

"ನಾನು ನಿಮಗೆ ಏನಾಗಬೇಕು ?"

ಮುಳ್ಳು ಚುಚ್ಚಿದಂತೆ ಅವನು ನೊಂದು "ಹೀಗೇಕೆ ಕೇಳುತ್ತೀ ವಾಸಂತೀ ? ನೀನು ನನಗೇನಾಗಬೇಕೆಂದು ನಾನು ಪದೇ ಪದೇ ಹೇಳಬೇಕೇ ? ನೀನು ನನ್ನ ಹೆಂಡತಿ ಸಮಾನ !''

"ಅಯ್ಯೋ ! ಹಾಗಾಗಲಿಲ್ಲವೆಂದೇ ನಾನು ದುಃಖಿಸುತ್ತಿರುವೆನು !'' ಎಂದು ಅವಳು ಸೀರೆಯ ಸೆರಗಿನಿಂದ ಕಣ್ಣುಗಳನ್ನೊರಸಿಕೊಂಡಳು.

ಅವನು ನಿರುತ್ತರನಾದ. ಅವಳೇ ಹೇಳಿದಳು: "ನಮ್ಮಿಬ್ಬರ ಸ್ನೇಹ ಇಂದು ನಿನ್ನೆಯದಲ್ಲ. ನೀನು ಬಹುಕಾಲ ನನ್ನನ್ನು ಪ್ರೇಮಿಸಿದೆ. ಪ್ರೇಮ ಲೀಲೆಯಲ್ಲಿ ನಲಿದೆ. ಈಗ ಜೀವನ ಪರ್ಯಂತವೂ ಅನುಭವಿಸಬೇಕಾದ ದುಃಖದ ಭಾರ ಹೃದಯವನ್ನು ಆವರಿಸಿದೆ. ನಿನ್ನ ಪ್ರೇಮವನ್ನು ನಾನು ಕಳೆದುಕೊಂಡೆನೇ ? ನಮ್ಮಿಬ್ಬರನ್ನೂ ಬಂಧಿಸಿದ ಪ್ರೇಮದ ಪವಿತ್ರ ಕಟ್ಟು ಸಡಿಲಾಯಿತೇ ? ನನ್ನ ಮೇಲೆ ಇಷ್ಟು ಔದಾಸೀನ್ಯ ಹೇಗಾಯಿತು ? ನಾನೇನು ಅಂತಹ ತಪ್ಪು ಮಾಡಿದೆ ? ನನ್ನೊಡನೆ ಒಂದು ಮಾತನ್ನೂ ಕೇಳಲಿಲ್ಲ ! ಇಷ್ಟು ನಿಷ್ಕರುಣೆ ನಿಮ್ಮ ಹೃದಯದಲ್ಲಿದೆ ಎಂದು ನಂಬಿದ

ವಳಲ್ಲ.''

ವಾಸಂತಿ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಅವನು ಹಾಸಿಗೆಯಲ್ಲಿ ಎದ್ದು ಕುಳಿತುಕೊಂಡ.

ಅವಳೇ ಮಾತು ಮುಂದುವರಿಸಿದಳು: "ನೀವು ಲಗ್ನವಾದ ಸುದ್ದಿ ಕೇಳಿ ನನ್ನ ಎದೆ ಸೀಳಿ ಹೋಗಲಿಲ್ಲವಲ್ಲ! ಸೀಳುತಿದ್ದರೆ ಎಷ್ಟೋ ಒಳ್ಳೆಯದಾಗುತಿತ್ತು. ನೀವು ಡಾಕ್ಟರರು! ಒಂದಿಷ್ಟು ವಿಷವನ್ನಾದರೂ ಕೊಡಲಾರಿರಾ?"

ಅದನ್ನು ಕೇಳಿ ಆನಂದರಾಯ ತುಂಬಾ ಕರಗಿದ. ಪುನಃ ಅವಳೊತ್ತಿಗೆ ಒರಗಿ ಎಡಗೈಯಿಂದ ಅವಳನ್ನು ಸುತ್ತಿಕೊಂಡು ಬಲಗೈಯಿಂದ ತಲೆ ನೇವರಿಸಿದ. ಬೆನ್ನು ಕೈ ಮೈಗಳ ಮೇಲೆ ಕೈ ಆಡಿಸಿದ. ಸ್ವಲ್ಪ ವೇಳೆಗಳೆದ ಮೇಲೆ ಅವಳ ಅಳು ನಿಂತಿತು. ಮನಸ್ಸಿನ ಉದ್ವೇಗ ಕಡಿಮೆಯಾಯಿತು. ರೆಕ್ಕೆಯೊಳಗೆ ಹೊಕ್ಕು ಹುದುಗಿಕೊಳ್ಳುವ ಮರಿಯಂತೆ ಅವಳು ಅವನ ಹತ್ತಿರ ಹತ್ತಿರ ಸರಿದಳು. ಆ ಮೈ ಸ್ಪರ್ಶದಿಂದ ಇಬ್ಬರಲ್ಲೂ ಕಾವೇರಿತು. ಅವನು ತಲೆ ಮೊಲೆ ತಡವುತ್ತ ಚುಂಬಿಸಿದಾಗ ಇರ್ವರ ಬಟ್ಟೆಗಳೂ ಜಾರಿ ಹೋದುವು. ಕಾಮಾತುರದ ಉಲ್ಲಾಸವೆದ್ದು ಇಬ್ಬರೂ ಕೂಡಿದರು. ಬಹುಕಾಲದ ವಿರಹದಿಂದ ಬೆಂದ ಅವರಿಬ್ಬರೂ ಸೊಕ್ಕಾನೆಗಳಂತೆ ಸೊಗಸಿದರು. ಆಗ ವಾಸಂತಿ ಅವನ ಮೇಲಿದ್ದ ತನ್ನ ಸಿಟ್ಟನ್ನು ವ್ಯಕ್ತಪಡಿಸಲು ಸ್ವಲ್ಪ ಬಲವಾಗಿಯೇ ಗುದ್ದಿದಳು. ಚುಂಬಿಸುವ ನೆವದಿಂದ ಅವನ ಕೆಳದುಟಿಯನ್ನು ಬಿಗಿಯಾಗಿ ಕಚ್ಚಿದಳು. ಅವನ ತೊಡೆಗೆ ಉಗುರಿಕ್ಕಿದಳು. "ನಿನ್ನೆದೆ ಕಠಿನ, ಅದನ್ನು ತಿವಿದಾದರೂ ಮೃದುಗೊಳಿಸುತ್ತೇನೆ'' ಎಂದವಳು ಹೇಳಿ ತನ್ನ ಸ್ತನಗಳೆರಡನ್ನೂ ಈಟಿಗಳಂತೆ ಅವನ ಎದೆಗೆ ತಿವಿದಳು. "ಹೌದು: ನಿನ್ನ ಅಂಗಾಂಗವೆಲ್ಲ ಮೃದು. ಆದರೆ ಇವೆರಡೇ ಕಠಿನ. ಅವನ್ನು ಚಪ್ಪಟೆ ಮಾಡುತ್ತೇನೆ ನೋಡು" ಎಂದವನು ನುಡಿದು ಒತ್ತಿದನು. ಹೀಗೆ ರತಿ ಲೀಲೆಯೊಂದಿಗೆ ಲಲ್ಲೆ ಮಾತುಗಳನ್ನಾಡುತ್ತ ಅವರು ನೆರೆದರು. ರತಿ ಕಾಲದ ಕಡೆಯ ಹದನದಿಂದ ಅವನು ತಣಿದು ದಣಿದ. ಅರೆದೆರೆದ ಕಣ್ಣುಗಳಿಂದ ಅವಳ ಅಂಗಾಂಗ ಸುಖಾಂಗಗಳ ಸುಖ ನೋಟವನ್ನು ಸವಿಯುತ್ತ, ಕಾಮ ಮೂರ್ಛೆಯ ಸ್ಥಿತಿಯಲ್ಲಿ ಅವನು ಅವಳ ಒತ್ತಿಗೆ ಒರಗಿದಾಗ, ಅವಳು ತನ್ನ ನಳಿದೋಳುಗಳ ಕಟ್ಟನ್ನು ಸಡಿಲಿಸದೆ ಕಿವಿಯ

ಹತ್ತಿರ ತನ್ನ ಮುಖವನ್ನಿಟ್ಟು ಕೇಳಿದಳು:

"ಅವಳ ಹೆಸರೇನು ?"

"ಕಾವೇರಿ"

"ಛೇ, ಚೆನ್ನಾಗಿಲ್ಲ !''

"ಹೌದು. ಆದರೆ ಅವಳು ಚೆನ್ನಾಗಿರುವಳು."

"ನನ್ನಷ್ಟು ?"

"ನಿನ್ನ ಸೌಂದರ್ಯವೇ ಒಂದು ವಿಧ. ಅವಳ ರೂಪವೇ ಇನ್ನೊಂದು ವಿಧ. ಮಾವಿನ ಹಣ್ಣುಗಳನ್ನು ನೀನು ನೋಡಿರುತ್ತೀ ! ಎಲ್ಲ ಮಾವು ! ಆದರೆ ಅವುಗಳಲ್ಲಿ ನಾನಾ ಆಕಾರದ, ನಾನಾ ಗಾತ್ರದ, ನಾನಾ ಪರಿಮಳದ ನಾನಾ ಬಣ್ಣದ ಹಣ್ಣುಗಳಿವೆ. ನೀಲಂ, ಪೈರಿ, ಮಲಗೋವಾ, ಅಫುಸ್ ಇತ್ಯಾದಿ ಬೇರೆ ಬೇರೆ ಜಾತಿಯ ಹಣ್ಣುಗಳಿವೆ. ಆದರೆ ಒಂದೊಂದರ ರಸ ರುಚಿ ಒಂದೊಂದು ವಿಧ. ಈ ಹೆಣ್ಣು ಕೂಡಾ ಅಷ್ಟೇ !" ಎಂದವನು ನಕ್ಕು ಅವಳ ಗಲ್ಲ ಚಿವುಟಿದ.

"ಹುಂ, ನೀನು ಬಹಳ ಫಕ್ಕಾ ಇದ್ದೀಯಾ, ಕಳ್ಳ !" ಎಂದವಳು ಹೇಳಿ ಲಟಕ್ಕನೇ ಅವನ ಕೆನ್ನೆ ಮುದ್ದಿಸಿ "ನಾನು ಯಾವ ಹಣ್ಣಿನ ಹಾಗೆ?" ಎಂದು ಪ್ರಶ್ನಿಸಿದಳು.

ಅವನು ಸ್ವಲ್ಪ ಯೋಚಿಸುವಂತೆ ನಟಿಸಿ ಹೇಳಿದ: "ಹೇಳಲಾರೆ."

"ಯಾಕೆ ?''

"ಒಮ್ಮೆ ನೀಲಂ ತಿಂದ ಹಾಗೆ ಅನ್ನಿಸುತ್ತದೆ. ಮತ್ತೊಮ್ಮೆ ಅಫುಸ್ ಹಣ್ಣಿನ ಸವಿ. ಸಿಟ್ಟು ಬಂದಾಗಲಂತೂ ಹುಳಿಗೊಡ್ಡು ಕಾಟು ಮಾವಿನ ಕಾಯಿಯೇ ಸರಿ'' ಎಂದವನು ನಕ್ಕು ಹಲ್ಲು ಕಿರಿಚಿದ.

ಅವಳೂ ಪ್ರಣಯ ಕೋಪ ನಟಿಸಿ "ಹುಂ" ಎಂದು ಸೀತ್ಕರಿಸಿ ಅವನ ಕಿವಿ, ಬೆನ್ನು, ತೊಡೆಗಳಿಗೆ ಉಗುರಿಕ್ಕಿದಳು. ಕಚಕುಳಿಯಾಗಿ ಮೀನಿನಂತೆ ಅವನು ತೊಳಲಿ "ಬಹಳ ಸವಿ, ನೀನು ಬಹಳ ಸವಿ" ಎಂದ.

"ಮತ್ತೆ ಅವಳು ?'' ಎಂದು ಸವತಿ ಮತ್ಸರದಿಂದಲೋ ಏನೋ ವಾಸಂತಿ ಕೇಳಿದಳು.

"ಇನ್ನೂ ರುಚಿ ನೋಡಿಲ್ಲ !''

"ರುಚಿ ನೋಡಿಲ್ಲ? ಇದು ಸುಳ್ಳು!''

"ನನ್ನಾಣೆ''

ಅವಳು ತನ್ನ ಕಣ್ಣುಗಳನ್ನು ಅಗಲಿಸಿ ಕೇಳಿದಳು: "ಆಶ್ಚರ್ಯ! ಅವಳು ನಿಮ್ಮನ್ನು ಮೋಹಿಸಿ ಬಲೆಯೊಳಗೆ ಎಳೆದುಕೊಂಡಿರಬೇಕೆಂದು ಊಹಿಸಿದ್ದೆ. ನನ್ನಿಂದ ದೂರವಿರುವ ನೀವು ಆತುರದಿಂದ ಗದ್ದಲ ಮಾಡಿ ಸಿಕ್ಕಿ ಬಿದ್ದಿರ ಬೇಕು ಎಂದು ಭಾವಿಸಿದ್ದೆ. ಹಾಗಾಗಿ ಮದುವೆಯಾಗಲು ಒತ್ತಾಯ ತಂದುದರಿಂದ ಒಪ್ಪಿಕೊಂಡಿರಬೇಕೆಂದು ಯೋಚಿಸಿದ್ದೆ. ಆದರೆ ಕಥೆ ಹಾಗಿಲ್ಲವಲ್ಲ!"

"ಹಾಗಿಲ್ಲ, ವಾಸಂತೀ. ಅವಳು ನಿನ್ನಂತಲ್ಲ. ಪುರುಷರನ್ನು ನಗೆ ನೋಟ ಬೇಟಗಳಿಂದ ಒಲಿಸಿಕೊಳ್ಳುವ ಮಾಯಾ ಮಂತ್ರ ಪ್ರಾಯಶಃ ತಿಳಿದಿರಲಾರಳು. ಅವಳು ನಗರದ ನಾರಿಯೂ ಅಲ್ಲ. ಹಳ್ಳಿ ಹುಡುಗಿ. ಅದರಲ್ಲೂ ಈ ಮಲೆನಾಡಿನಲ್ಲಿ ಹುಟ್ಟಿ, ಬೆಳೆದು ಬಂದವಳು. ಅವಳನ್ನು ಮುಟ್ಟುವುದೊತ್ತಟ್ಟಿಗಿರಲಿ, ನಾಲ್ಕು ಸಲ ನಾನು ಸರಿಯಾಗಿ ನೋಡಿ, ಮಾತನಾಡಿಸಿಲ್ಲ!"

ವಾಸಂತಿಯ ತುಟಿಗಳು ವಕ್ರ ನಗೆ ಬೀರಿದುವು. ಮತ್ತು ಅವಳು ಕೇಳಿದಳು: "ಹಾಗಾದರೆ ದುಡ್ಡಿನ ಆಶೆಗೆ ಒಳಗಾದಿರಾ?"

"ಇಲ್ಲ. ಒಂದು ದುಡ್ಡೂ ತೆಗೆದುಕೊಂಡಿಲ್ಲ!"

ಅವಳು ಅವನ ಕೈಯನ್ನು ಸೆಳೆದು ತನ್ನ ಕೋಮಲಾಂಗಗಳಿಗೆ ಸವರಿಕೊಂಡು ಹೇಳಿದಳು: "ಹಾಗಿದ್ದರೆ ಈ ಸುಖದ ಅತ್ಯಾತುರ ನಿಮಗೆ! ಅಷ್ಟು ಆಶೆಯಿದ್ದರೆ ದಿನಂಪ್ರತಿ ಬರಬಹುದಿತ್ತಲ್ಲ.! ನಾನು ಬೇಡವೆನ್ನುತ್ತೇನೆಯೇ? ಅಥವಾ ಇಲ್ಲೇ ಒಂದು ಸಣ್ಣ ಮನೆ ಮಾಡಿ ಕೊಡಬಹುದಿತ್ತು. ನಾನು ನಿಮ್ಮವಳೇ ಅಲ್ಲವೇ! ನಿಮಗೆ ಸರ್ವಸ್ವವನ್ನೂ ಅರ್ಪಣ ಮಾಡಿದ್ದೇನೆ. ನಿಮ್ಮ ಮಾತನ್ನು ಮೀರಿದವಳಲ್ಲ. ಇಷ್ಟಿದ್ದರೂ ನೀವು ನನ್ನೊಡನೆ ಒಂದು ಮಾತನ್ನು ಕೇಳಲಿಲ್ಲ. "ರೂಪಕ್ಕೆ ಗುಣಕ್ಕೆ ಸೋತು ಹೋದೆ'' ಎಂದನ್ನುತ್ತೀರಾ? ಅದೂ ಇಲ್ಲ. ನನ್ನಲ್ಲಿಲ್ಲದುದು ಅಲ್ಲಿಲ್ಲ. ಹಣ ಸಿಕ್ಕಿತು ಎಂದು ವಿಚಾರ ಮಾಡಿದಿರಾ? ಹೋಗಲಿ. ಅದೂ ಒಂದು ಲೆಕ್ಕ. ಹಣದಾಸೆಯಿಂದ ಮದುವೆಯಾಗುವವರೂ ಇದಾರೆ. "ಏನೋ ಕಾತುರ ಸಹಿಸದೆ

ಹೋದೆ, ಮೈ ಮೇಲೆ ಬಂತು" ಎಂದರೆ ಅದೂ ಒಂದು ರೀತಿಯೇ. ಈ ಯಾವುದಕ್ಕೂ ನಾನು ಬೇಡವೆನ್ನುತ್ತಿದ್ದಿಲ್ಲ.''

"ಈಗ ಏನಾಯಿತು ?''

"ಇನ್ನು ಏನಾಗಬೇಕು ?"

"ಅಂದರೆ ?"

"ನನ್ನ ಗತಿ ?''

"ಹಾಗೆ ಯಾಕೆ ಚಿಂತಿಸುತ್ತೀ, ವಾಸಂತೀ ?''

"ಚಿಂತಿಸುವ ಕಾಲ ಬಂದಿದೆಯಲ್ಲ! ನೀವು ಇಷ್ಟರ ವರೆಗೆ ನನ್ನನ್ನೇ ಮೆಚ್ಚಿಕೊಂಡಿದ್ದಿರಿ. ಈಗ ಮತ್ತೊಬ್ಬಳನ್ನು ನೆಚ್ಚಿರುವಿರಿ. ನನ್ನ ಮೇಲೆ ಬೇಸರ ಬಂದಿದೆ ಎಂದು ಅದಕ್ಕೆ ಅರ್ಥವಾಗುವದಿಲ್ಲವೇ ?"

"ಇಲ್ಲ, ವಾಸಂತೀ ಇಲ್ಲ. ಮೊದಲಿನಂತೆಯೇ ನಿನ್ನನ್ನು ನೋಡಿಕೊಂಡಿರುತ್ತೇನೆ.''

"ನೀವು ಹೇಳುತ್ತೀರಿ ಹೀಗೆ. ಅವಳು ಎಷ್ಟಾದರೂ ಲಗ್ನವಾದ ಹೆಂಡತಿ. ನಾನಲ್ಲ. ನಾನು ಸೂಳೆ !''

"ಥೂ ! ಥೂ ! ಎಂತಹ ಮಾತುಗಳನ್ನಾಡುತಿದ್ದೀಯಾ ಮರುಳೆ !'' ಎಂದವನು ಹೇಳಿ ತನ್ನ ಕೈಯಿಂದ ಅವಳ ಬಾಯನ್ನು ಮುಚ್ಚಿ ಸಾಂತ್ವನದ ಮಾತುಗಳನ್ನಾಡಿದ: "ನೀನೆಂತಹ ಹುಚ್ಚು ಹುಡುಗಿ! ಮದುವೆ ಆದರೆ ಏನಾಯಿತಂತೆ? ನೀನು ಆಕ್ಷೇಪಿಸಲಿಕ್ಕಿಲ್ಲವೆಂದು ತಿಳಿದು ನಾನು ನಿನ್ನನ್ನು ಕೇಳಲಿಲ್ಲ. ಇಷ್ಟು ವರುಷಗಳ ಮಧುರ ಸ್ನೇಹವಿದ್ದ ಮೇಲೆ ನನಗೆ ನಿನ್ನ ಮೃದು ಹೃದಯದ ಅರಿವು ಇಲ್ಲವೆನ್ನುತ್ತೀಯಾ! ನಿನ್ನಂತಹ ಸ್ತ್ರೀ ರತ್ನ ಎಲ್ಲಿ ಹುಟ್ಟಿ ಬಂದರೇನು ? ಅದೆಲ್ಲವನ್ನು ನಾನು ಗಮನಿಸುವವನಲ್ಲ. ಆದುದರಿಂದಲೇ ನಿನ್ನನ್ನು ಪ್ರೇಮಿಸಿದೆ. ಇನ್ನಾದರೂ ಪ್ರೇಮಿಸುತ್ತೇನೆ. ಮನುಷ್ಯನ ಜೀವನದಲ್ಲಿ ಎಳೆ ವಯಸ್ಸಿನಿಂದ ಅಂಟಿಕೊಂಡ ಅಂಟು ನಂಟು ಕೊನೆಗಾಲದ ವರೆಗೂ ಅಚ್ಚಳಿಯದೆ ಉಳಿಯುತ್ತದೆ. ನೀನಿನ್ನೂ ಸಣ್ಣವಳು. ಆ ಅನುಭವವನ್ನು ಅರಿತಿಲ್ಲ. ಲೋಕಾನುಭವವೂ ಗೊತ್ತಿಲ್ಲ. ಆದುದರಿಂದ ಏನೇನೋ ಮರುಳು ಮಾತುಗಳನ್ನಾಡುತಿದ್ದೀಯಾ ! ಲೋಕದಲ್ಲಿ ಎರಡು ಮೂರು ಹೆಂಡಂದಿರನ್ನು ಕಟ್ಟಿಕೊಂಡವರು ಇಲ್ಲವೇನು ? ಹಿಂದಿನ

ರಾಜರು ಮಹಾರಾಜರು ತಂತಮ್ಮ ಅಂತಃಪುರದಲ್ಲಿ ನೂರಾರು ಸುಂದರಿಯರನ್ನು ಇಟ್ಟುಕೊಂಡಿದ್ದರಂತೆ! ಆ ವಿಶ್ವಾಮಿತ್ರನ ಕಥೆ ಕೇಳು. ಇದರೊಳಗೇನಿವೆ ? ಇದು ಅವನವನ ಇಚ್ಛಾನುಸಾರವನ್ನವಲಂಬಿಸಿದೆ. ನನ್ನಿಷ್ಟ. ನನಗೆ ನೀನು ಬೇಕು. ಯಾರು ಏನು ಮಾಡುವರು?''

"ನಾಳೆ ಅವಳು ಬೇಡವೆಂದರೆ ?''

"ಅನಲಾರಳು. ಹಳ್ಳಿಹುಡುಗಿಗೆ ಅಷ್ಟು ಧೈರ್ಯ ಎಲ್ಲಿಂದ ಬರಬೇಕು? ಗಂಡನ ಮುಂದೆ ನಿಂತು "ಹಾಗಲ್ಲ ಹೀಗೆ'' ಎಂದು ಗಟ್ಟಿಯಾಗಿ ಹೇಳಲಾರಳು ! ನಾನು ಹೇಳಿದ ಹಾಗೆ ಕೇಳಿಕೊಂಡು ಇರುವುದರಲ್ಲಿ ಸಂಶಯವಿಲ್ಲ. ಅದೆಲ್ಲ ನಮ್ಮ ನಮ್ಮ ಕೈಯಲ್ಲಿದೆ, ಬಿಡು. ನೀನು ಅದನ್ನೆಲ್ಲ ಯೋಚಿಸಿ, ತಲೆ ಕೆಡಿಸಿಕೊಳ್ಳುವುದು ಬೇಡ. ನಿನ್ನನ್ನು ಅನಾದರಿಸದಿದ್ದರೆ ಸರಿಯಲ್ಲ!"

"ಅಷ್ಟೇ".

"ಸರಿ. ಹಾಗಾದರೆ ಮಲಗಿಕೋ. ನಸು ಬೆಳಗ್ಗೆ ನಾರಾಯಣ ಎಚ್ಚರಿಸುತ್ತಾನೆ. ಮೊದಲನೇ ಮೋಟಾರಿಗೆ ಹೋಗಿಬಿಡು'' ಎಂದವನು ಕಣ್ಣೆವೆಗಳನ್ನು ಮುಚ್ಚಿಕೊಂಡ. ಆದರೆ ವಾಸಂತಿ ಆ ಕೂಡಲೇ ಅವನಿಗೆ ನಿದ್ದೆ ಮಾಡಲು ಬಿಡಲಿಲ್ಲ. "ನನಗೆ ತೃಪ್ತಿಯಾಗಲಿಲ್ಲ'' ಎಂದವಳು ನುಡಿದು ಪುನಃ ರತಿ ಕ್ರೀಡೆ ಆಡುವಂತೆ ಅವನನ್ನು ಉದ್ರೇಕಿಸಿದಳು. ಮತ್ತು ಅವನರಿಯದ ಅನೇಕ ಮದನ ರಹಸ್ಯವನ್ನು ತೋರಿಸಿದಳು. ಭೋಗದ ಬೇರೆ ಬೇರೆ ಆಸನಗಳನ್ನರುಹಿ ಲೀಲೆಯಾಡಿದಳು. ಅದರಲ್ಲಿ ಅವನಿಗಿಂತಲೂ ತಾನೇ ಹೆಚ್ಚಿನ ನೈಪುಣ್ಯ ತೋರಿಸಿದಳು. ಆನಂದರಾಯ ತುಂಬಾ ದಣಿದು, ಗಟ್ಟಿಯಾಗಿ ಶ್ವಾಸೋಚ್ಛ್ವಾಸವನ್ನು ಬಿಡುತ್ತ ಅವಳ ಒತ್ತಿಗೆ ಒರಗಿಕೊಂಡ. ಅವಳೂ ಆಯಾಸದಿಂದ ಮುದುಡಿಕೊಂಡಳು.

ನಸುಬೆಳಗ್ಗೆ ಗಡಿಯಾರ ಗಂಟೆ ಬಾರಿಸಿತು. ವಾಸಂತಿ ಎದ್ದು ಕಿರು ದೀಪವನ್ನು ಬೆಳಗಿಸಿ, ವಸ್ತ್ರಾಲಂಕೃತೆಯಾದಳು. ಆನಂದರಾಯನೂ ಎದ್ದು ಹಾಸಿಗೆಯ ಮೇಲೆ ಕುಳಿತು ಮೈ ಮುರಿದು ಆಕಳಿಸಿದ. ಹಲ್ಲು, ಮೋರೆ ತೊಳೆದು ವಾಸಂತಿ ತಲೆಬಾಚಿ ಹೆರಳು ಹಾಕಿಕೊಂಡಳು. ನಾರಾಯಣ ಹೋಟೇಲಿನಿಂದ ಕಾಫಿ, ಇಡ್ಲಿ ತಂದ. ಆ ಮೇಲೆ ಅವಳನ್ನು ಮೋಟಾರು ನಿಲ್ದಾಣಕ್ಕೆ ಕರೆದುಕೊಂಡು ಹೊರಟ. ದಾರಿಯಲ್ಲಿ ಕೇಳಿದ: "ಅಕ್ಕಾ !

ಆನಂದರಾಯ ಏನಂದ?"

"ಏನನ್ನುತ್ತಾರೆ! ಏನೋ ಆದದ್ದು ಆಗಿಹೋಯ್ತು. ನಿನ್ನನ್ನು ಬಿಟ್ಟುಹಾಕುವುದಿಲ್ಲ ಎಂದು ಹೇಳಿದರು."

"ನೀನು ಅದನ್ನು ನಂಬುತ್ತೀಯಾ?''

"ಈಗಂತೂ ನಂಬಬೇಕಾಗಿದೆ.''

"ಮುಂದೆ?''

"ಮುಂದೆ ಏನಾಗುತ್ತದೋ, ಯಾರು ಬಲ್ಲರು?''

"ಮುಂದಾಗುವುದನ್ನು ಈಗಲೇ ಯೋಚಿಸಿ, ಮುಂಜಾಗ್ರತೆ ವಹಿಸುವುದು ಜಾಣತನವಲ್ಲವೇ?''

"ಅಷ್ಟು ಜಾಣತನವಿರುತಿದ್ದರೆ ಹೀಗಾಗುತಿತ್ತೇ, ನಾರಾಯಣ! ಬಂದುದಕ್ಕೆ ಎದೆಗೊಡಬೇಕು. ಆದುದನ್ನು ಅನುಭವಿಸಬೇಕು''.

"ಒಳ್ಳೇ ಧರ್ಮಶಾಸ್ತ್ರ ಹೇಳುತ್ತೀ, ಬಿಡು! ಅಂತೂ ನಿನ್ನಿಂದ ಕೆಲಸವಾಗಲಿಲ್ಲವೆಂತ ಕಾಣುತ್ತದೆ".

"ಯಾವುದು?''

"ಓಹೋ! ಇಷ್ಟರೊಳಗೆ ಮರೆತು ಹೋಯಿತೇ? ಸ್ವಲ್ಪ ಹಣವನ್ನಾದರೂ ಸೆಳೆದುಕೋ ಎಂದೆನಲ್ಲ''.

"ಒಮ್ಮೆಯೇ ಹೇಗೆ ಸೆಳೆದುಕೊಳ್ಳಲಿ ಹೇಳು! ಅವರ ಕೈಯಲ್ಲಿ ಈಗಿಂದೀಗ ಅಷ್ಟು ಹಣವೂ ಇಲ್ಲ. ಸಟಕ್ಕನೇ ಸಾವಿರ ಕೇಳಿದರೆ ಸಂಶಯವೂ ಬಂದೀತು! ಸ್ವಲ್ಪ ಕಾಲ ಕಳೆಯಲಿ. ನಸೆಹಚ್ಚಿ, ಪುಸಲಾಯಿಸಿ, ಹೊತ್ತು ಗೊತ್ತುಗಳ ನೆವ ಹೇಳಿ, ತುಸು ತುಸು ಎಳೆದುಕೊಳ್ಳಬೇಕು. ಹುಡುಗಾಟ ಮಾಡಬೇಡ. ಸ್ವಲ್ಪ ಸಹನೆಯಿಂದಿರು. ಎಲ್ಲ ಸರಿಹೋಗುತ್ತದೆ."

"ಸಾಕು, ನಿನ್ನ ವೇದಾಂತ" ಎಂದವನು ಸ್ವಲ್ಪ ಬಿರುಸಾಗಿಯೇ ನುಡಿದ. ಆ ಮೇಲೆ ಮಾತನಾಡಲೂ ಇಲ್ಲ. ಅವನು ಗಂಟುಮೋರೆ ಹಾಕಿಕೊಂಡುದುದನ್ನು ವಾಸಂತಿ ನೋಡಿದಳು, ಮತ್ತು ಅದರಿಂದ ಅವಳಿಗೆ ಸ್ವಲ್ಪ ನೋವಾಯಿತು. ಮೋಟಾರಿನೊಳಗೆ ಕುಳಿತ ಮೇಲೆ ಅವನನ್ನು ಹತ್ತಿರ ಕರೆದು ಹತ್ತು ರೂಪಾಯಿಯ ಒಂದು ನೋಟನ್ನು ಕೊಡಹೋದಳು.

ಆದರೆ ಅವನು ತೆಗೆದುಕೊಳ್ಳಲಿಲ್ಲ. ಅದನ್ನು ಕಂಡ ಅವಳ ಕಣ್ಣು ತೊಯ್ದಿತು. ಆದರೆ ಆ ಮುಸುಕು ನಸುಕಿಗೆ ಅದು ಕಾಣುವಂತಿರಲಿಲ್ಲ. ಮೋಟಾರ್ ಬಿಡುವ ವೇಳೆಗೆ ಅವಳು ಹೊರಗೆ ಕತ್ತು ಚಾಚಿ, "ಏನಾದರೂ ವಿಶೇಷವಿದ್ದರೆ ಪತ್ರಬರೆ. ಮರೆಯಬೇಡ'' ಎಂದು ಪಿಸುಗುಟ್ಟಿದಳು. "ಹುಂ" ಎಂದವನು ತಲೆ ಅಲ್ಲಾಡಿಸಿದ. ಮೋಟಾರು ಹೊರಟು ಹೋಯಿತು.

ನಾರಾಯಣ ಅಲ್ಲೇ ಕುಳಿತುಕೊಂಡು ಒಂದು ಬೀಡಿ ಹೊತ್ತಿಸಿದ. ಸಂಪೂರ್ಣ ಬೆಳಗಾಗಲು ಇನ್ನೂ ಸ್ವಲ್ಪ ಹೊತ್ತಿತ್ತು. ಹೋಗಿ ಅವನು ಮಲಗಿಕೊಳ್ಳಬಹುದಿತ್ತು. ಆದರೆ ಅವನು ಬಯಸದೆ, ಹೊಳೆಯ ಕಡೆ ನಡೆದ. ನಿಲ್ಮನೆಯಿಂದ ಒಂದೆರಡು ಫರ್ಲಾಂಗು ದೂರದಲ್ಲೇ ಇದೆ, ಬೆಳ್ತಂಗಡಿ ಹೊಳೆ. ರಸ್ತೆಗಡ್ಡವಾಗಿ ಹರಿಯುತ್ತಿದೆ. ಆದುದರಿಂದ ದಾಟಲು ಒಂದು ಸೇತುವೆಯನ್ನು ಕಟ್ಟಿರುವರು. ಈ ಸಂಕ ಕಟ್ಟಿದಲ್ಲಿ ಕೆಳಗೆ ಅನೇಕ ಬಂಡೆಗಲ್ಲುಗಳೂ ಇವೆ. ಬೇಸಿಗೆಯಲ್ಲಿ ನೀರೂ ಆಳವಿಲ್ಲ. ಆದುದರಿಂದ ನಾರಾಯಣ ಇಳಿದು ಒಂದು ಬಂಡೆಗಲ್ಲನ್ನು ಏರಿ ಕುಳಿತ. ಮತ್ತು ಹಿಂದು ಮುಂದಿನ ಯೋಚನೆಗಳಲ್ಲೇ ಮಗ್ನನಾದ. ವಾಸಂತಿ ಹಣ ದೊರಕಿಸಿ ಕೊಡಬಹುದೆಂಬ ಅವನ ಆಶೆ ಬತ್ತಿಹೋಯಿತು. ಏನು ಮಾಡಲಿ, ಎಲ್ಲಿಗೆ ಹೋಗಲಿ, ಯಾವ ದಾರಿ ಹಿಡಿಯಲಿ ಎಂಬ ವಿಚಾರಗಳು, ಕೆಳಗಿನ ನದಿ ನೀರಿನ ಸುಳಿಸೆಳವುಗಳಂತೆ ಅವನನ್ನು ಅತ್ತಿತ್ತ ಎಳೆದುವು. ವ್ಯಥಿಕನಾಗಿ ಒರಗಿದ್ದ ಅವನಿಗೆ ಬಿಸಿಲಿನ ಶಾಖ ತಾಗಿದಾಗಲೇ ಸ್ವಪ್ರಜ್ಞತೆ ಬಂದಿತು. "ಹೊತ್ತಾಯಿತು. ಮಹಾರಾಯ ಏನನ್ನುತ್ತಾನೋ?" ಎಂದು ಹೊರಟ.

ಆಸ್ಪತ್ರೆಯೊಳಗೆ ಅವನು ಕಾಲಿಟ್ಟುದುದೇ ತಡ, ತಲೆ ತಗ್ಗಿಸಿ ಕುಳಿತಿದ್ದ ಆನಂದರಾಯ ಅವನನ್ನು ದುರದುರನೆ ನೋಡಿ, "ಎಲ್ಲಿಗೆ ಹೋಗಿದ್ದೀ, ಇಷ್ಟು ಹೊತ್ತು?'' ಎಂದು ಬಿರುಸಾಗಿ ಪ್ರಶ್ನಿಸಿದ.

ನಾರಾಯಣ ಇದಿರಾಡದೆ ಒಳಗೆ ಹೊರಟ. ಆಗ ಆನಂದರಾಯ ಕುರ್ಚಿಯಿಂದೆದ್ದು ಅವನ ಇದಿರು ಬಂದು "ಏ? ಎಲ್ಲಿಗೆ ಹೋಗಿದ್ದೀ? ನಿನಗೆ ಕಿವಿ ಕೇಳುವುದಿಲ್ಲವೇನು?" ಎಂದು ಪುನಃ ಪ್ರಶ್ನಿಸಿದ. ರಾತ್ರಿಯ ಕಾಮ ಕೇಳಿಯಿಂದ ನಿದ್ದೆಯಾಗದ ಅವನ ಕಣ್ಣುಗಳು ಕೆಂಪಡರಿದ್ದುವು. ತಲೆ ಗೂದಲನ್ನೂ ಅವನು ಚೆನ್ನಾಗಿ ಬಾಚಿಕೊಂಡಿರಲಿಲ್ಲ. ಅನು ಹುಬ್ಬು,

ಕಣ್ಣು, ಮುಖಗಳ ಮೇಲೆ ಸುಳಿದು ವಿಲಕ್ಷಣ ಕಳೆ ಕೊಟ್ಟಿತ್ತು. ಸಿಟ್ಟಿನಿಂದ ತುಟಿಗಳು ಅಲುಗುತಿದ್ದುವು. "ಪ್ರಾಯಶಃ ವಾಸಂತಿಯೊಡನೆ ನಾನು ಹೇಳಿದ್ದ ಮಾತುಗಳನ್ನು ಅವಳು ತಿಳಿಸಿರುವಳೋ ಏನೋ" ಎಂಬ ಸಂಶಯದಿಂದ ಅವನು ಸ್ವಲ್ಪ ಅಂಜಿದ. ಮತ್ತು "ಹೊಳೆ ಬದಿಗೆ ಹೋಗಿದ್ದೆ'' ಎಂದು ಅಳುಕಿ ನುಡಿದ.

"ಹೊಳೆ ಬದಿಗೆ ಹೋಗಿದ್ದೆಯಾ? ಇಷ್ಟು ಹೊತ್ತು? ಅಲ್ಲಿ ಏನು, ಮೀನು ಹಿಡಿಯುತಿದ್ದೆಯಾ? ಬದ್ಮಾಷ್!'' ಎಂದು ಹೇಳಿ ಕೆನ್ನೆಗಳಿಗೆ ಒಂದರ ಮೇಲೊಂದು ಏಟುಗಳನ್ನು ಏರಿಸಿದ. ನಾರಾಯಣ ಅಲ್ಲಿಂದ ಹೊರಗೋಡಲು ಯತ್ನಿಸಿದಾಗ, ಆನಂದರಾಯ ಅವನ ಅಂಗಿ ಹಿಡಿದು ಒಳಗೆ ಎಳೆದುಕೊಂಡು ಬಂದ. "ಓಡುತ್ತೀಯಾ ಮೂರು ಕಾಸಿನವನೆ! ಎಲ್ಲಿಗೆ ಓಡುತ್ತೀ?'' ಎಂದು ಹಂಗಿಸುತ್ತ ಬೆನ್ನಿಗೂ ಗುದ್ದಿ, ಒಳಗಿನ ಕೋಣೆಗೆ ನೂಕಿದ. "ರಾಸ್ಕಲ್! ಮುಂದಿ ಮುಂದೆಲ್ಲ ನಾನು ಸೂಳೆಯನ್ನಿಟ್ಟುಕೊಂಡಿದ್ದೇನೆಂತ ಬೊಗಳಿದೆಯಂತೆಲ್ಲ'' ಎಂದು ಹೇಳಿ ಅಲ್ಲೇ ಇದ್ದ ತನ್ನ 'ವಾಕಿಂಗ್ ಸ್ಟಿಕ್'ನಿಂದಲೇ ಥಳಿಸಿದ. "ನಿನ್ನ ಅಕ್ಕ ಇಲ್ಲಿಗೆ ಹೇಗೆ ಬಂದಳು? ಅವಳಿಗೂ ನೀನೇ ತಿಳಿಸಿರಬೇಕು. ಇಲ್ಲದಿದ್ದರೆ ಅವಳಿಗೆ ಇಲ್ಲಿಯ ಸಂಗತಿಯೆಲ್ಲ ಹೇಗೆ ಗೊತ್ತಾಯಿತು? ನನ್ನ ಅನ್ನ ತಿಂದು ನನಗೇ ತಿರುಗಿ ನಿಲ್ಲುತ್ತೀಯಾ, ........ಮಗನೆ? ಹುಟ್ಟು ಗುಣ ಗಟ್ಟ ಹತ್ತಿದರೂ ಬಿಡದು ಎಂದು ಅನ್ನುವುದು ಇದಕ್ಕೇ! ನಿನ್ನನ್ನು ಸಾಕುವುದಕ್ಕಿಂತ ಒಂದು ನಾಯಿ ಮರಿಯನ್ನು ತಂದು ಸಾಕಿದ್ದರೆ ಬಾಲ ಅಲ್ಲಾಡಿಸುತ್ತ ಬಿದ್ದುಕೊಂಡಿರುತಿತ್ತು!" ಎಂದು ಹೇಳಿ ಕಾಲಿನಿಂದಲೂ ತುಳಿದು, "ಇಲ್ಲೇ ಬಿದ್ದುಕೋ! ಹೊರಗೆ ಹೋದರೆ ನೋಡು!" ಎಂದು ಹೇಳಿ ಬಾಗಿಲೆಳೆದುಕೊಂಡು ಸರಪಣಿ ಸಿಕ್ಕಿಸಿದ.

ಆಸ್ಪತ್ರೆಯಲ್ಲಿರಲೂ ಅವನಿಗೆ ಮನಸ್ಸಾಗಲಿಲ್ಲ. ಬಾಗಿಲು ಎಳೆದು ರಸ್ತೆಯ ಆಚೆ ಮಗ್ಗುಲಿನ ಹೋಟೇಲಿಗೆ ಬಂದು "ಸ್ಪೆಶಲ್" ಕೋಣೆಯಲ್ಲಿ ಕುಳಿತ. ಹೋಟೇಲಿನ ಮಾಲಕನೇ ಅಲ್ಲಿಗೆ ಬಂದು ಅವನ ಬಳಿ ಕುಳಿತು "ಏನು ಬೇಕು'' ಎಂದು ಕೇಳಿ, ತಂದ. ಮತ್ತು ಅಲ್ಲೇ ಕುಳಿತು ಡಾಕ್ಟರ ನೊಡನೆ ಮಾತಿಗಾರಂಭಿಸಿದ. ಆಗ ಅವನು ಡಾಕ್ಟರನ ವಿಕಾರ ಮೋರೆ

ಯನ್ನು ನೋಡಿ, "ಏನು ಡಾಕ್ಟರರೆ! ಒಳ್ಳೇ ರಾವಿನಲ್ಲಿದ್ದೀರಲ್ಲ!'' ಎಂದು ಪ್ರಶ್ನಿಸಿದ.

ಡಾಕ್ಟರ್ ಉತ್ತರವಿತ್ತ: "ಹೌದ್ರಿ ಮತ್ತೆ! ನಮ್ಮ ನಾರಾಯಣನ ಕಥೆ ಕೇಳಿದಿರೋ ಇಲ್ಲವೋ? ತಿಂಗಳು ತಿಂಗಳು ಸಂಬಳ ತೆಗೆದುಕೊಳ್ಳು ತ್ತಾನೆ. ಮತ್ತೆ ಕದ್ದು ಮುಚ್ಚಿ ಗಳಿಸುವುದು ಬೇರೆ. ಆದರೆ ಮನೆಗೆ ಒಂದು ಚಿಕ್ಕಾಸು ಕಳಿಸುವುದಿಲ್ಲ, ನೋಡಿ! ಅವರು ಅಲ್ಲಿ ಗಂಜಿಗೆ ಗತಿಯಿಲ್ಲದೆ ಸಾಯುತಿದ್ದಾರೆ. ಇಲ್ಲಿ ಇವನ ಶೋಕಿ ನೋಡಿದರೆ ಬೇಡ! ಎಂತಹ ಹುಡುಗನ್ರೀ! ನಿನ್ನೆ ಧರ್ಮಸ್ಥಳಕ್ಕೆ ತೆರಳಿದ್ದ ಅವನ ಬಂಧು ಬಳಗದವರು ಬಂದಿದ್ದರು. ಅವನ ರಾಮಾಯಣ ಆಗ ಎಲ್ಲ ಗೊತ್ತಾಯಿತು. ಸರಿಯಾಗಿ ನಾಲ್ಕು ಎಳೆದರು ಬೆನ್ನಿಗೆ. ಗಿಡವಾಗಿ ಬಗ್ಗದುದು ಮರವಾಗಿ ಬಗ್ಗದು ಎಂದು ನಾನೂ ಸುಮ್ಮಗಾದೆ."

ಮಾಲಕ ಮೋರೆ ಒಗ್ಗಿಸಿ "ಡಾಕ್ಟರರೇ! ನಮಗೂ ಕೊಡುವುದು ಬಾಕಿ ಬಹಳ ಇದೆ. ನಿಮ್ಮ ಮೋರೆ ನೋಡಿ ನಾವು ಕೇಳಿಲ್ಲ'' ಎಂದ.

"ಹಂ! ನೀವು ಇಷ್ಟರ ವರೆಗೆ ಯಾಕೆ ಹೇಳಲಿಲ್ಲ. ಹಾಗಿದ್ದರೆ ನಾನು ಸಂಬಳವನ್ನೇ ಕೊಡುತ್ತಿದ್ದಿಲ್ಲ. ಎಂತಹ ಬದ್ಮಾಷ್ ಇದ್ದಾನರೀ! ಮತ್ತೆ ಇಲ್ಲೆಲ್ಲಾದರೂ ಯಾವಾಕೆಯನ್ನಾದರೂ ನೋಡಿಕೊಂಡಿದ್ದಾನೋ ಹೇಗೆ?"

"ಅದಕ್ಕೇನು ಕಡಿಮೆ ಸ್ವಾಮಿ, ಈ ಪೇಟೆಯಲ್ಲಿ!'' ಎಂದು ಮಾಲಕ ಹೇಳಿ ಗಹಗಹಿಸಿ ನಕ್ಕ.

ಆ ವಿಚಿತ್ರ ನಗು ಅಲಗುಗಳಂತೆ ಆನಂದರಾಯನ ಹೃದಯವನ್ನೇ ಚುಚ್ಚಿದುವು. ಅವನು ಅಲ್ಲಿಂದೆದ್ದು ತನ್ನ ಗೆಳೆಯರ ಮನೆಗಳನ್ನು ಹುಡು ಕುತ್ತ ಹೋದ.

# ೮ ನೇಯ ಅಧ್ಯಾಯ

ನಾರಾಯಣ ಏಟುಗಳನ್ನು ತಿಂದಾಗ ವಿರೋಧಿಸಲಿಲ್ಲ. ಏಕೆಂದರೆ ಡಾಕ್ಟರ್ ಹೊಡೆಯಬಹುದೆಂದು ಅವನು ನಿರೀಕ್ಷಿಸಿರಲಿಲ್ಲ. ನಾಲ್ಕು ಮಾತುಗಳನ್ನು ಗೊಣಗಬಹುದೆಂದು ಭಾವಿಸಿದ್ದ. ಆದರೆ ಅವನ ಎಣಿಕೆ ತಪ್ಪಾಯಿತು. ಮತ್ತು ಅದರಿಂದ ನಾರಾಯಣ ಮಂತ್ರಮುಗ್ಧನಂತೆ ಬೆಚ್ಚಿದ. ಏನೋ ವಿಚಾರ, ಎತ್ತಲೋ ದೃಷ್ಟಿಯಿಟ್ಟುಕೊಂಡು ನಡೆದಾಗ ಫಕ್ಕನೇ ಇದಿರಲ್ಲಿ ಹೆಡೆ ಅರಳಿಸಿದ ಹಾವನ್ನು ಕಂಡಂತವನಾದ. ಅವನ ದೇಹದ ಶಕ್ತಿಯೆಲ್ಲ ಕಾಲಿನ ಮೂಲಕ ಭೂಮಿಯೊಳಗೆ ಇಳಿದು ಹೋಯಿತೇ ಹೇಗೆ? ಹಾಗೆ ಕಾಲುಗಳು ನಡುಗಿದುವು. ನಾಲಿಗೆ ಕೂಡಾ ಉಡುಗಿತು. ಆದುದರಿಂದ ಹಾವಿನ ದವಡೆಯೊಳಗೆ ಸಿಕ್ಕ ಇಲಿಮರಿಯಂತಾದ ಮತ್ತು ಪೆಟ್ಟುಗಳನ್ನು ತಿಂದ. ಆನಂದರಾಯ ಅವನನ್ನು ಒಳಗೆ ಎಳೆದೊಯ್ದು ಹೊಡೆದರೂ ಅಷ್ಟೆ; ಬಡೆದರೂ ಅಷ್ಟೆ; ಅವನು ನಿರ್ಜೀವಿಯಂತಿದ್ದ. ಆವೆ ತನ್ನ ಕೈ ಕಾಲುಗಳನ್ನು ಚಿಪ್ಪಿನೊಳಗೆ ಎಳೆದುಕೊಂಡಂತೆ ಅವನ ಕೈ ಮೈ ಗಳಲ್ಲಿ ಹರಿಯುತಿದ್ದ ಚೈತನ್ಯವನ್ನು ಜೀವ ಒಳಗೆ ಎಳೆದುಕೊಂಡಿತೇ ಹೇಗೆ?

ಆನಂದರಾಯ ಹೊರಟು ಹೋದ ಮೇಲೆ ಪುನಃ ಅವನ ದೇಹದಲ್ಲಿ ಜೀವ ಸಂಚಾರವಾದಂತಾಯಿತು. ಆಗ ಮೈಯಲ್ಲೆಲ್ಲ ನೋವನ್ನು ಅನುಭವಿಸಿದ. ತೊಡೆ, ಬೆನ್ನು ಭುಜಗಳಲ್ಲೂ ಮುಳ್ಳು ಮುರಿದಂತೆ ಸಿಡಿತ. ಮೈಯ ನೋವು, ಮನಸ್ಸಿನ ಸಂವೇದನೆಯನ್ನು ಅಗ್ನಿಯಂತೆ ಪ್ರಜ್ವಲಿಸಿತು. ಹಸಿ ಕಟ್ಟಿಗೆ ಸುಟ್ಟಾಗ ಇಳಿವ ರಸದಂತೆ ಅವನ ಕಣ್ಣುಗಳಿಂದ ಕಂಬನಿ ಇಳಿಯತೊಡಗಿತು. ನಾರಾಯಣ ಬಿಕ್ಕಿ ಬಿಕ್ಕಿ ಅಳತೊಡಗಿದ. ತನ್ನ ಅವಸ್ಥೆಯನ್ನು ನೆನಸಿಕೊಂಡಂತೆ ಅವನ ದುಃಖ ಹೆಚ್ಚಾಯಿತು.

ಅವನ ತಾಯಿ ಎಷ್ಟು ಪ್ರೇಮ, ವಾತ್ಸಲ್ಯದಿಂದ ಅವನನ್ನು ಬೆಳೆಸಿದ್ದಳು! ಮನೆಯಲ್ಲಿ ಬೇರೆ ಹುಡುಗರೂ ಇರಲಿಲ್ಲ. ಆದುದರಿಂದ ಯಾವಾಗಲೂ ಚಂದ್ರಾವತಿಯ ತೋಳು, ತೊಡೆಯಲ್ಲೇ ಅವನು ಬೆಳೆದ. ಅಕ್ಕಂದಿರಿಗೂ ಅವನ ಮೇಲೆ ಅಕ್ಕರೆ. ಅವನು ಬಹಳ ಸುಂದರ. ಹೆಣ್ಣಿಗೆ ಹೆಣ್ಣಿನ ರೂಪು. ಹೆಣ್ಣಿನಂತೆ ಅವನ ಕಾಲಿಗೂ ಸಣ್ಣವನಿದ್ದಾಗ ಕಿರುಗೆಜ್ಜೆ ಕಟ್ಟಿ

ದ್ದರು. ಅವನು ಗಿಲಿಗಿಲಿ ಸಪ್ಪಳ ಮಾಡುತ್ತ ನಡೆದು ಬರುತಿದ್ದಾಗ "ನಮ್ಮ ಉಡುಪಿಯ ಮುದ್ದು ಕೃಷ್ಣ!" ಎಂದು ಚಂದ್ರಾವತಿ ಬರ ಸೆಳೆದುಕೊಂಡು ತಬ್ಬಿಕೊಳ್ಳುತ್ತಿದ್ದಳು. ಸೊಂಟಕ್ಕೆ ಬಂಗಾರದ ಉಡುದಾರ ಮಾಡಿಸಿ ಹಾಕಿದ್ದಳು. ಕಿವಿಗೆ ಹರಳಿನ ಒಂಟೆ. ಯಾರಾದರೂ ಅಪಹರಿಸ್ಯಾರು, ಯಾರ ದೃಷ್ಟಿಯಾದರೂ ಮಗುವಿನ ಮೇಲೆ ಬಿದ್ದೀತೆಂದು ಅವನನ್ನು ಬೇರೆ ಮನೆಗೂ ಬಿಡುತಿದ್ದಿಲ್ಲ. ಪ್ರತಿ ಆದಿತ್ಯವಾರ ಚಂದ್ರಾವತಿ ಅವನ ತಲೆ, ಕೈ, ಮೈಗಳಿಗೆ ತೆಂಗಿನೆಣ್ಣೆ ಪೂಸಿ, ಅಭ್ಯಂಗನ ಸ್ನಾನವನ್ನೂ ಮಾಡಿಸುತಿದ್ದಳು. ಅವನು ಶಾಲೆಗೆ ತೆರಳಲು ಆರಂಭಿಸಿದ ಮೇಲೆ ಸ್ವತಃ ಅವಳು ಆ ರೀತಿ ಮಾಡುತಿದ್ದಿಲ್ಲ. ಆದರೆ ಎಣ್ಣೆಯ ಸಣ್ಣ ಭರಣಿ ತಂದು ಅವನ ಮುಂದಿಟ್ಟು ತಾನೇ ಕೈ ಮೈಗೆ ತಿಕ್ಕಿ ಕೊಳ್ಳುವಂತೆ ಪ್ರೇರೇಪಿಸುತಿದ್ದಳು. ಈ ರೀತಿಯ ಪಾಲನೆಯಿಂದ ಅವನ ಶರೀರವು ತೆಂಗಿನೆಣ್ಣೆಯ ಬಣ್ಣವನ್ನೇ ತಾಳಿದೆ. ಹಾಗೂ ಅದು ಬಹಳ ಸುಕುಮಾರವಾಗಿದೆ. ಅದಕ್ಕೆ ಸರಿಯಾದ ಊಟ, ಉಪಚಾರಗಳ ಪೋಷಣೆಯೂ ದೊರೆತಿತು. ಒಂದು ದಿನವೂ ಅದು ಹೊಡೆತ, ಬಡೆತಗಳನ್ನು ತಿಂದುದಿಲ್ಲ. ಎಲ್ಲೋ ಸಾಲೆಯಲ್ಲಿ ಉಪಾಧ್ಯಾಯರು ಆಗೊಮ್ಮೆ ಈಗೊಮ್ಮೆ ಬಾಯಿಲೆಕ್ಕ ತಪ್ಪಿದಾಗ ಸಿಟ್ಟಿನಿಂದ ಕಿವಿ ಹಿಂಡಿದುದುಂಟು. ತಲೆಗೆ ಒಂದೆರಡು "ಕುಟ್ಟಿ" ಏಟುಗಳೂ ಬಿದ್ದಿದ್ದುವು. ಹೊರತು ಬೆತ್ತದಿಂದಾಗಲೀ, ಸೌಟು, ಸೌದೆಗಳಿಂದಲೀ ಅವನು ಪೆಟ್ಟು ತಿಂದುದಿಲ್ಲ. ಎಳೆಯಲ್ಲೇ ಹೀಗಿದ್ದರೆ ಸ್ವಲ್ಪ ಬೆಳೆದ ಮೇಲೆ ಯಾರು ಹೊಡೆಯುವವರು ? ಕಾಲು ಬಂದ ಹುಡುಗರು ಯಾರ ಕೈಗೆ ಸಿಗುತ್ತಾರೆ ? ಶಾಲೆಯಲ್ಲೂ ಉಪಾಧ್ಯಾಯರು ಪ್ರಾಥಮಿಕ ದರ್ಜೆ ದಾಟಿದ ವಿದ್ಯಾರ್ಥಿಗಳ ಮೇಲೆ ಕೈ ಎತ್ತುವಂತಿಲ್ಲ. ಉಡುಪಿಯಲ್ಲೇ ಹಾಗಿದ್ದರೆ ಮಂಗಳೂರಲ್ಲಿ ಇನ್ನಷ್ಟು ಸ್ವಾತಂತ್ರ್ಯ ! ತನಗೊಬ್ಬಳಿಗೇ ಇರಲು ಬೇಸರವೆಂದು ವಾಸಂತಿ ಅವನನ್ನು ಮಂಗಳೂರಿಗೆ ಕರೆದುಕೊಂಡು ಹೋಗಿದ್ದಳು. ಆದರೆ ಶಾಲೆಗೆ ಕಳಿಸುವುದನ್ನು ನಿಲ್ಲಿಸಲಿಲ್ಲ. ವಾಸಂತಿಯ ಮುಂದೆ ಏನೇನೋ ಗಾಳಿ ಗುಳ್ಳೆಗಳನ್ನು ಊದಿ ಆನಂದರಾಯ ಅವನನ್ನು ಬೆಳ್ತಂಗಡಿಗೆ ಕರೆದುಕೊಂಡು ಬಂದ.

ಬೆಳ್ತಂಗಡಿಗೆ ನಾರಾಯಣ ಬಂದ ಬಳಿಕ ಅವನ ಜೀವನದಲ್ಲಿ ಮಹತ್ವದ ಬದಲಾವಣೆ ಪರಿಣಮಿಸಿತು. ಅವನು ಆನಂದರಾಯನ ಆಳುಮಗನಾದ.

"ಆನಂದ ಆಸ್ಪತ್ರೆ'ಯ ಚಾಕರನಾದ. ಬೆಳಿಗ್ಗೆ ಡಾಕ್ಟರನು ಏಳುವ ಮೊದಲೇ ಎದ್ದು ಕಿಟಕಿ ಬಾಗಿಲುಗಳನ್ನು ತೆರೆಯಬೇಕು; ಕಸಗುಡಿಸಬೇಕು; ಕುರ್ಚಿ ಮೇಜು,ಕಿಟಕಿ, ಕಪಾಟುಗಳಲ್ಲಿದ್ದ ದೂಳನ್ನು ಒರಸ ಬೇಕು. ಅಂಗಳ ಗುಡಿಸಿ, ಬಕೀಟನಲ್ಲಿ ನೀರು ತಂದು ನೆಲದ ಮೇಲೆ ಚಿಮುಕಿಸಿದ. ಆನಂದರಾಯ ಎದ್ದು ಬಂದಾಗ "ಟವೆಲ್, ಟೂಥ್ ಪೇಸ್ಟ್" ತಂದು ಕೊಟ್ಟ. ಮೋರೆ ತೊಳೆಯಲು ಬಾಲ್ದಿಯಲ್ಲಿ ನೀರು ತುಂಬಿಸಿಟ್ಟ. ಹೋಟೇಲಿಗೆ ಹೋಗಿ ಕಾಫಿಗೆ ಹೇಳಿ ಬಂದ. ಮಧ್ಯಾಹ್ನ 'ಟಿಫಿನ್ ಕ್ಯಾರಿಯರ್'ನಲ್ಲಿ ಊಟವನ್ನು ಅವನೇ ಹೊತ್ತು ತರಬೇಕಾಗಿ ಬಂದಿತು. ಮತ್ತೆ ಸಾಯಂಕಾಲದ ಕಾಫಿ ಮತ್ತು ರಾತ್ರಿಯ ಊಟದ ಹೊತ್ತಿಗೂ ಅಷ್ಟೆ ! ಇದರ ಮಧ್ಯೆ ಮಧ್ಯೆ ಆಸ್ಪತ್ರೆಗೆ ಬಂದು ಹೋದವರಿಗೆ ಚಹಾ ತರಲು ಆನಂದರಾಯ ಓಡಿಸಿದರೂ ಓಡಿಸಿದನೇ ! ಮತ್ತೆ ರಾತ್ರಿ ಅವನಿಗೆ ಹಾಸಿಗೆಯನ್ನು ಹಾಸಿಕೊಡುವುದೂ ಅವನ ಕೆಲಸ. ಇಷ್ಟೆಲ್ಲ ಕೆಲಸ ಮಾಡಿಯೂ ಅವನು ಬೆಳ್ತಂಗಡಿ ಶಾಲೆಗೆ ತೆರಳಿದ.

ನಾರಾಯಣ ಎಂಟನೇ ದರ್ಜೆ (ಥರ್ಡ್ ಫಾರಂ) ಯ ವರೆಗೆ ಅಭ್ಯಾಸ ಮಾಡಿದ. ಆ ಪರೀಕ್ಷೆಯಲ್ಲಿಯೂ ತೇರ್ಗಡೆ ಹೊಂದಿದ. ಅದರ ಮೇಲೆ ಆ ಶಾಲೆಯಲ್ಲಿ ತರಗತಿಗಳಿಲ್ಲ. ಪುತ್ತೂರು ಅಥವಾ ಮಂಗಳೂರಿಗೇ ತೆರಳಿ ಹೈಸ್ಕೂಲಿಗೆ ಸೇರಿಕೊಳ್ಳಬೇಕಾಗಿತ್ತು. ಅಕ್ಕ ವಾಸಂತಿಯ ಬಿಡಾರವಂತೂ ಮಂಗಳೂರಲ್ಲೇ ಇದೆ. ಊಟಕ್ಕಂತೂ ಒಂದು ಕೋಡಿ ಸಿಕ್ಕಿತು. ಶಾಲಾ ಫೀ ಗೆ ಮೂವರು ಅಕ್ಕಂದಿರೂ ಅಲ್ಪಸ್ವಲ್ಪ ಕೊಟ್ಟರೆ ಸುಸೂತ್ರ ಸಾಗುತ್ತದೆ. ಆದುದರಿಂದ ಮುಂದೆ ಕಲಿವ ಅತ್ಯಾಸೆ ಅವನೆದೆಯಲ್ಲಿ ಬೆಳಗಿತು. ಮತ್ತು ಅವನು ಅಕ್ಕಂದಿರಿಗೂ ಹಾಗೆಯೇ ಪತ್ರ ಬರೆದ. ಆನಂದರಾಯನಿಗೂ ಅದನ್ನೇ ತಿಳಿಸಿದ.

ಆದರೆ ಆನಂದರಾಯ ಆ ಚಿಗುರಿದ ಆಸೆಗೆ ಬಿಸಿನೀರೆರೆದ. ಗದರಿಸಿ ಬೆದರಿಸಿದರೆ ತನ್ನ ಉದ್ದೇಶ ಫಲಿಸದೆಂದರಿತು ಗಿಲೀಟು ಹಚ್ಚಿದ. "ಹೈಸ್ಕೂಲಿಗೆ ಹೋಗುತ್ತೇನೆಂದು ಹೇಳುತಿದ್ದೀಯಲ್ಲ ! ಎಂತಹ ಹುಡುಗಾಟಿಕೆ! ವಿಚಾರಮಾಡು. ಅಕ್ಕ, ಭಾವಂದಿರೆಲ್ಲ ಕೊನೆಯ ವರೆಗೆ ನಿನಗೆ ಹಣ ಕೊಡುತ್ತಾರೆಂತ ಭಾವಿಸಿದೆಯೇನು ? ನೀನೀಗ ಇಲ್ಲಿಗೆ ಬಂದು ಮೂರು

ನಾಲ್ಕು ವರುಷಗಳಾದುವು. ನಿನಗೆ ಎಷ್ಟು ಕೊಟ್ಟರು ? ವರುಷಕ್ಕೊಂದು ಅಂಗಿ, ಧೋತರವನ್ನಾದರೂ ಕೊಟ್ಟರೇನು ? ಎಲ್ಲ ದೂರತೋ ಪರ್ವತೋ ರಮ್ಯ, ಅಷ್ಟೆ ! ಏನೋ, ನೀನು ಬಹಳ ಕಾಡಿಸಿದರೆ ಈಗ ಅಲ್ಪಸ್ವಲ್ಪ ಕೊಟ್ಟಾರು. ಇಲ್ಲವೆನಲಾರೆ. ಆದರೆ ಅವರಿಗೂ ಅವರವರ ಸಂಸಾರ ಇದ್ದೇ ಇದೆ. ಈಗಿನ ಕಾಲಕ್ಕೆ ತಾನು, ತನ್ನದನ್ನು ಸುಸರಾಗವಾಗಿ ನಡೆಸಿಕೊಂಡು ಹೋಗುವುದೇ ಪ್ರತಿಯೊಬ್ಬರಿಗೂ ಕಠಿನವಾದ ವಿಷಯ. ಹಾಗಿರುವಾಗ ಕೊನೆಯ ವರೆಗೂ ನಿನಗೆ ಕೊಡುವ ಕಾಮಧೇನು ಯಾವುದು ? ಹೈಸ್ಕೂಲು ಸೇರಿದರೆ ಕೊನೆಯ ವರೆಗೂ ಕಲಿಯ ಬೇಕು. ಒಂದು ಅಥವಾ ಎರಡು ವರುಷ ಕಲಿತು ಬಿಟ್ಟರೆ, ಅದು ನೀರಿನಲ್ಲಿಟ್ಟ ಹೋಮದಂತೆಯೇ ಸರಿ. ಕಲಿತೂ ಮಾಡುವದೇನು ? ಇಂಗ್ಲೀಷ್ ಕಲಿತವರ ಹಣೆಬರಹ ದಿನ ಬೆಳಗಾದರೆ ನೋಡುತ್ತೀಯಲ್ಲ ! ಒಂದು ಗುಮಾಸ್ತನ ಕೆಲಸಕ್ಕೆ ಬಿ. ಎ, ಎಂ. ಎ, ಪರೀಕ್ಷೆ ಪಾಸಾದವರು ಹಾತೊರೆಯುತ್ತಾರೆ. ಎಷ್ಟು ಅಲ್ಪ ಸಂಬಳ ಕೊಟ್ಟರೂ ಅದನ್ನು ಸ್ವೀಕರಿಸಲು ಅವರು ಸಿದ್ಧ. ಹಾಗಿರುವಾಗ ನೀನು ಬರೇ ಹೈಸ್ಕೂಲು ಮುಗಿಸಿದರೆ ಏನು ಮಹಾ ? ಸುಮ್ಮನೆ ಹುಚ್ಚು ಕಟ್ಟಬೇಡ. ನಾನು ಹೇಳಿದ ಹಾಗೆ ಕೇಳು. ಇಲ್ಲೇ ಇದ್ದು 'ಕಂಪೌಂಡರ್' ಕೆಲಸ ಮಾಡು. ಈಗಾಗಲೇ ನಿನಗೆ ಅಲ್ಪಸ್ವಲ್ಪ ಮಾಹಿತಿ ಗೊತ್ತಾಗಿದೆ. ಇನ್ನೂ ಸ್ವಲ್ಪ ಕಲಿ. ಕಂಪೌಂಡರ್ ಪರೀಕ್ಷೆಗೆ ಕೂತುಕೋ. ಪಾಸಾಗು. ಕೆಲವು ವರುಷಗಳ ವರೆಗೆ ಮತ್ತೆ ಕಂಪೌಂಡರ್ ಕೆಲಸ ಮಾಡು. ಆಗ ನಿನಗೆ ಬಹಳ ಅನುಭವ ಲಭಿಸುತ್ತದೆ. ರೋಗವಿಧಾನ, ರೋಗಲಕ್ಷಣ, ರೋಗಚಿಕಿತ್ಸೆ ರೋಗ ಪರಿಹಾರ ಔಷಧಗಳ ಪರಿಜ್ಞಾನವಾಗುತ್ತದೆ. ಆ ಮೇಲೆ ನೀನು ಡಾಕ್ಟರ್ ಪರೀಕ್ಷೆಗೆ ಕೂಡ ಹಣ ಕಟ್ಟ ಬಹುದು. ಪಾಸಾದರೆ ಎಲ್ಲಾದರೂ ಒಂದು ಸಣ್ಣ ಆಸ್ಪತ್ರೆ ತೆರೆಯಬಹುದು. ಹಾಗೆ ನೀನು ಮಾಡಿದರೆ ಒಂದು ಸ್ವತಂತ್ರ ಉದ್ಯೋಗವನ್ನೂ ಮಾಡಿದಂತಾಗುತ್ತದೆ; ಮತ್ತು ಹಣ ಸಂಪಾದನೆಯೂ ಆಗುತ್ತದೆ."

ಆನಂದರಾಯನ ಈ ಮಂಕು ಬೂದಿಗೆ ನಾರಾಯಣ ಮರುಳಾದ. ಅವನ ಮಾತುಗಳೆಲ್ಲವೂ "ಹಿತೋಪದೇಶ"ದ ಅಮೃತವಾಣಿಯಂತೆ ಅವನಿಗೆ ಕೇಳಿಸಿತು. "ಹೌದು ! ಹೌದು !" ಎಂದವನು ತಲೆ ಅಲ್ಲಾಡಿಸಿದ. ಅವನು

ಆಡಿದ ಹಿತ ನುಡಿಗಳನ್ನು ಮೆಲುಕಾಡಿದ: "ಹೆ ! ನೌಕರಿಯಲ್ಲಿ ಏನಿದೆ ? ಯಸ್. ಯಸ್. ಎಲ್. ಸಿ ಕಲಿತವರಿಗೆ ಯಾವ ನೌಕರಿ ಸಿಗುತ್ತದೆ! ಎಷ್ಟು ಸಂಬಳ ಲಭಿಸುತ್ತದೆ ? ಸ್ವತಂತ್ರ ಉದ್ಯೋಗ, ಅದರಲ್ಲೂ ಈ ಡಾಕ್ಟರಿಕೆ ಎಲ್ಲಕ್ಕಿಂತಲೂ ಉತ್ತಮ. ಇದರಲ್ಲಿದ್ದ ಸಂಪಾದನೆ ಇನ್ನೊಂದರಲ್ಲಿಲ್ಲ" ಎಂದು ಯೋಚಿಸಿದ. ಹೈಸ್ಕೂಲಿಗೆ ತೆರಳುವ ಲವಲವಿಕೆ ಹೋಯಿತು. ಅದರ ಸ್ಥಾನದಲ್ಲಿ ಧನದಾಸೆ ಹೊಕ್ಕು, ಒಕ್ಕಲಾಯಿತು. ಆನಂದರಾಯನ ಸಂಗ ದೋಷ !

ಬೆಳ್ತಂಗಡಿಗೆ ಬಂದ ಆರಂಭದಲ್ಲಿ ನಾರಾಯಣನಿಗೆ ಸಂಬಳ ಇಂತಿಷ್ಟು ಎಂದು ಡಾಕ್ಟರ್ ನಿಯಮಿಸಿರಲಿಲ್ಲ. ಊಟ, ಕಾಫಿ, ವಸತಿ, ಬಟ್ಟೆ ಬರೆಗಳೆಲ್ಲವುಗಳಿಗೆ ಅವನೇ ಏರ್ಪಾಡು ಮಾಡಿದ್ದ. ಶಾಲಾಫೀಯನ್ನು ಕೊಟ್ಟ. ಆಗೊಮ್ಮೆ ಈಗೊಮ್ಮೆ ಕ್ಷೌರಕ್ಕೆ ಚಿಲ್ಲರೆ ಕಾಸು ತೆತ್ತ. ನಾರಾಯಣನು ಸಣ್ಣವನಿದ್ದುದರಿಂದ ಆ ರೀತಿಯಾಗಿ ನಡೆಸಿಕೊಂಡು ಬಂದುದೂ ಒಂದು ಚಂದವೇ. ಹೀಗಾಗಿ ಅವನ ಕೈಯಲ್ಲಿ ಪುಡಿಕಾಸೂ ಇರುತ್ತಿದ್ದಿಲ್ಲ. ಆದರೆ ಅವನು ಶಾಲೆಯ ಬಿಡುವಿನ ವೇಳೆ ಕಂಪೌಂಡರ್ ಕೆಲಸ ಮಾಡಲು ತೊಡಗಿದಾಗ ಹಣ ಕೈಗೆ ಬಂತು. ಪೇಟೆಯಲ್ಲಿ ಬಾಕಿ ವಸೂಲಿಗೂ ಅವನು ತೆರಳಿದಾಗ ಅವನ ಕಿಸೆಯಲ್ಲಿ ಹಣ ಝುಣ ಝುಣ ಸದ್ದು ಮಾಡಿತು. ಅವನು ಶಾಲೆಯನ್ನು ಬಿಟ್ಟು ಕಂಪೌಂಡರ್ ಕೆಲಸಕ್ಕೇ ನಿಂತ ಮೇಲೆ ಹಣದ ವ್ಯವಹಾರ ಹೆಚ್ಚಾಯಿತು. ಆನಂದರಾಯ ಅವನಿಗೆ ಸಂಬಳವನ್ನೂ ಗೊತ್ತು ಪಡಿಸಿದ. ಅದಲ್ಲದೆ ಅವನಿಗೆ ತಿಳಿಯದಂತೆ ಆಗಾಗ ಗಿಂಬಳವೂ ನಾರಾಯಣನ ಕೈಗೆ ಬರುತ್ತಿತ್ತು. ಮಂಗಳೂರಿನ ಕಾಮತರ ಅಂಗಡಿಯಿಂದ ಔಷಧಗಳನ್ನು ತರಲು ಡಾಕ್ಟರ್ ಅವನನ್ನು ಕಳಿಸಿದಾಗಲೂ ನಾರಾಯಣನಿಗೆ ಅಲ್ಪ ಸ್ವಲ್ಪ ಹಣ ಸಿಗುತಿತ್ತು. ಕಮಿಶನ್ ಹೆಚ್ಚಾಗಿ ದೊರೆತ ಬೇರೆ ಅಂಗಡಿಯಿಂದ ಅವುಗಳನ್ನು ಕೊಂಡು ತರುತ್ತಿದ್ದ. ಮತ್ತು ಆ ಕಮಿಶನ್ ಹಣ ಅವನ ಕಿಸೆಗೇ ಸೇರುತ್ತಿತ್ತು. ಕೆಮಿಸ್ಟ್ ಕಾಮತರ ಅಂಗಡಿಯಲ್ಲಿ ಆನಂದರಾಯನ ಲೆಕ್ಕವಿತ್ತು. ಅವರ ಹಿಂದಿನ ಬಾಕಿ ಪೈಕಿ ನೂರು ರೂಪಾಯಿಗಳನ್ನು ಕೊಟ್ಟಿದ್ದರೆ, ನಾರಾಯಣ ಎಪ್ಪತ್ತೈದು ರೂಪಾಯಿಗಳನ್ನು ಮಾತ್ರ ತೆತ್ತ. ಹೊಸ ಹೊಸ ಔಷಧ, ಇಂಜೆಕ್ಷನ್ ಟ್ಯೂಬ್‌ಗಳನ್ನು ತಂದಾಗ ಡಾಕ್ಟರ್ ಹೇಳಿದು

ದಕ್ಕಿಂತ ಸ್ವಲ್ಪ ಹೆಚ್ಚಾಗಿಯೇ ತಂದ. ಆ ಹೆಚ್ಚಿನ ಔಷಧ, ಇಂಜೆಕ್ಷನ್‌ಗಳನ್ನು ಡಾಕ್ಟರನ ದೃಷ್ಟಿಗೆ ಬೀಳದಂತೆ ಬೇರೆ ಕಡೆ ಇರಿಸಿದ. ಡಾಕ್ಟರ್ ಹಳ್ಳಿಪಳ್ಳಿಗಳಿಗೆ 'ವಿಸಿಟ್' ಕೊಟ್ಟಾಗ ಪರವೂರಿನ ಅಥವಾ ಗಟ್ಟಕ್ಕೆ ತೆರಳುವ ಕೂಲಿಯಾಳುಗಳು ಅಥವಾ ಇನ್ನಿತರ ರೋಗಿಗಳು ಬಂದರೆ ನಾರಾಯಣ ಅವರಿಗೆ ಔಷಧವಿತ್ತ; ಇಂಜೆಕ್ಷನ್ ಕೊಡುತಿದ್ದುದೂ ಉಂಟು. ಆ ನಗದಿ ಹಣ ಅವನ ಕೈ ಸೇರುತ್ತಿತ್ತು. ಒಂದು ವೇಳೆ ಅವನು 'ರಜಿಸ್ಟರ್'ನಲ್ಲಿ ಬರೆದರೂ ಮೂವರ ಬದಲು ಒಬ್ಬಿಬ್ಬರ ಹೆಸರನ್ನು ಕಾಣಿಸುತ್ತಿದ್ದ. ದೂರದವರು ಬಂದು ಬಾಕಿ ಹಣ ಒಪ್ಪಿಸಿದಾಗಲೂ ಇಪ್ಪತ್ತೈದು ತೆಗೆದು ಕೊಂಡು ಇಪ್ಪತ್ತು ಎಂದು ಬರೆದುಕೊಂಡ. ಒಮ್ಮೊಮ್ಮೆ ಬರೆಯುತಿದ್ದುದೂ ಇಲ್ಲ. ಈರೀತಿ ನಾರಾಯಣ ಕ್ರಮೇಣ ತಾನೂ ಹಣ ಸಂಗ್ರಹಿಸುತ್ತ ಬಂದ.

ನಾರಾಯಣನ ಈ ಕೀಟಲೆಯನ್ನು ಡಾಕ್ಟರ್ ಅರಿಯದವನಲ್ಲ. ರೋಗಿಗಳನ್ನು ಭೆಟ್ಟಿಯಾದಾಗ ಅವನು "ನಿಮ್ಮ ಬಾಕಿ ಹಣ ಬರಲಿಲ್ಲಲ್ಲ, ಸ್ವಾಮಿ?" ಎಂದು ಕೇಳುತಿದ್ದ.

"ಹೆಂ, ಏನುಹೇಳುತ್ತೀರಿ ಸ್ವಾಮಿ! ಮೊನ್ನೆ ನಾನು ಆಸ್ಪತ್ರೆಗೆ ಹೋದಾಗ ಕಂಪೌಂಡರನ ಕೈಯಲ್ಲಿ ಹತ್ತು ರೂಪಾಯಿ ಕೊಟ್ಟು ಬಂದೆ".

"ಇಲ್ಲ ಸ್ವಾಮಿ!"

"ಏನು ರಾಯರೇ, ಹೀಗಂದರೆ? ಸ್ವತಃ ನಾನೇ ಹೋಗಿ ಕೊಟ್ಟು ಬಂದಿರುತ್ತೇನೆ. ನನಗೆ ಅಷ್ಟೂ ನೆನಪಿಲ್ಲ ಎಂದನ್ನುತ್ತೀರಾ? ಇಷ್ಟಕ್ಕೆ ಸುಳ್ಳು ಹೇಳುತ್ತೇನೆಂತ ಭಾವಿಸಿದಿರಾ? ಅದೇನು ದೊಡ್ಡ ಕಿಸು ಭಾಗ್ಯ ಹೇಳಿ! ಅದರಿಂದ ಆದೀತೇನು, ಹೋದೀತೇನು? ನಿಮ್ಮ ಕಂಪೌಂಡರನ ಹತ್ತಿರ ಇನ್ನೊಮ್ಮೆ ಕೇಳಿ ನೋಡಿ".

"ಎಂತಹ ಬದ್ಮಾಷ್ ಇದ್ದಾನರೀ ಅವನು!" ಎಂದು ಆನಂದರಾಯರ ಇದಿರು ಅವನನ್ನು ಅಷ್ಟು ಬೈದು ಬರುತಿದ್ದ. ಆಸ್ಪತ್ರೆಗೆ ಬಂದು ನಾರಾಯಣನ ಮೇಲೆ ಸಹಸ್ರ ನಾಮಗಳನ್ನು ಸುರಿಸುತಿದ್ದ. ಆಗ ನಾರಾಯಣ ಗುಮ್ಮನ ಹಾಗೆ ಒಳಗೆ ಕುಳಿತು ಬಿಡುತಿದ್ದ. ಒಂದು ಮಾತನ್ನೂ ಇದಿರಾಡುತಿದ್ದಿಲ್ಲ. ಡಾಕ್ಟರನು ಅಸಹನೀಯವಾಗಿ ರೇಗಾಡಿದಾಗ "ಕೊಟ್ಟದ್ದು ಹೌದು. ನಾನು ಮರೆತಿದ್ದೆ. ಅದು ಎಲ್ಲಿ ಹೋಗ್ತುತ್ತವೆ? ನನ

ಗೇಕೆ ನಿಮ್ಮ ಹಣ? ನನಗೆ ಹೆಂಡತಿ ಮಕ್ಕಳಿದ್ದಾರೇನು?" ಎಂದನ್ನುತಿದ್ದ. ಡಾಕ್ಟರನ ಗೊಣಗಾಟ ಅಲ್ಲೇ ನಿಲ್ಲುತಿತ್ತು. ಅದಕ್ಕಿಂತ ಹೆಚ್ಚು ಹೇಳಲು ಅವನಿಗೇ ಹೆದರಿಕೆ. ಹೇಳಿದರೆ ನಾರಾಯಣನಿಗೆ ಸಿಟ್ಟು ಬರಬಹುದೆಂಬ ಭಯ. ಸಿಟ್ಟನಿಂದ ಅವನು ಕೆಲಸ ಬಿಟ್ಟು ಹೋದಾನೆಂಬ ಅಂಜಿಕೆಯಲ್ಲ. ಸಿಟ್ಟನಿಂದ ತನ್ನ ಒಳಗುಟ್ಟನ್ನು ಬಯಲಿಗೆಳೆದಾನೆಂಬ ಭೀತಿ. ಎಲ್ಲಿ ವಾಸಂತಿಯ ವಿಷಯ ಹೇಳುತ್ತಾನೋ, ಅವಳ ಹೆಸರು ಹೇಳದೆ ಕೇವಲ ತನ್ನ ದುಶ್ಚಟಗಳನ್ನು ವರ್ಣಿಸುತ್ತಾನೋ, ನಾಲ್ಕು ಜನರ ಮುಂದೆ ಎಲ್ಲಿ ತನ್ನ ಮಾನ ಮರ್ಯಾದೆ ತೆಗೆಯುತ್ತಾನೋ ಎಂದು ಅವನ ಸಂದೇಹ! ಆದುದರಿಂದ ಅವನು ಜಗಳವನ್ನು ದೀರ್ಘವಾಗಿ ಎಳೆದು ಬೆಳೆಸುತಿದ್ದಿಲ್ಲ. ಮೂರು ಕಾಸು, ಆರು ಕಾಸು ತಿಂದಾಗ "ತಿನಲಿ" ಎಂದು ಅಲಕ್ಷಿಸಿದ. ವಾಸಂತಿಗೆ ತಿಳಿಸಿ ಅವಳ ಮೂಲಕ ಬುದ್ಧಿ ಹೇಳಿಸಿದ. ಯಾವಾಗಲಾದರೊಮ್ಮೆ ಅವನು ದೊಡ್ಡ ತುತ್ತು ನುಂಗಿದಾಗ ಮಾತ್ರ ಆನಂದರಾಯ ಸಹನೆಗೆಟ್ಟ. ಆದರೆ ಅಂತಹ ಸಂದರ್ಭದಲ್ಲೂ ಮತ್ತೆ ಸಂಜೆ ಕೋಪತಾಪಗಳು ಇಳಿದಾಗ ಅವನನ್ನು ಕರೆದು "ನನಗೊಂದು ಮುಂಗೋಪ ಇದೆ, ನೋಡು! ಅದರಿಂದ ಫಕ್ಕನೇ ನಿನಗೆ ಬೈದೆ. ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ! ನಾಲ್ಕು ರೂಪಾಯಿ ತಿಂದರೆ ಏನಾಯಿತು? ಪರಬಾರಿ ಜನರು ಯಾರೂ ತಿನಲಿಲ್ಲವಲ್ಲ! ಅಥವಾ ಅದರಿಂದ ನನ್ನ ಇದ್ದ ಸಿರಿ ಸಂಪತ್ತೂ ಕರಗಿ ಹೋಗುವುದಿಲ್ಲ" ಎಂದು ಸಮಧಾಯಿಸಿದ. ಅವನವೋರೆ ನೋಡಿ, ಈ ಹಿತನುಡಿ ಕೇಳಿ. ಅಥವಾ ವಾಸಂತಿಯನ್ನು ನೆನಸಿ ಅವನು ಸಮಾಧಾನ ಹೊಂದುತಿದ್ದನೆಂದರೆ ಸರಿಯಲ್ಲ. ಹಣ ಸಂಪಾದನೆಯ ದಾರಿ ನೋಡಿ ಎಲ್ಲವನ್ನೂ ಮರೆತಂತೆ ನಟಿಸಿದ. ಅಲ್ಲದೆ, ಕಂಪೌಂಡರ್ ಪರೀಕ್ಷೆ ಕಟ್ಟಿ ಪಾಸಾಗುವ, ಡಾಕ್ಟರನಾಗುವ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ಸಿಟ್ಟನ್ನು ನುಂಗಿ ಕೊಂಡ.

ಆದರೆ ಇಷ್ಟು ವರುಷಗಳು ಉರುಳಿದರೂ ಆ ಪರೀಕ್ಷೆಯ ಮಾತನ್ನೇ ಆನಂದರಾಯ ಎತ್ತಲಿಲ್ಲ. ಅವನ ವಿನೋದ ಲಹರಿ ನೋಡಿ ನಾರಾಯಣ ಪ್ರಸ್ತಾಪಿಸಿದಾಗಲೂ "ಇನ್ನೂ ಒಂದೆರಡು ವರುಷಗಳಾಗಲಿ! ಏನಿಷ್ಟು ಅವಸರ?" ಎಂದು ಹೇಳಿ ಹಾರಿಸಿಕೊಂಡ. ಕೊನೆಗೆ "ಪರೀಕ್ಷೆಗೆ ಕುಳಿತು

ಏನು ಮಾಡುತ್ತೀ? ಬೇರೆ ಎಲ್ಲಾದರೂ ನೌಕರಿ ಮಾಡಬೇಕೆಂದು ಆಸೆ ಇದೆಯೇನು ನಿನಗೆ? ಹಾಗಿದ್ದರೆ ಈಗಲೇ ಹೋಗಿಬಿಡು'' ಎಂದು ಒಮ್ಮೆ ಅವನು ಗುಡುಗಿದುದೂ ಉಂಟು. ಪುತ್ತೂರಿನಲ್ಲೋ, ಉಪ್ಪಿನಂಗಡಿಯಲ್ಲೋ ದಾಯಿ ಮತ್ತು ಕಂಪೌಂಡರ್ ಪರೀಕ್ಷೆಗಳೆರಡಲ್ಲೂ ಪಾಸಾದ ದಾಯಿಯೊಬ್ಬಳು ಇರುವಳೆಂದು ಅರಿತು ಅವನು ವಿಚಾರಿಸಿದುದೂ ಇದೆ. ಅದರಿಂದ ನಾರಾಯಣನಿಗೆ ಬೇಸರ ಬಂತು. ದಿನೇ ದಿನೇ ಜಿಗುಪ್ಸೆ ಹೆಚ್ಚಾಯಿತು. ಆನಂದರಾಯ ಲಗ್ನವಾದ ಮೇಲಂತೂ ಅವನ ಮನಸ್ಸು ಸಂಪೂರ್ಣ ಮುರಿದು ಹೋಯಿತು. ಮತ್ತು ಆದುದರಿಂದಲೇ ಅವನು ರಾತ್ರಿ ಮಂಗಳೂರಿಗೆ ತೆರಳಿ ವಾಸಂತಿಯೊಡನೆ ತನ್ನ ಹೃದಯವನ್ನು ತೋಡಿಕೊಂಡು ಬಂದ.

ಅದಕ್ಕೆ ತೊರೆತ ಫಲಪ್ರಾಪ್ತಿ ಇದು! ಆನಂದರಾಯ ಅವನ ಕುಲವನ್ನರುಹಿ ಆಡಿದ ನುಡಿಗಳು ಬಾಣಗಳಂತೆ ಅವನ ಹೃದಯವನ್ನೇ ಚುಚ್ಚಿದುವು. ಅವನು ಕೊಟ್ಟ ಹಿಂಸೆಯಿಂದ ಮೈಯೊಂದೇ ಅಲ್ಲ, ಮನಸ್ಸೂ ನೊಂದಿತು. ಅತ್ತು ಅತ್ತು ಬೇಸತ್ತಮೇಲೆ ನಾರಾಯಣ ಸ್ವಲ್ಪ ಹೊತ್ತು ಸುಮ್ಮನೇ ಮಲಗಿಕೊಂಡ. ಅವನ ಹೃದಯದಲ್ಲಿದ್ದ ಸ್ನೇಹ, ಪ್ರೀತಿಗಳ ತೊರೆ ಕಣ್ಣೀರಾಗಿ ಹರಿದು ಹೋಯಿತು. ಮತ್ತು ಅದು ಗಟ್ಟಿಯಾಯಿತು. ಕಲ್ಲಿನಂತೆ ಕಠೋರನಾದ ನಾರಾಯಣ, "ಇನ್ನು ಇಲ್ಲಿ ಇರಬಾರದು'' ಎಂದು ಭಾವಿಸಿದ. ಆನಂದರಾಯನ ಮೇಲೆ ಪ್ರತೀಕಾರ ತೆಗೆದು ಕೊಳ್ಳಬೇಕೆಂದೂ ಯೋಚಿಸಿದ. ಒಂದೊಂದೇ ವಿಚಾರದ ತೆರೆಗಳು ಅವನ ಮನಸ್ಸಿನಲ್ಲಿ ಬಿದ್ದೆದ್ದು ಹೊರಳಿದುವು. ಮಲಗಿದ್ದವನು ತಕ್ಷಣ ಎದ್ದು ಕುಳಿತುಕೊಂಡ. ಕಿಟಕಿ ಬಾಗಿಲು ತೆರೆದಿತ್ತು ಮತ್ತು ಅದರ ಮೂಲಕ ಕೋಣೆಯೊಳಗೆ ಬೆಳಕು ಇಣಿಕುತಿತ್ತು. ಹೊರಗೆ ಗಾಳಿಗೆ ಅಲುಗುವ ಮರದ ರೆಂಬೆಗಳೂ ಎಲೆಗಳೂ ಕಾಣಿಸಿದುವು. ಅಷ್ಟರಲ್ಲಿ ಎರಡು ಗುಬ್ಬಿಗಳು ಹಾರಿ ಬಂದು ಆ ಕಿಟಕಿಯ ಸರಳುಗಳಲ್ಲಿ ಕುಳಿತು ಕುಪ್ಪಳಿಸಿದುವು. ಅವುಗಳ "ಚಿಂ, ಚಿಂ" ಚಿಲಿಪಿಲಿ ಕೇಳಿ ನಾರಾಯಣನ ಗಂಟು ಮೋರೆ ಸಡಿಲಿಸಿತು. ಅವನು ಎದ್ದು ಕಿಟಕಿಯ ಬಳಿ ಹೋದ. ಅವು ರೆಕ್ಕೆ ಅಗಲಿಸಿ ಭುರ್ರೆಂದು ಹಾರಿ ಹೋದುವು. ನಾರಾಯಣ ಆ ಕಿಟಕಿಯ ಸರಳುಗಳನ್ನು ಹಿಡಿದು ನಿಂತು ಅವು ಹಾರಿದ

ದಿಕ್ಕಿನ ಕಡೆಗೇ ದಿಟ್ಟಿಸಿದ.

ನಾರಾಯಣ ಯೋಚಿಸಿದ: "ಆಹಾ! ಎಷ್ಟು ಸ್ವಾತಂತ್ರ್ಯ ಅವುಗಳಿಗೆ! ಬೆಳಗಾಗುವ ಮೊದಲೇ ಎದ್ದು ಮನ ಬಂದ ಕಡೆ ಹಾರುತ್ತಿವೆ. ಇಚ್ಛೆಯಾ ದಲ್ಲಿ ಇಳಿದು ಇರುತ್ತವೆ. ಸಿಕ್ಕ ಕಾಳು ಕಡಿ, ಹುಳ ಹುಪ್ಪಡಿಗಳನ್ನು ತಿಂದು ಬದುಕುತ್ತವೆ. ಹಾರುವುದೊಂದು ಸಂತಸವಾದರೆ ನೆಲದ ಮೇಲೆ ಕುಳಿತು ಕುಪ್ಪಳಿಸುವುದು ಇನ್ನೊಂದು ಸೊಗಸು. ಅವುಗಳ ದನಿಯಲ್ಲಿ ಸ್ವಾತಂತ್ರ್ಯದ ಸಂತೋಷ ತುಂಬಿದೆ. ಇಂದೇನೋ ಮುಂದೇನೋ ಎಂಬ ಚಿಂತೆಯು ಸಂತೆ ಯಿಲ್ಲ. ಮನೆ, ಮಠ, ನೌಕರಿ, ಹಣದ ವಿಚಾರವಿಲ್ಲ. ಪಶುಪಕ್ಷಿ ಎಂದು ತಾತ್ಸರಿಪ ನನ್ನಂತಹ ಮನುಷ್ಯ ಜೀವಿಗೇ ಅವುಗಳಷ್ಟು ಸ್ವಾತಂತ್ರ್ಯ, ಸಂತೋಷ, ನಿಶ್ಚಿಂತೆ, ನಿರ್ಲಿಪ್ತತೆ ಇಲ್ಲವಲ್ಲ!

ನಾರಾಯಣ ಪಂಜರದಲ್ಲಿದ್ದ ಹಕ್ಕಿಯಂತೆ ಶೋಕಿಸಿದ. ಈಗ ಹಾರಿ ಹೋದ ಗುಬ್ಬಿಗಳಂತೆ ಈ ಬಂಧನವನ್ನು ಮುರಿದು ತಾನೂ ಎಲ್ಲಾದರೂ ಹೋಗಬೇಕೆಂದು ಅವನು ಬಯಸಿದ. ಎಲ್ಲಿ, ಹೇಗೆ, ಯಾವಾಗ ಎಂಬ ವಿಚಾರಗಳು ಸುಳಿದುವು. ಅವುಗಳ ದ್ವಂದ್ವದಲ್ಲಿ ಮನಸ್ಸು ತಪ್ತವಾಯಿತು. ಪುನಃ ಒಳಗೆ ಬಂದು ಕುಳಿತು ಆಲೋಚಿಸಲಾರಂಭಿಸಿದ. ಕತ್ತಲೆಯಲ್ಲಿ ಬೆಳಕು ಕಂಡವನಂತೆ, ಸಂಶೋಧಕನ ಮುಂದೆ ರಹಸ್ಯ ಬಯಲಾದಂತೆ ಅತ್ಯಾತುರಿಗೆ ತನ್ನ ಕಾಮನೆಗಳು ಈಡೇರಿದಂತೆ ಏನೋ ಒಂದು ದಾರಿ ತೆರೆದುದರಿಂದ ನಾರಾಯಣ ನಕ್ಕ. ಅಲ್ಲೇ ಇದ್ದ ಒಂದು ತಂಬಿಗೆಯನ್ನು ನೋಡಿ ಬೊಗಸೆಗಳಿಗೆ ನೀರನ್ನು ಸ್ವಲ್ಪ ಸುರಿದು, ಕಣ್ಣು ಮೋರೆಗಳಿಗೆ ಪೂಸಿ ಒರಸಿಕೊಂಡ. ಅಷ್ಟರಲ್ಲಿ ಹೊರಗೆ ಯಾರೋ ಕೆಮ್ಮಿದುದು ಕೇಳಿ ಸಿತು. ನಾರಾಯಣ ಕೋಣೆಯ ಬಾಗಿಲು ತಟ್ಟಿ ಕರೆದ. ಅದನ್ನು ಕೇಳಿ ಹೊರಗೆ ಔಷಧಿಗಾಗಿ ಕುಳಿತಿದ್ದವರೊಬ್ಬರು ಬಂದು ಸರಪಳಿ ತೆಗೆದು "ಅರೆ! ಕಂಪೌಂಡರರು !'' ಎಂದು ಉದ್ಗರಿಸಿದರು !

"ಹಂ ! ಹಂ ! ಕಂಪೌಂಡರರು !'' ಎಂದು ಹೇಳಿ ಅವನು ನಕ್ಕ.

"ಒಳಗೆ ಪಂಜರದೊಳಗೆ ಸಿಕ್ಕಿ ಬಿದ್ದ ಹಾಗೆ ಆಯಿತಲ್ಲ, ಸ್ವಾಮಿ!''

"ಹೌದು. ನಮ್ಮ ಡಾಕ್ಟರರೆಂದರೆ ಏನೆಂದು ತಿಳಿದಿರಿ ನೀವು. ಎಲ್ಲೋ ಚಿತ್ತ, ಎಲ್ಲೋ ದೇಹ ! ನಾನು ಒಳಗೆ ಮಲಗಿದ್ದೆ. ಮಹಾರಾ

ಯರು ಮರೆತು ಸರಪಳಿ ಸಿಕ್ಕಿಸಿ ಹೊರಗೆ ಹೋದರೆಂದು ತೋರುತ್ತದೆ.”

“ಬೀಗ ಹಾಕಿ ಬೀಗದ ಕೈ ತೆಗೆದುಕೊಂಡು ಹೋಗಲಿಲ್ಲ ಮತ್ತೆ !’’

“ಹೂಂ, ಅದೇ ನನ್ನ ಪುಣ್ಯ!’’

“ಹೆ, ಹೆ, ಹೆ!” ಎಂದವರು ನಕ್ಕರು.

ನಾರಾಯಣ ಎಂದಿನಂತೆ ಕೆಲಸದಲ್ಲಿ ನಿರತನಾದ. ಹಳೇ ರೋಗಿಗಳು ಬಂದರು. ಅವರ ಚೀಟಿ ಹುಡುಕಿ, ಔಷಧಕೊಟ್ಟು ಕಳಿಸಿದ. ಹೊಸಬರನ್ನು ವಿಚಾರಿಸಿದ. ಸಾಮಾನ್ಯ ತಲೆನೋವು, ಮಲೇರಿಯಾ, ಶೀತವಾತ ನೆಗಡಿ ಕೆಮ್ಮು ದಮ್ಮು, ಅತಿಸಾರ ಅಜೀರ್ಣಗಳಿಗೆ ಅವನೇ ಮದ್ದು ಕೊಟ್ಟ. ಡಾಕ್ಟರನು ಊರಲ್ಲಿರುವಾಗ ಅದಕ್ಕಿಂತ ಕಠಿನ ರೋಗಗಳನ್ನು ಪರೀಕ್ಷಿಸುತಿದ್ದಿಲ್ಲ; ಇಂಜೆಕ್ಷನ್ ಕೊಡಲೂ ಮುಂದಾಗುತಿದ್ದಿಲ್ಲ. ಹೊರಗೆ ಹೋದ ಡಾಕ್ಟರ್ ಬರುವ ವರೆಗೂ ಆ ರೋಗಿಗಳು ಕುಳಿತುಕೊಳ್ಳುತಿದ್ದರು. ಈ ಹೊತ್ತು ಕೂಡಾ ಒಬ್ಬಿಬ್ಬರು ಡಾಕ್ಟರನ ದಾರಿ ನಿರೀಕ್ಷಿಸುತ್ತ ಕುಳಿತರು. ಸಾಧಾರಣ ಮಧ್ಯಾಹ್ನದ ಹೊತ್ತಿಗೆ ಅವನು ಬಂದ. ಒಬ್ಬಿಬ್ಬರ ನಾಡಿ ಹಿಡಿದು ನೋಡಿದ. ಚೀಟಿ ಬರೆದುಕೊಟ್ಟ. ಆ ಮೇಲೆ ಸ್ನಾನ ಭೋಜನಕ್ಕಾಗಿ ಹೋಟೇಲಿಗೆ ಹೊರಟು ಹೋದ. ಊಟ ಮಾಡಿ ಬಂದು ಆಸ್ಪತ್ರೆಯಲ್ಲಿ ಮಲಗಿದವನು ಸಾಯಂಕಾಲದ ವರೆಗೂ ನಿದ್ದೆ ಮಾಡಿದ. ಎದ್ದು ಕಾಫಿ ಕುಡಿದವನಿಗೆ ಇಸ್ಪೀಟು ಆಟದ ಗೆಳೆಯರ ನೆನಪೂ ಆಯಿತು. ರಾತ್ರಿ ಊಟ ಮಾಡಿದನೋ, ಬರೇ ಫಲಾಹಾರದಲ್ಲಿ ಮುಗಿಸಿದನೋ ಅವನಿಗೇ ಗೊತ್ತು. ಆಸ್ಪತ್ರೆಗೆ ಮರಳಿದುದಂತೂ ಮಧ್ಯರಾತ್ರಿಯ ಮೇಲೆಯೇ. ಹೀಗಾಗಿ ಇಡೀ ದಿನ ನಾರಾಯಣನ ಮುಖವನ್ನು ಅವನು ನೋಡಲಿಲ್ಲ; ಮಾತನಾಡಿಸಲೂ ಇಲ್ಲ. ಬೆಳಿಗ್ಗೆ ಮಾತ್ರ “ನಾನು ಒಂದೆರಡು ದಿನ ಬರುವುದಿಲ್ಲ. ಜಾಗ್ರತೆ !’’ ಎಂದು ಅವನಿಗೆ ಕೇಳಿಸುವ ಹಾಗೆ ನುಡಿದು ಸೈಕಲ್ ಹೊರಗೆ ಇಳಿಸಿದ. ನಾರಾಯಣ “ಹಾಂ, ಹೂಂ” ಏನೊಂದೂ ಹೇಳಲಿಲ್ಲ. ಆದರೆ ಆನಂದರಾಯನ ಮುಖ ಯಾವ ದಿಕ್ಕಿಗಿದೆಯೆಂದು ಬಾಗಿಲೆಡೆಯ ಮರೆಯಲ್ಲಿ ನಿಂತು ಅವನು ಹಣಕಿದ. ಅವನು ಬಂಗಾಡಿಯ ದಾರಿ ಹಿಡಿದನೆಂದು ನಾರಾಯಣನಿಗೆ ಖಚಿತವಾಯಿತು. ಹೆಣದ ಮೋರೆಯ ಮೇಲಿನ ವಿಲಕ್ಷಣ ನಗು ನಾರಾಯಣನ ಮುಖದಲ್ಲೂ ಮಿಂಚಿತು.

ನಾರಾಯಣ ತಕ್ಷಣ ಹೊರಳಿದ. ಮೇಜಿನ ಮೇಲಿದ್ದ ಕೀಲಿಸರವನ್ನು ಮತ್ತೊಬ್ಬನ ಕೈಯಿಂದ ಕಸಿದುಕೊಂಡಂತೆ ಸೆಳೆದು ತನ್ನ ಕಿಸೆಯೊಳಗೆ ಹಾಕಿಕೊಂಡ. ಒಳಗಿನ ಕೋಣೆಗೆ ತೆರಳಿ ಒಂದು ದೊಡ್ಡ ದೇವದಾರದ ಪೆಟ್ಟಿಗೆಯನ್ನು ಪರೀಕ್ಷಿಸಿದ. ಮಡಚಿಟ್ಟಿದ್ದ ಒಂದು ಗೋಣಿ ಚೀಲವೂ ಅವನ ದೃಷ್ಟಿಗೆ ಬಿತ್ತು. ಆಸ್ಪತ್ರೆಯ ಬಾಗಿಲು ತೆರೆದೇ ಇದೆಯೆಂದು ಫಕ್ಕನೇ ಅವನ ಸ್ಮರಣೆಗೆ ಬಂದಿತು. ಹೊರಗೋಡಿ ಬಂದು ಬಾಗಿಲು ಹಾಕಿಕೊಂಡ. ಆ ಮೇಲೆ ಒಂದೊಂದೇ ಕಪಾಟಿನ ಬೀಗವನ್ನು ತೆಗೆಯಲು ಅವನಿಗೇನೂ ಅಂಜಿಕೆಯಾಗಲಿಲ್ಲ. ಕಂಪೌಂಡರನ ಕೋಣೆಯಲ್ಲೂ ಬಾಟ್ಲಿಗಳ ದಣಬಣ ಸದ್ದಾಯಿತು. ಮಧ್ಯಾಹ್ನ ಊಟವಾದ ಮೇಲೆ ಆ ಉರಿಬಿಸಿಲಿನಲ್ಲೇ ಊರಲ್ಲಿ ಅಲೆದಾಡಿ ಅನೇಕರಿಂದ ಬಾಕಿ ವಸೂಲಿ ಮಾಡಿದ. ಆನಂದರಾಯನ ಮೇಜಿನ ಮೇಲಿನ ಟ್ರೆಜರಿಯಲ್ಲೂ ನೂರಾರು ರೂಪಾಯಿಗಳಿದ್ದುವು. ಕತ್ತಲಾದ ಮೇಲೆ ಅವನು ಅವಸರದಿಂದ ಕಾರ್ಯಾಸಕ್ತನಾದ. ಮಧ್ಯರಾತ್ರಿ ಅವನು ಮೊದಲೇ ಹೇಳಿಟ್ಟಿದ್ದ ಇಬ್ಬರು ಆಳುಗಳು ಬಂದರು. ನಾರಾಯಣ ಆಸ್ಪತ್ರೆಗೆ ಬೀಗವಿಕ್ಕಿ, ಕೀಲಿ ಸರವನ್ನು ಒಳಗೆ ಎಸೆದು ಮಂಗಳೂರಿನ ರಸ್ತೆ ಹಿಡಿದ. ಊರು ದಾಟಿದ ಮೇಲೆ ಆ ಹೊರೆಗಳನ್ನು ಇಳಿಸಿ "ಈಗ ಮಂಗಳೂರಿಗೆ ತೆರಳುವ ಲಾರಿಗಳು ಬರುತ್ತವೆ. ನಾನು ಅದನ್ನು ಹತ್ತಿ ಹೋಗುತ್ತೇನೆ. ನಮ್ಮ ತಾಯಿಗೆ ಜೋರು ಕಾಯಿಲೆ. ಸೋಮವಾರ ಬರುತ್ತೇನೆ ಡಾಕ್ಟರರು ಕೇಳಿದರೆ ಹೇಳಿ'' ಎಂದು ನುಡಿದು ಅವರಿಗೆ ಕೂಲಿ ಕೊಟ್ಟು ಕಳಿಸಿದ.

ಆದರೆ ಅವನು ಹೋದುದು ಮಂಗಳೂರಿಗಲ್ಲ, ಗಟ್ಟಕ್ಕೆ!

# ೯ ನೇಯ ಅಧ್ಯಾಯ

ಬಂಗಾಡಿಯ ದಾರಿ ಹಿಡಿದು ಆನಂದರಾಯ ಹೊರಟಿರುವನೇನೋ ನಿಜ. ಈ ಮೊದಲು ಕೂಡ ಅವನು ಅನೇಕ ಸಲ ಹೋದುದುಂಟು. ಆದರೆ ಏಕೋ ಏನೋ ಈ ಸಲ ಅವನ ಹೃದಯದಲ್ಲಿ ಆನಂದವಿಲ್ಲ. ಮೋರೆ ಕಂದಿದೆ. ಶಕ್ತಿಯೂ ಕುಂದಿದಂತೆ ಅವನಿಗೆ ಭಾಸವಾಗಿದೆ. ವಾಸಂತಿಯೊಡನೆ ಅತಿಯಾಗಿ ಭೋಗಿಸಿದುದರ ಪರಿಣಾಮ ಅವನ ಮೇಲಾಗಿದೆ. ಅಷ್ಟೇ ಅಲ್ಲ, ಕಳೆದ ರಾತ್ರಿ ಅವನು ಸರಿಯಾದ ನಿದ್ದೆಯನ್ನೂ ಮಾಡಿರಲಿಲ್ಲ. ವಾಸಂತಿ ಬೆಳ್ತಂಗಡಿಗೆ ಬಂದುದು ಆಗಲಿಲ್ಲ ಎಂದು ಆವನು ಯೋಚಿಸಿದ. "ಅವಳು ಬಂದುದನ್ನು ಅನೇಕರು ನೋಡಿದರು. ಯಾರು, ಎಲ್ಲಿಗೆ ತೆರಳುವವಳೆಂದು ಮೋಟಾರಿನಲ್ಲಿ, ನಿಲ್ಮನೆಯಲ್ಲಿ, ಅಲ್ಲಿ ಇಲ್ಲಿ, ಕೇಳಿರಲೂ ಸಾಕು. ಜನರಿಗೆ ಮೈಯೆಲ್ಲ ಕಣ್ಣೇ ! ಒಂದೊಂದು ರೋಮ ಒಂದೊಂದು ನಾಲಿಗೆ ! ನಾರಾಯಣನೂ ಹೇಳದೇ ಇರಲಾರ. ನಾನು ಮದುವೆಯಾದ ಸುದ್ದಿಯನ್ನು ಅವಳಿಗೆ ಮುಟ್ಟಿಸಿದವನು ಅವನೇ. ಇಲ್ಲದಿದ್ದರೆ ಏನು, ಕಾಗೆ ಕಾಗದ ಒಯ್ದು ಕೊಟ್ಟಿತೇನು ? ಅಂತೂ ಗುಟ್ಟು ರಟ್ಟಾಯಿತು" ಎಂದವನು ಚಿಂತಿಸಿದ. ನಾರಾಯಣನಿಗೆ ಹೊಡೆಯಬಾರದಿತ್ತೆಂದೂ ಅವನು ಪರಿತಾಪಪಟ್ಟ. ಏಕೆಂದರೆ ಪೆಟ್ಟಿನ, ಅಪಮಾನದ ನೋವು ಅದನ್ನು ಅನುಭವಿಸಿದವರಿಗೇ ಗೊತ್ತಿರುತ್ತದೆ. ಆದುದರಿಂದ "ಇನ್ನು ಅವನ ಬಾಯಿ ಕಟ್ಟಲು ಆಗಲಿಕ್ಕಿಲ್ಲ" ಎಂದವನು ತರ್ಕಿಸಿದ. ಬೇಸರದಿಂದ ಆವನು ಹೊರಟು ಹೋಗಬಹುದೆಂದೂ ಅವನೆದೆಯಲ್ಲಿ ಒಂದು ಸಂಶಯ ಸುಳಿದು ಹೋಯಿತು. ಇದರಿಂದ ಅವನು ತುಂಬಾ ಕಳವಳಗೊಂಡ. ಮತ್ತು ರಾತ್ರಿ ಗಾಢನಿದ್ದೆ ಹಿಡಿಯಲಿಲ್ಲ. ನಿದ್ದೆ ಬಂದಾಗಲೂ ಹಲವು ದುಸ್ವಪ್ನಗಳು ಬಿದ್ದುವು. ಅದರಿಂದ ಮನಸ್ಸಿಗೆ ತುಂಬಾ ಅಸಮಾಧಾನ ಅನಿಸಿತು. ಈ ಚಿಂತೆ ಮತ್ತು ಅಶಾಂತಿಗಳನ್ನು ಮರೆಯಲು, ಕಳೆಯಲು ಹಾಗೂ ಮನಸ್ಸನ್ನು ಬೇರೊಂದು ವಿಷಯ, ವಿಚಾರದ ಕಡೆ ಹರಿಸಲು ಅವನು ಬಂಗಾಡಿಗೆ ಹೋಗಬೇಕೆಂದು ಬಗೆದ.

ಆದರೆ ಅವನು ಒಂದೆರಡು ಮೈಲು ದೂರ ಸವಾರಿ ಮಾಡಿದನೋ ಇಲ್ಲವೋ, ನಾನಾ ಯೋಚನೆಗಳಿಂದ ಚಿತ್ತದ ಉದ್ವೇಗ ಹೆಚ್ಚಾಯಿತು.

"ಲಗ್ನವಾಗಿ ಮೂರು ದಿನಗಳಾದುವಷ್ಟೆ! ಈಗ ಯಾಕೆ ಹೋಗುತ್ತಿದ್ದಿಯಾ? ಈಗ ನಿನಗಲ್ಲಿ ಏನು ಕೆಲಸವಿದೆ?'' ಈ ಪರಿ ಅವನು ಆಲೋಚಿಸಿದ. "ವಾಸಂತಿಯ ವಿಷಯ ಗೋಪಾಲರಾಯರಿಗೆ ಗೊತ್ತಾಗಿದೆಯೋ ಹೇಗೆ?'' ಎಂಬ ಸಂದೇಹವೂ ಮೂಡಿತು. ಅದನ್ನು ನೆನಸಿ ಅವನೆದೆ ಧಸಕ್ಕೆಂದಿತು. ಇದಿರಿಗೆ ರಸ್ತೆಯೂ ಏರು ಪೇರು. ಇದಿರ್ಗಾಳಿ, ಸೂರ್ಯನ ಬಿಸಿಲಿನ ಉರಿ. ಎಷ್ಟು ತುಳಿದರೂ ಗಾಲಿಗಳು ಹೊರಳಲಿಲ್ಲ. ''ವನು ಇಳಿದ. ಸೈಕಲ್ಲನ್ನು ದೂಡುತ್ತ ಮುಂದೆ ಹೋದ. ಆ ಏರು ಮುಟ್ಟಿದಾಗ ಸಾಕಾಯಿತು. ಅಲ್ಲೇ ರಸ್ತೆಯ ತಿರುಗಾಸ್. ಮಾರ್ಗದ ಬದಿಯಲ್ಲೊಂದು ಮರವೂ ಇದೆ. ಅದರ ಬುಡದಲ್ಲಿ ಕೆಲವು ಶಿಲೆಕಲ್ಲುಗಳು! ಬಳಲಿದ ಆನಂದರಾಯ ಆ ನೆರಳನ್ನು ಬಯಸಿ ಬಂದ. ಸೈಕಲನ್ನು ಮರದ ಒಂದು ಬದಿಗೆ ಒರಗಿಸಿಟ್ಟು ಇನ್ನೊಂದು ಬದಿಯಲ್ಲಿದ್ದ ಕಲ್ಲಿನ ಮೇಲೆ ಕುಳಿತು ಕೋಟನ್ನು ತೆಗೆದು ಮಡಚಿಟ್ಟ. "ಕೊರಳ ಪಟ್ಟಿ" ಬಿಚ್ಚಿ ಕಿಸೆಗೆ ಸೇರಿಸಿದ. ಅಂಗಿಯ ಗುಂಡಿ ತೆಗೆದು ಕರವಸ್ತ್ರವನ್ನು ಎದೆ ಕಂಕುಳಿಗಳಿಗೆಲ್ಲ ಸರಿಸಿ, ಇಳಿವ ಬೆವರನ್ನೊರಸಿಕೊಂಡ. ಅದನ್ನೇ ಬಿಡಿಸಿ ಮೋರೆಗೆ ಬೀಸಿಕೊಂಡ. ಧಾವತಿ ಮುಗಿದ ಮೇಲೆ ನೆಲದ ಮೇಲೆ ಅವನ ದೃಷ್ಟಿ ಬಿತ್ತು. ಆಗ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದ ಹಣ್ಣುಗಳು ಅವನಿಗೆ ಕಾಣಿಸಿದುವು. ಕೆಲವು ಇಡೀ ಹಣ್ಣುಗಳು. ಕೆಲವು ಬಿದ್ದಾಗ ಒಡೆದಿವೆ. ಒಡೆದ ಓಡುಗಳೂ ಒಣಗಿವೆ. ಹಾರಿದ ಬೀಜಗಳೂ ಅಲ್ಲಲ್ಲಿ ಬಿದ್ದಿವೆ. "ಓಹೋ! ಇದು ಕಾವೇರಿ ಮರ!" ಎಂದವನು ಉದ್ಗರಿಸಿ ಕತ್ತೆತ್ತಿ ಮೇಲೆ ನೋಡಿದ. ಮರದ ಮೇಲೂ ಕಾಯಿ, ಹಣ್ಣುಗಳು ಕಾಣಿಸಿದುವು. ಕಾವೇರಿ ಮರ, ಅದರ ತೊಗಟೆ, ಚಿಗುರು, ಎಲೆ, ಕಾಯಿ, ಹಣ್ಣು, ಬೀಜ ಎಲ್ಲ ವಿಷ! ಅದರ ನೆರಳಿನಲ್ಲೂ ಆ ವಿಷದ ದುರ್ವಾಸನೆ! ಅದನ್ನು ಅನುಭವಿಸಿದ ಆನಂದರಾಯನಿಗೆ ಫಕ್ಕನೇ ತನ್ನ ಕಾವೇರಿಯ ನೆನಪು ಬಂದಿತು. "ಕಾವೇರಿಯೂ ನನ್ನ ಜೀವನದಲ್ಲಿ ವಿಷವಾಗಿ ಪರಿಣಮಿಸುವಳೇ, ಹೇಗೆ? ವಾಸಂತಿಯ ಸುದ್ದಿಯನ್ನು ಅವಳು ಕೇಳಿರುವಳೇ? ಕೇಳಿದ್ದರೆ ಅವಳು ಏನೆಂದಾಳು? ಇಲ್ಲದಿದ್ದರೆ ಈಗ ಒಳ್ಳೆದೇ ಆಯಿತು. ಆದರೆ ಮುಂದೆ? ಒಂದಲ್ಲದಿದ್ದರೆ ಇನ್ನೊಂದು ದಿನ ಅವಳಿಗೆ ಅದು ಗೊತ್ತಾಗದೇ ಇರಲಾರದು. ನಾನಾದರೂ ಹೇಳಬೇಕಾದೀತು! ಆಗ ಅವಳು

ಶೂರ್ಪನಖಿಯಂತೆ ಅವತಾರ ಧರಿಸುವಳೇ ? ಛೇ, ಹಳ್ಳಿ ಹುಡುಗಿ! ಹಾಗೆಲ್ಲ ಮಾಡಲಾರಳು. ನಾನು ಹೇಳಿದ ಹಾಗೆ ಕೇಳಿಕೊಂಡಿರುವದರಲ್ಲಿ ಸಂದೇಹ ವಿಲ್ಲ. ವಾಸಂತಿಯೇ ಹಾಗಿರುವಾಗ ಇವಳೆಷ್ಟರವಳು ?'' ಎಂದು ಭಾವಿಸಿದ. ಆಗ ವಾಸಂತಿಯ ಗುಣಗಳ ಗೆರೆ ಬಣ್ಣಗಳು ಅವನ ಕಣ್ಣ ಮುಂದೆ ಮಿಂಚಿದುವು. ಅವೆಲ್ಲವನ್ನು ಒಂದೊಂದಾಗಿ ಸ್ಮರಿಸಿದ. ಆ ಸವಿ, ಸಾವಿರ ಸುಖ ಭೋಗಭಾಗ್ಯಗಳನ್ನು ಅವನ ಮುಂದೆ ಎಳೆದು ತಂದುವು. ನಾನಾ ಪಕ್ವಾನ್ನ ಕಂಡಾಗ ಗ್ರಂಥಿಗಳು ಲಾಲಾರಸ ಸುರಿಸುವಂತೆ, ಸಂತೋಷದ ಗ್ರಂಥಿಗಳು ನಗುವಿನ ಹೊನಲನ್ನು ಹರಿಸಿದುವು. ಜಡ ಜಾಡ್ಯ ಇಂಗಿಹೋಯಿತು. ಮೈ ಮನಸ್ಸಿನಲ್ಲಿ ಉತ್ಸಾಹದ ವಿದ್ಯುಲ್ಲತೆ ಸಂಚರಿಸಿತು. ತಕ್ಷಣ ಆನಂದರಾಯ ಎದ್ದು ಕೈ ಕಾಲುಗಳನ್ನು ಕೊಡಹಿದ. ಕೋಟು ಸಿಕ್ಕಿಸಿ ಮತ್ತೆ ವಾಸಂತಿಯ ಗುಂಗಿನಲ್ಲಿ ಕಾವೇರಿಯನ್ನು ಕಾಣಲು ಹೋದ.

ಬಂಗಾಡಿಗೆ ಮುಟ್ಟಿದಾಗ ಅವನ ಕೈಗಡಿಯಾರದಲ್ಲಿ ಹನ್ನೊಂದು ಗಂಟೆಯಾಗಿತ್ತು. ಗೋಪಾಲರಾಯರು ಮನೆಯಲ್ಲಿರಲಿಲ್ಲ. ಮನೆ ಇದಿರು ಗದ್ದೆಯ ಹುಣಿಯ ಮೇಲೆ ಸೈಕಲನ್ನು ದೂಡಿಕೊಂಡು ಬರುತ್ತಿರುವ ಆನಂದರಾಯನನ್ನು ಅರವಿಂದ ಗುರುತಿಸಿ “ಭಾವಯ್ಯ ಬಂದ ! ಭಾವಯ್ಯ ಬಂದ” ಎಂದು ಹೇಳುತ್ತ ಅಡಿಗೆ ಮನೆಗೆ ಹೋದ. ಜಲಜಮ್ಮ ಮತ್ತು ಕಾವೇರಿ ಅಡಿಗೆ ಕೆಲಸದಲ್ಲಿ ನಿರತರಾಗಿದ್ದರು. “ಭಾವಯ್ಯ ಬಂದ!” ಎಂದು ಅರವಿಂದ ಆಡಿದ ಮಾತು ಕಿವಿಗೆ ಬಿದ್ದ ಕೂಡಲೇ ಹೆರಮಣೆಯ ಮೇಲೆ ಕುಳಿತು ತೆಂಗಿನ ಕಾಯಿಯನ್ನು ಹೆರೆಯುತ್ತಿದ್ದ ಕಾವೇರಿ ತಕ್ಷಣ ಎದ್ದು ಓಡಿದಳು. ಆನಂದರಾಯನನ್ನು ಇದಿರ್ಗೊಳ್ಳಲಿಕ್ಕಲ್ಲ.; ಸೀರೆ ಬದಲಾಯಿಸಲು. ಮನೆಯಲ್ಲಿ ಸ್ವಲ್ಪ ಹರುಕು, ಹಳೇ ಸೀರೆಗಳು ನಡೆಯುತ್ತವೆ. ಆದರೆ ಮಂದಿ, ಬಂಧುಗಳು ಬಂದಾಗ ಅವನ್ನು ಬದಲಾಯಿಸುವವರೇ ಬಹಳ. ಎರಡು ಮೂರು ಸೀರೆ ಇಲ್ಲದ ಸ್ತ್ರೀಯರೂ ತಮ್ಮ ಬಡತನವನ್ನು ತೋರಿಸಲಾರರು. ಗೋಪಾಲರಾಯರು ಹಾಗೆ ಬಡವರೂ ಅಲ್ಲ. ಅಲ್ಲದೆ ಕಾವೇರಿ ಇನ್ನೂ ಮದುಮಗಳು. ಗಂಡನ ಇದಿರು ಅವನಿಗೊಪ್ಪುವಂತೆ ಇರಬೇಕು ! ಈ ಪರಿಯ ಸೊಬಗು ಹೆಣ್ಣಿನ ಸ್ವಭಾವಜನ್ಯ ಬುದ್ಧಿ.

ಕಾವೇರಿ ಸ್ವತಃ ಈಗ ಅವನ ಮುಂದೆ ಮೆರೆದಾಡುವಂತಿರಲಿಲ್ಲ. ಆದು

ದರಿಂದ ಜಲಜಮ್ಮ ಅರವಿಂದನನ್ನುದ್ದೇಶಿಸಿ "ಒಂದು ತಂಬಿಗೆ ನೀರು ಕೊಡು'' ಎಂದು ನುಡಿದರು. ಮಲೆನಾಡಿನ ಈ ಭಾಗದಲ್ಲಿ ಎಲ್ಲ ಬ್ರಾಹ್ಮಣರ ಮನೆಗಳಲ್ಲೂ ಬಂದು ಬಳಗದವರು, ಅತಿಥಿ ಅಭ್ಯಾಗತರು ಬಂದಾಗೆ ಅನುಸರಿಸುವ ಶಿಷ್ಟಾಚಾರಗಳು ಇವೆ. ಅವರು ಬಂದೊಡನೆಯೇ ಗಂಡಸರು "ಏನು ಭಾವ ? ಏನು ಅಣ್ಣ ? ಏನು ಮಾವಯ್ಯ ?" ಎಂದು ಕೇಳುವರು. ಕಾಲು ತೊಳೆಯಲು ಅವರಿಗೆ ಒಂದು ತಂಬಿಗೆ ನೀರು ತಂದಿಡುವರು. ಕುಳಿತುಕೊಳ್ಳಲು ಈಚಲ ಹುಲ್ಲಿನ ಚಾಪೆಯನ್ನು ಜಗಲಿಯಲ್ಲಿ ಹಾಸುವರು. ಬಾಯಾರಿಕೆಗೆ ನೀರು, ಬೆಲ್ಲ ತಂದಿಡುತ್ತಾರೆ. ತಣ್ಣೀರಿನ ಬದಲು ಬಿಸಿನೀರು ಗಿಂಡಿಗಳಲ್ಲಿರಿಸುವುದೂ ಇದೆ. ಮಳೆಗಾಲವಿರಲಿ, ಬೇಸಿಗೆಗಾಲವಿರಲಿ, ಅವರು ಕುಡಿಯಲಿ ಬಿಡಲಿ, ಪದ್ಧತಿಗೆ ಲೋಪ ಬರಲಾರದು. ಬಂದವರು ಹಾಗೆ ಕುಳಿತು, ಕುಡಿದು, ಮಾತನಾಡಲು ತೊಡಗಿದಾಗ ಒಳಗೆ ಕಾಫಿ ಸಿದ್ಧವಾಗುತ್ತದೆ ಮತ್ತು "ಬನ್ನಿ, ಸ್ವಲ್ಪ ಕಾಫಿ ಕುಡಿಯುವಾ!" ಎಂದು ಎಬ್ಬಿಸುತ್ತಾರೆ. ಅದಕ್ಕಾಗಿ ಒಳಗೆ ಹೋದಾಗ ಅಕ್ಕ, ತಂಗಿ, ಸೊಸೆ ಹೆಂಡತಿ ನಾದಿನಿಯರು ಬಂದು ನಮಸ್ಕರಿಸುತ್ತಾರೆ. ಹತ್ತು ಮಾತನಾಡುವುದು ಹೆಚ್ಚು. ಹತ್ತು ನಿಮಿಷ ಇದಿರು ನಿಂತು ಮಾತನಾಡುವವರು ವಿರಳ. ಕರಾವಳಿಗಿಂತ ಇವೆಲ್ಲ ಬೇರೆ ನಡೆವಳಿಕೆ. ಆದುದರಿಂದ ಆನಂದರಾಯ ತುಂಬ ಆಶ್ಚರ್ಯಪಟ್ಟ.

ಅವನ ಬಸಿರಲ್ಲಿ ಅನೇಕ ಬಯಕೆಗಳಿದ್ದುವು. ಬಂದೊಡನೆ ಕಾವೇರಿ ಓಡಿಬಂದು ಇದಿರ್ಗೊಳ್ಳುವಳೆಂದು ಬಗೆದಿದ್ದ. ಆದರೆ ಅವನು ಕಂಡುದುದು ಅರವಿಂದನ ಮುಖವನ್ನು. ತೆಗೆದ ಕೋಟನ್ನು ಗೂಟಕ್ಕೆ ಸಿಕ್ಕಿಸಿದವನು ಅವನೇ! ಜಗಲಿಯಲ್ಲಿ ಕುಳಿತ ಮೇಲೂ ಅವಳ ಆಗಮನವನ್ನು ನಿರೀಕ್ಷಿಸಿದ. ಕಿಟಕಿಯ ಸರಳುಗಳೊಳಗೆ ಇಣಿಕಿದ. ಅವಳಿಲ್ಲ. ಒಳಗೆ ಅವನು ಹೋದಾಗ ಫಕ್ಕನೇ ಬಂದು ನಮಸ್ಕರಿಸಿದಳು. ಅವನು ಕಣ್ಣವೆ ಮುಚ್ಚಿ ತೆರೆಯುವದರೊಳಗೆ ಅವಳು ಅದೃಶ್ಯಳಾದಳು. ಕೊಟ್ಟಿಗೆಗೆ ಸ್ನಾನಕ್ಕೆ ಹೋದಾಗ "ನೀರು ಬಿಸಿ ಇದೆಯೇ ? ಸಾಬೂನು ಬೇಕಾ?" ಎಂಬ ನೆವಹೇಳಿ ಬರಬಹುದೆಂದು ದಾರಿ ನೋಡಿದ. ಊಟ ಬಡಿಸಿದವರೂ ಜಲಜಮ್ಮ. ತಾಂಬೂಲತಟ್ಟೆಯನ್ನು ಅರವಿಂದನೇ ಹೊರಗೆ ತಂದಿಟ್ಟ. ಅನ್ನದ ಆಲಸ್ಯ ಕಳೆಯಲು ಅಟ್ಟದ ಮೇಲೆ ಮಲಗಿಕೊಂಡರಾದೀತು ಎಂದವನ ಆಶೆ. ಅದು ಏಕಾಂತ

ಸ್ಥಳ. ಅವಳನ್ನು ಕರೆಯಬಹುದೆಂದು ಅವನ ವಿಚಾರ. ಆದರೆ ಅರವಿಂದ ಜಗಲಿಯಲ್ಲೇ ಚಾಪೆ ಬಿಡಿಸಿ, ಜಮಖಾನೆ ಹಾಸಿ, ತಲೆದಿಂಬು ಕೊಟ್ಟು "ಭಾವಯ್ಯ, ಸ್ವಲ್ಪ ಮಲಗಿ" ಎಂದ. ಕಾವೇರಿಯನ್ನು ಕಾಣುವ, ಮಾತನಾಡುವ, ಒಂದು ಸಂದರ್ಭವೂ ಅವನಿಗೆ ದೊರೆಯಲಿಲ್ಲ. ಆದರೂ ಅವನು ಹತಾಶನಾಗಲಿಲ್ಲ. ಆ ಹಂಬಲವೇ ಅವನಿಗೆ ಅವರ್ಣನೀಯವಾದ ಒಂದು ಸುಖವನ್ನು ಕೊಟ್ಟಿತು. ಪ್ರಿಯೆಯು ಮನೆಯಲ್ಲಿರುವುದರಿಂದಲೇ ಮನಸ್ಸಿಗೆ ಎಷ್ಟೋ ಸಂತೋಷವೆನಿಸುತ್ತದೆ. ಮನೆಯ ಒಳಹೊರಗೆ ಅವಳ ಮೈಸುಗಂಧ ಗಾಳಿ ಸುಳಿದಾಡುತ್ತಿರುತ್ತದೆ. ಮನೆಯೊಳಗಿನ ಪ್ರಕಾಶವೂ ಅವಳ ಕಣ್ಣೋಟದ ಹೊಳಪು ! ಬಳೆಗಳ, ಕಾಲುಂಗುರಗಳ ನಿನಾದ ಅಲೆ ಅಲೆಯಾಗಿ ಆಗೊಮ್ಮೆ ಈಗೊಮ್ಮೆ ತೇಲಿ ಬಂದಾಗ ಪ್ರಿಯನೆದೆಯಲ್ಲಿ ಪ್ರೇಮದ ಸೆಲೆ ಪುಟಿಯುತ್ತದೆ. ಆನಂದರಾಯನು ಅದನ್ನು ಅನುಭವಿಸಿದ. ಮಗ್ಗುಲಲ್ಲಿ ಮಲಗಿ ನಿದ್ದೆ ಬಂದವನಂತೆ ಕಣ್ಣೆವೆಗಳನ್ನು ಮುಚ್ಚಿಕೊಂಡ.

ಭಾವನಿಗೆ ನಿದ್ದೆ ಬಂದಿದೆಯೆಂದು ಅರವಿಂದ ಭಾವಿಸಿ, ಅವನ ಸೈಕಲನ್ನು ಹೆಬ್ಬಾಗಿಲಿನ ಹೊರಗೆ ತಂದ. ಅಲ್ಲಿಂದ ಹಟ್ಟಿ ಮತ್ತು ಮನೆಯ ಮಧ್ಯೆ ಇರುವ ಅಂಗಳಕ್ಕೆ ಅದನ್ನು ದೂಡಿಕೊಂಡು ಬಂದ. ಅಲ್ಲಿ ಅವನ ಸೈಕಲ್ ಸವಾರಿ ಸುರುವಾಯಿತು. ಅವನ ಸರ್ಕಸ್ ಕೂಡಾ ನೋಡುವಂತಹುದೇ. ಒಮ್ಮೆ ವೇಗದ ಪರೀಕ್ಷೆಯಾಗುತ್ತಿತ್ತು. ಇನ್ನೊಮ್ಮೆ ಎಷ್ಟು ನಿಧಾನವಾಗಿ ಸಾಗಲು ಸಾಧ್ಯವೆಂದು ನೋಡಿದ. ಆ ಮೇಲೆ ಸುತ್ತು ಹಾಕುವ ಆಟ. ಆದಷ್ಟು ಕಡಿಮೆ ಸ್ಥಳದಲ್ಲಿ ಸುತ್ತು ತೆಗೆಯಲು ಅವನ ಯತ್ನ. ನಡುವೆ ಸೈಕಲ್ ಗಂಟೆಯನ್ನು ಬಾರಿಸಿದ. ಅದನ್ನು ಕೇಳಿ ಒಳಗಿದ್ದ ಕಾವೇರಿ ಹಿಂದಿನ ಬಾಗಿಲಿನಿಂದಲೇ ಅಲ್ಲಿಗೆ ಬಂದಳು. ಸೈಕಲ್ ನೋಡಿ ಅವಳಿಗೂ ಆಸೆಯಾಯಿತು. "ಅಣ್ಣ ! ಅಣ್ಣ !" ಎಂದು ಅವಳು ಓಡಿ ಬಂದಳು. ಅವನು ಕೆಳಗಿಳಿದ.

"ಅಣ್ಣ ! ನನಗೆ ಕಲಿಸು" ಎಂದು ಹೇಳಿ ಕಾವೇರಿ ಸೈಕಲನ್ನು ಹಿಡಿದು ಕೊಂಡಳು.

"ಇದು ಲೇಡಿಸ್ ಸೈಕಲಲ್ಲ".

"ಅಲ್ಲದಿದ್ದರೆ ಅಲ್ಲ. ಪೆಡಲ್ ಮೇಲೆ ಹೊಡಿಯುತ್ತೇನೆ."

"ಹೋದ ಸಲ ನಾನು ಬಾಡಿಗೆಗೆ ತಂದ ಸೈಕಲ್ ಕೆಳಗೆ ಹಾಕಿ ಕಡ್ಡಿ ಮುರಿದಿದ್ದೀಯ! ಇದೂ ಬಾಡಿಗೆದ್ದೋ ಏನೋ ! ಜೋಕೆ. ಮತ್ತೆ ಭಾವ ಸಿಟ್ಟಾದಾರು !"

"ನಿನ್ನ ಮೇಲೆ !"

"ನನ್ನ ಮೇಲೆ ಯಾಕೆ? ನಿನ್ನ ಮೇಲೆ."

"ನಾನು ತಂದಿಲ್ಲ".

"ಹಂ! ಹಾಂ! ಹಾಗಿದ್ದರೆ ತಾ, ಅಲ್ಲೇ ಇಟ್ಟು ಬರುತ್ತೇನೆ".

ಕಾವೇರಿ ಉತ್ತರ ಕೊಡದೆ ಪೆಡಲ್ ಮೇಲೆ ಸೈಕಲ್ ಹೊಡೆಯುತ್ತ ಹಟ್ಟಿಯ ಹಿಂಬದಿ ಹೋದಳು. ಅಲ್ಲಿ ಇಳಿದು ಅರವಿಂದ ಬರುವಂತೆ ಸನ್ನೆ ಮಾಡಿದಳು. ಅವನು ಬಂದಕೂಡಲೇ "ನಾವು ಆ ಗುಡ್ಡದ ಆಚೆ ಹೋಗೋಣ. ಅಲ್ಲಿ ಸ್ವಲ್ಪ ಮೈದಾನ್ ಸ್ಥಳ ಇದೆ. ಸೀಟಿನಲ್ಲಿ ಹತ್ತಿ ಕುಳಿತುಕೊಳ್ಳಲು ನೀನು ಕಲಿಸು. ಇಲ್ಲಿ ಬೇಡ. ಅಮ್ಮ ನೋಡಿದರೆ ಬೈದಾಳು" ಎಂದು ಪಿಸುಗುಟ್ಟಿದಳು. ಅವನು ತಲೆ ಅಲ್ಲಾಡಿಸಿದ. ಮತ್ತೆ ಇಬ್ಬರೂ ಅಲ್ಲಿಂದ ಹೊರಟು ಹೋದರು.

ನಿದ್ದೆ ಹೋದವನಂತೆ ನಟಿಸಿ ಮಲಗಿದ್ದ ಆನಂದರಾಯ ಸೈಕಲಿನ ಗಂಟೆಯ ನಿನಾದ ಕೇಳಿ ಕಣ್ಣರಳಿಸಿದ. ಚಾಪೆಯ ಮೇಲೆದ್ದು ಕುಳಿತು ನೋಡಿದ—ಒಳ ಅಂಗಳದಲ್ಲಿ ಅವನ ಕುದುರೆ ಇರಲಿಲ್ಲ. ಅವನ ಕುತೂಹಲ ಕೆರಳಿತು. ಜಗಲಿಯಿಂದಿಳಿದು, ಹೆಬ್ಬಾಗಿಲು ದಾಟಿ ಹೊರಗೆ ಬಂದ. ಪುನಃ ಗಂಟೆಯ ಧ್ವನಿ ಕೇಳಿಸಿತು. ಆ ದಿಕ್ಕು ಗುರುತಿಸಿ ಹಟ್ಟಿಯ ಕಡೆ ಹೊರಳಿದ. ಅಂಗಳದಲ್ಲಿ ಅವನ ಮೈದುನನ ಸರ್ಕಸ್ ನಡೆಯುತಿತ್ತು. ಅವನು ಮರೆಯಲ್ಲಿ ನಿಂತು ನೋಡುತಿದ್ದಾಗಲೇ ಕಾವೇರಿ ಬಂದು ಅಣ್ಣನ ಕೈಯಿಂದ ಕಸಿದು ಕೊಂಡಳು. ಅವಳು ಜಡೆಯನ್ನು ತಿರುವಿ ಮುಡಿ ಕಟ್ಟಿ, ಸೆರಗನ್ನು ಬಿಗಿದು, ಗಂಡುಗಚ್ಚೆ ಹಾಕಿ ಪೆಡಲ್ ಹೊಡಿಯುವುದನ್ನು ನೋಡಿ ಆನಂದರಾಯ ಅಚ್ಚರಿಗೊಂಡ. ಅರೆ ಮರೆಯಾಗಿ ತೋರುವ ಆ ಕೈಕಾಲು, ಕುತ್ತಿಗೆಗಳನ್ನು ಭ್ರಾಂತನಂತೆ ದಿಟ್ಟಿಸಿದ. ಎಲ್ಲಿ ಬೀಳುತ್ತಾಳೋ ಎಂದು ಒಮ್ಮೊಮ್ಮೆ ಅವನಿಗೆ ಭೀತಿಯಾಗುತಿತ್ತು. ಆಗ ಹೋಗಿ ತಾನು ಸೈಕಲನ್ನು ಹಿಂದಿನಿಂದ ಹಿಡಿದು ಕೊಳ್ಳಬೇಕೆಂದೂ ಅವನಿಗೆ ಅನ್ನಿಸುತಿತ್ತು. ಆದರೆ ತನ್ನನ್ನು ಕಂಡೊಡನೆಯೇ

ಅವಳು ಮನೆಗೆ ಓಡಿ ಹೋಗಬಹುದೆಂದು ಭಾವಿಸಿ ಅಲ್ಲೇ ನಿಂತ. ಆದರೆ ಅವರಿಬ್ಬರೂ ಹಟ್ಟಿಯ ಹಿಂಬದಿ ಹೊರಟು ಹೋದ ಮೇಲೆ ಅವನ ಆಶ್ಚರ್ಯ ಇನ್ನಷ್ಟು ಕೆರಳಿತು. ಧೈರ್ಯದಿಂದ ಅವನೂ ಅವರು ಅರಿಯದಂತೆ ಅನುಸರಿಸಿದ.

ಹಟ್ಟಿಯ ಹಿಂಬದಿಯ ದಾರಿ ಕಿರಿದು. ಅದರ ಎಡ ಬಲದಲ್ಲಿ ದರೆ. ದರೆಯ ಮೇಲೆ ಮುಳ್ಳು, ಪೊದೆ ಪೊದರುಗಳೂ ಬೆಳೆದಿವೆ. ಬೇರುಗಳು ಈಚೆ ದಾರಿಗಡ್ಡವಾಗಿ ಕೂಡ ಪಸರಿಸಿವೆ. ದರೆ ಎತ್ತರವಾಗಿರುವುದರಿಂದ ದನಗಳು ಆಚೆ ಈಚೆ ನುಸುಳಿ ಹೋಗುವಂತಿಲ್ಲ. ಬಿಟ್ಟ ಮೇಲೆ ನೆಟ್ಟಗೆ ಗುಡ್ಡದ ಕಡೆಯೇ ತೆರಳಬೇಕು. ಆ ಗುಡ್ಡವೇ ಅವು ಮೇಯುವ ಸ್ಥಳ. ಹುಲ್ಲು, ಮುಳಿಹುಲ್ಲು ಅಲ್ಲಿ ಯಥೇಚ್ಛ ಬೆಳೆದಿವೆ. ಪೊದೆ ಪೊದರುಗಳು ಇವೆ. ಅಲ್ಲೊಂದು ಇಲ್ಲೊಂದು ಕಾವೇರಿ, ಮತ್ತಿ, ಮರುವ ಮರಗಳಿವೆ. ಬಿದಿರು ಹಿಂಡಲುಗಳೂ ಬೆಳೆದಿವೆ. ನಾನಾ ಬಳ್ಳಿ, ಬೀಳುಗಳು ಗಿಡಮರಗಳನ್ನೂ ಸುತ್ತಿ ಕೊಂಡಿವೆ. ಹುಲ್ಲು, ಎಲೆ, ಚಿಗುರುಗಳನ್ನು ತಿನ್ನುವ ದನಗಳೂ ಅವನ ದೃಷ್ಟಿಗೆ ಬಿದ್ದುವು. ಆದರೆ ಕಾವೇರಿ ಮತ್ತು ಅರವಿಂದ ಕಾಣಿಸಲಿಲ್ಲ. ಗುಡ್ಡದ ಉನ್ನತ ಸ್ಥಳಕ್ಕೆ ಅವನು ಬಂದು ನಿಂತು ನೋಡಿದ. ಆಚೆ ತಪ್ಪಲಿನಲ್ಲಿ ಅವರಿದ್ದರು. ಅದು ಸ್ವಲ್ಪ ಮೈದಾನು ಸ್ಥಳವೇ. ದೊಡ್ಡ ಗಿಡ ಮರಗಳಿಲ್ಲ. ಅಲ್ಲಲ್ಲಿ ಕೆಲವು ಪೊದರುಗಳು ಮಾತ್ರ ಇವೆ. ಮುಳಿ ಹುಲ್ಲೂ ದಟ್ಟವಾಗಿಲ್ಲ. ಇದ್ದ ಮುಳಿ ಹುಲ್ಲೂ ಕಡು ಬೇಸಿಗೆಗೆ ಒಣಗಿ, ಬಾಗಿ ನೆಲಸಮವಾಗಿವೆ. ಕಾವೇರಿ ಸೀಟಿನ ಮೇಲೆ ಕುಳಿತು ಸವಾರಿ ಮಾಡುತ್ತಿದ್ದಾಳೆ. ಅವಳು ಬೀಳದಂತೆ ಅರವಿಂದ ಹಿಂದೆ ಸೈಕಲನ್ನು ಹಿಡಿದುಕೊಂಡು ಓಡುತ್ತಿದ್ದಾನೆ. ಆನಂದರಾಯ ನಗುತ್ತ ಅವರಿದ್ದ ತಪ್ಪಲಿಗೆ ಇಳಿಯತೊಡಗಿದ. ಹುಲ್ಲಿನೆಡೆ ಹಾವಿದೆಯೇ. ಮುಳ್ಳಿದೆಯೇ ಎಂದವನ ಹೆದರಿಕೆ. ಆದುದರಿಂದ ಒಮ್ಮೆ ತಲೆ ತಗ್ಗಿಸಿ ನೆಲ ನೋಡುತ್ತ, ಮತ್ತೊಮ್ಮೆ ಅವನ ಕಣ್ಣಿಗೆ ಸೊಂಪು ಕೊಡುವ ಕಾವೇರಿಯನ್ನು ಕಾಣುತ್ತ ಹೆಜ್ಜೆ ಹಾಕಿದ.

ಕಾವೇರಿ ಸೈಕಲಿನ ಮೇಲೆಯೇ ತನ್ಮಯಳಾಗಿದ್ದಳು. ಅತ್ತಿತ್ತ ನೋಡಿದರೆ ಬಿದ್ದೇನೆಂಬ ಬೆದರಿಕೆ. ಆದರೆ ಅರವಿಂದ ಮಾತ್ರ ಅವನನ್ನು ಕಂಡ. ಆದರೆ ಅವನು ಸಮೀಪ ಬರುವವರೆಗೂ ಹೇಳಲಿಲ್ಲ. ಸೈಕಲನ್ನು ತಿರುಗಿಸುವಾಗ ಫಕ್ಕನೇ ಅವಳು ನೋಡಿ ತಬ್ಬಿಬ್ಬಾದಳು. ಬ್ರೇಕ್ ಹಿಡಿದು

ನಿಲ್ಲಿಸಿ ಹಾರಲು ಬಯಸಿದಳು. "ಒಮ್ಮೆಲೇ ಬ್ರೇಕ್ ಒತ್ತಬೇಡ. ಬಿದ್ದೀಯಾ !" ಎಂದು ಅರವಿಂದ ನುಡಿದು ಇನ್ನಷ್ಟು ಹೆದರಿಸಿದ. ಆ ಮೇಲೆ ಆನಂದರಾಯನನ್ನು ನೋಡಿ "ಬನ್ನಿ, ಸ್ವಲ್ಪ ಸೈಕಲ್ ಹಿಡಿಯಿರಿ. ನಾನು ಸೋತಿದ್ದೇನೆ'' ಎಂದು ಹೇಳಿ ಕಿರುನಗೆ ನಕ್ಕ. ಕಾವೇರಿ ಇಳಿಯುವುದ ರೊಳಗೆ ಆನಂದರಾಯ ಬಂದು ಸೈಕಲಿಗೆ ಕೈ ಚಾಚಿದ. ಕಾವೇರಿಗೆ ತುಂಬ ಲಜ್ಜೆಯಾಯಿತು. ಸೈಕಲ್ ಹೊಡೆದು ಅವಳೂ ಸೋತಿದ್ದಳು. ಮೈಮೋರೆ ಯಿಂದ ಬೆವರೂ ಇಳಿಯುತ್ತಿತ್ತು. ಇಳಿಯಲು ಇಚ್ಛಿಸಿದಳು. ಆದರೆ ಸ್ವತಃ ಅವಳಿಗೆ ಸೀಟಿನಿಂದ ಇಳಿಯಲು ತಿಳಿಯುತ್ತಿದ್ದಿಲ್ಲ. ಆದುದರಿಂದ ಉಪಾಯ ಗಾಣದೆ ಪೆಡಲ್ ತುಳಿದಳು. ಆನಂದರಾಯ ಹಿಂದಿನಿಂದ ಹಿಡಿದುಕೊಂಡು ಓಡಿದ. ಒಂದೆರಡು ಸಲ ಮೈದಾನಿನ ಆಚೆ ಈಚೆ ಓಡಿದ ಬಳಿಕ ಅವನು ಅತ್ತಿತ್ತ ನೋಡಿದ. ಅರವಿಂದ ಕಾಣಿಸಲಿಲ್ಲ. ಆದುದರಿಂದ "ಮುಂದೆ ಹೊಡಿ, ತಿರುಗಿಸಬೇಡ'' ಎಂದು ಉಬ್ಬಿಸಿ ತಾನೂ ಹಿಂದಿನಿಂದ ದೂಡಿದ. ಮೈದಾನಿನ ಅಂಚಿನಲ್ಲಿರುವ ಪೊದೆಗಳ ನಡುವೆ ಹಾಯ್ದು ಅದು ಆಚೆ ಹೋಯಿತು. ಗಾಡಿ ಹೋಗುವಷ್ಟು ವಿಶಾಲ ಸ್ಥಳಗಳಿರುವುದರಿಂದ ಸೈಕಲಿ ಗೇನೂ ಅನಾನುಕೂಲವಿಲ್ಲ. ಇನ್ನೂ ಮುಂದೆ ಹೊಡೆಯಬಹುದಾಗಿತ್ತು. ಆದರೆ ಕಾವೇರಿ ಅಂಜಿದಳು. ಮತ್ತೆ ಬ್ರೇಕ್ ಒತ್ತಿ ವೇಗವನ್ನು ಕಡಿಮೆ ಮಾಡಿದಳು. "ನಾನು ಇಳಿಯುತ್ತೇನೆ ಸಾಕು. ಸ್ವಲ್ಪ ಹಿಡಿಯಿರಿ" ಎಂದಳು. ಅದರಂತೆ ಅವನು ಅವಳ ಎಡಬದಿ ಬಂದು ಕೈ ಕೊಟ್ಟ. ಅವಳು ಇಳಿದಾಗ ಅವನು ಅಪ್ಪಿಕೊಂಡಂತೆಯೇ ಆಯಿತು. ಅದರಿಂದ ಕಾವೇರಿ ನಾಚಿದಳು ಮೈ ರೋಮಾಂಚವಾಯಿತು. ಬೆದರುಗಣ್ಣುಗಳಿಂದ ಸುತ್ತಲೂ ನೋಡಿದಳು. ಪೊದೆಗಳು; ಅರವಿಂದನೂ ಇಲ್ಲ. ಆದುದರಿಂದ ತಕ್ಷಣ ಅಲ್ಲಿಂದ ಓಡಲು ಬಯಸಿದಳು. ಆದರೆ ಆನಂದರಾಯ ಕೈ ಹಿಡಿದಿದ್ದ.

"ಆ ನೆರಳಿಗೆ ಬಾರೆ. ಒಂದು ಗುಟ್ಟು ಹೇಳುತ್ತೇನೆ'' ಎಂದು ಬೇಡಿದ.

ಕಾವೇರಿ ಅತ್ತಿತ್ತ ಕಣ್ಣು ಹೊರಳಿಸಿದಳು.

"ಎಷ್ಟು ಲಜ್ಜೆನೇ ನಿನಗೆ ! ಗಂಡನೊಡನೆ ಕೂಡ ಮಾತನಾಡುವುದಿಲ್ಲ. ಕೊಲ್ಲೂರು ಮೂಕಾಂಬಿಕೆ !''

ಆ ಮಾತು ಕೇಳಿ ಅವಳಿಗೆ ನಗು ಬಂದಿತು

"ಅಷ್ಟು ದೂರದಿಂದ ಬಂದಿದ್ದೇನೆ. ಆದರೆ ಒಮ್ಮೆ ಕೂಡ ದೇವಿಯ ದರ್ಶನವಿಲ್ಲಲ್ಲ!"

ಅವಳು ಉತ್ತರವನ್ನೀಯಲಿಲ್ಲ. ಆದರೆ ಮಂತ್ರಮುಗ್ಧಳಂತೆ ಮಾತಿಲ್ಲದೆ ಆ ತಂಪಿಗೆ ಅವನೊಡನೆ ಅವಳು ಬಂದಿದ್ದಳು ಆ ಪೊದರಿನ ಚಿಗುರುಗಳಂತೆ ಅವನ ಆಸೆ ಚಿಗುರಿತು. ಎಡಗೈಯಲ್ಲಿ ಅವಳನ್ನು ತಬ್ಬಿ ಮುದಿಸಿದನು. ಕಾವೇರಿಗೆ ಭಯವಾಯಿತು. ಫಕ್ಕನೇ ಕೆಳಗೆ ಕುಸಿದು, ನೆಗೆದು ತಪ್ಪಿಸಿಕೊಂಡಳು. ಆದರೆ ಅವಳ ಸೀರೆಯ ಸೆರಗು ಅವನ ಕೈಗೆ ಸಿಕ್ಕಿತು. ಎದೆಯ ಮೇಲೆ ಬರಿ ರವಕೆ. ಮೂಡಿಬಂದ ಅದಾಳಂಬ ಕುಚಗಳೆರಡನ್ನು ಕಂಡು ಅವನು ಇನ್ನಷ್ಟು ಆತುರನಾದ. "ಬಿಡಿ ಬಿಡಿ!" ಎಂದವಳು ಹೇಳಿ ಸೆರಗು ಎಳೆದುಕೊಳ್ಳಲಾರಂಭಿಸಿದಳು.

"ನಾನು ಕೇಳಿದುದನ್ನು ಕೊಟ್ಟರೆ ಬಿಡುತ್ತೇನೆ"

ಅವಳು ಕೊಡುತ್ತೇನೆ ಎಂದೆನಲಿಲ್ಲ; ಇಲ್ಲವೆಂದು ನಿರಾಕರಿಸಲೂ ಇಲ್ಲ. ಆದರೆ ಫಕ್ಕನೇ ಅತ್ತಿತ್ತ ನೋಡಿದಂತೆ ನಟಿಸಿ "ಅಕೊಳ್ಳಿ, ಅರವಿಂದ ಬಂದ! ಬಿಡಿ!" ಎಂದಳು. ಆಗ ತನ್ನಿಂದ ತಾನೇ ಅವನು ಸೆರಗು ಬಿಟ್ಟ. ಅರವಿಂದ ಬಂದಿರಲಿಲ್ಲ. ಅವಳು ಈ ಉಪಾಯ ಹೂಡಿ ಗೆದ್ದಳೆಂದು ಅವನಿಗೆ ಅರ್ಥವಾಯಿತು. ಆದರೆ ಅವನು ಪುನಃ ಅವಳಕಡೆ ದೃಷ್ಟಿ ಹೊರಳಿಸಿದಾಗ ಅವಳು ಅಲ್ಲಿರಲಿಲ್ಲ.

ಕಾವೇರಿ ಪೊದೆ ಪೊದರುಗಳ ನಡುವೆ ಅಡ್ಡಾದಿಡ್ಡಿಯಾಗಿ ಹಾಯ್ದು ಆ ತಪ್ಪಲಿನಿಂದ ಗುಡ್ಡದ ತುದಿಗೇರಿದಳು. ಅರವಿಂದ ಅಲ್ಲಿ ಒಂದು ಮಹಾವೃಕ್ಷದ ಕೆಳಗೆ ಕುಳಿತಿದ್ದ. ತಂಗಿ ಬರುತ್ತಿರುವುದನ್ನು ಕಂಡೊಡನೆ ಧ್ಯಾನಮಗ್ನನಂತೆ ಕಣ್ಮುಚ್ಚಿಕೊಂಡ.

"ಓಹೋಹೋ! ಕಪಟ ಸನ್ಯಾಸಿಗಳು!" ಎಂದು ಅವಳು ಅಣಕಿಸಿದಳು. ಅದೊಂದೆ ವಾಗ್ಬಾಣ ಅವನ ತಪೋಭಂಗ ಮಾಡಿತು. ಧ್ಯಾನದಿಂದಿಳಿದ ತಪಸ್ವಿ ಕಣ್ದೆರೆದು ನಕ್ಕು ನುಡಿದ:

"ಸುಭದ್ರೆ ಮಾತ್ರ ಇಲ್ಲ!"

"ಬರುತ್ತಾಳೆ. ಸ್ವಲ್ಪ ತಡಿ! ನೀನು ಈ ವರುಷ ಕಾಲೇಜಿಗೆ ಹೋದಕೂಡಲೇ ಬರುತ್ತಾಳೆ, ನೋಡು!"

"ಅಮ್ಮಮ್ಮ! ಒಳ್ಳೇ ಭವಿಷ್ಯ ಹೇಳುತ್ತೀಯಲ್ಲ! ಯಾರು ಭಾವ ಹೇಳಿ ಕೊಟ್ಟರೇನು? ಎಲ್ಲಿ, ಭಾವ ಎಲ್ಲಿ?''

ಕಾವೇರಿ ತಪ್ಪಲಿನ ಕಡೆ ಕೈ ತೋರಿಸಿದಳು.

"ಒಬ್ಬಳನ್ನೇ ಬಿಟ್ಟು ಬಂದೆಯಾ?" ಎಂದವನು ಹೇಳಿ "ಹೋಯಿ! ಓ ಭಾವಯ್ಯ! ಕೂ!" ಎಂದು ಕೂಗಿದ.

"ಕೂ" ಎಂದು ಆನಂದರಾಯ ಉತ್ತರವಿತ್ತು ಸೈಕಲಿನ ಗಂಟೆ ಬಾರಿಸಿದ.

ಅರವಿಂದ ಅವಸಿದ್ದೆಡೆ ಹೋದುದರಿಂದ ಕಾವೇರಿ ಮನೆಯ ದಾರಿ ಹಿಡಿದಳು. ಆದರೆ ಮನೆಗೆ ಬಂದ ಕೂಡಲೇ ಜಲಜಮ್ಮ ಅವಳ ಮೋರೆಗೆ ಮಂಗಳಾರತಿ ಎತ್ತಿದರು. "ಮದುವೆ ಆಗಿ ಇನ್ನೂ ಒಂದು ವಾರವಾಗಿಲ್ಲ. ಈ ರಣಬಿಸಿಲಿಗೆ ಅರವಿಂದನೊಡನೆ ಗುಡ್ಡಕ್ಕೆ ಹೋಗಿದ್ದೀಯಾ! ಏನಾದರೂ ದೆವ್ವಗಿವ್ವ ಉಸುಕು ಎಸೆದರೆ ಏನು ಮಾಡುತ್ತೀ? ಸೈಕಲ್ ಹತ್ತಲು ನೀನಿನ್ನೂ ಸಣ್ಣ ಕೂಸಾ? ನಾಳೆ ಗಂಡನ ಮನೆಗೆ ತೆರಳಿದ ಮೇಲೆ ಸೈಕಲಿನಲ್ಲೇ ತಿರುಗಾಡುತ್ತೀಯೇನು, ಮಡ್ಡಾಂ ಹಾಗೆ! ನಿನ್ನ ಗಂಡ ಕೇಳಿದರೆ, ನೋಡಿದರೆ ಏನೆಂದಾನು? ಸೈಕಲ್ ಕೆಳಗೆ ಹಾಕಿ ಮುರಿದರೆ ಸಿಟ್ಟಾಗಲಿಕ್ಕಿಲ್ಲ? ಇಲ್ಲೇ ಹೊರಗೆ ಮಲಗಿದ್ದಾನೆಂಬ ಜ್ಞಾಪಕವೂ ಇಲ್ಲ ನಿನಗೆ! ಒಳ್ಳೆ ಪರ ಇಲ್ಲದೆ ಬೆಳೆದ ಹುಡುಗಿ ಹಾಗಾದಿಯಲ್ಲಾ, ದೇವರೇ! ಇನ್ನು ಮುಂದೆ ಹೀಗೆಲ್ಲ ಮಾಡಬೇಡ, ನೋಡು!'' ಎಂದು ಗದರಿಸಿದರು.

ತಾಯಿ ಮಾತು ಕೇಳಿ ಕಾವೇರಿಗೆ ನಗುಬಂತು.

"ಯಾಕೆ ನಗುತಿದ್ದೀ?'' ಎಂದು ಅವರು ಕೇಳಿದರು.

"ಯಾಕೂ ಇಲ್ಲ'' ಎಂದವಳು ಹೇಳಿ ಅಲ್ಲಿಂದ ಓಡಿದಳು.

ಅಷ್ಟರಲ್ಲಿ "ಅಮ್ಮಾ! ಕಾಫಿ ಆಯಿತಾ?" ಎಂದು ಕೇಳುತ್ತಾ ಅರವಿಂಧ ಬಂದ.

ಅವನು ಸಮೀಪ ಬಂದ ಮೇಲೆ ಜಲಜಮ್ಮ ಹೇಳಿದರು:

"ಹೌದೇನೋ! ಇಷ್ಟು ದೊಡ್ಡವನಾಗಿದ್ದಿ ಕೋಣನ ಹಾಗೆ! ಇನ್ನೂ ಬುದ್ಧಿ ಇಲ್ಲೇನೋ!"

"ಕೋಣಕ್ಕೆ ಬುದ್ಧಿ ಇದೇನಮ್ಮಾ! ಕೋಣನ ಮುಂದೆ ಕಿನ್ನರಿ ಬಾರಿ

ಸಿದ ಹಾಗೆ ಎಂಬ ಗಾದೆ ಮಾತು ಇದೆಯಲ್ಲ. !”

ಜಲಜಮ್ಮನ ಸಿಟ್ಟು ಕರಗಿ ಹೋಯಿತು. ಸಮಾಧಾನದಿಂದಲೇ ಅವರು ನುಡಿದರು: “ನಿನ್ನ ತಮಾಷೆ ಮಾತು ಬಿಡು. ಹೆಂಗಸರಿಗೆ ಸೈಕಲ್ ಯಾಕೆ? ನಾಳೆ ಅವಳು ಗಂಡನ ಮನೆಗೆ ಹೋಗುವವಳು. ಲೇಡಿ ಕೆಲಸಕ್ಕಲ್ಲ. ಎಲ್ಲಾದರು ಶನಿ ಇದಿರಾಗಿ ಬಿದ್ದು, ಕೈಕಾಲು ಮುರಿದುಕೊಂಡರೆ ಏನು ಮಾಡೋಣ ! ಅವಳ ಗಂಡ ಅಲ್ಲಿ ಹೊರಗೆ ಮಲಗಿಕೊಂಡಿದ್ದಾನೆ. ನೀನು ಈ ಉರಿಬಿಸಿಲಿಗೆ ಗುಡ್ಡಕ್ಕೆ ಅವಳನ್ನು ಯಾಕೆ ಕರೆದುಕೊಂಡು ಹೋಗ ಬೇಕು, ಹೇಳು. ”

“ನಾನು ಕರೆದುಕೊಂಡು ಹೋಗಲಿಲ್ಲಮ್ಮಾ !”

“ ಮತ್ತೆ ?”

“ ಭಾವ !”

ಅದನ್ನು ಆಲಿಸಿದ ಜಲಜಮ್ಮನ ಮೋರೆ ಅರಳಿತು. ಮತ್ತು ಅರವಿಂದ ನೊಡನೆ ಅವರೂ ನಕ್ಕರು. ಆದರೆ ತಕ್ಷಣ ಏನನ್ನು ಯೋಚಿಸಿ ಕೊಂಡರೋ ಏನೋ ! ನಗು ಇಂಗಿ ಮೋರೆ ಗಂಭೀರವಾಯಿತು. ಪುನಃ ಅರವಿಂದನ ಕಡೆ ಹೊರಳಿ “ಅವರೊಡನೆ ನೀನು ಹೋಗಿದ್ದಿಲ್ಲ ?” ಎಂದು ಪ್ರಶ್ನಿಸಿದರು.

“ನಾನೂ ಇದ್ದೆ. ”

ಜಲಜಮ್ಮ ಸಿಟ್ಟುಸಿರು ಬಿಟ್ಟು, “ಓಹೋ ! ಹಾಗಾದರೆ ಎಲ್ಲರೂ ಒಂದೇ ರೀತಿ ಇದ್ದೀರಿ. ತಂತಮ್ಮೊಳಗೆ ‘ಪ್ಲಾನ್’ ಮಾಡಿಕೊಂಡೇ ಹೋಗಿದ್ದಾರೆ, ಠಕ್ಕರು !” ಎಂದು ಹೇಳುತ್ತ, ಒಳಗೊಳಗೆ ಮುಗುಳು ನಗುತ್ತ ಅಡಿಗೆ ಕೋಣೆಯೊಳಗೆ ಮರೆಯಾದರು. ಸಾಯಂಕಾಲ ಗೋಪಾ ಲರಾಯರು ಬಂದಾಗ ಅವರ ಮುಂದೆಯೂ ಗುಸುಗುಟ್ಟಿ ಹೇಳಿದರು.

“ಇನ್ನೂ ಹುಡುಗಿ ಕೈಹಿಡಿದು ಮೂರು ದಿನಗಳಾದುವಷ್ಟೆ ! ಮತೆ ಓಡಿ ಬಂದಿದ್ದಾನೆ. ಮಹಾರಾಯನ ಜೀವ ಇಲ್ಲೇ ಇದೆ ! ಅವರೆಲ್ಲ ಕರಾವಳಿ ಮನುಷ್ಯರು. ಹೊಸ ಹುಡುಗರು ! ಲಗ್ನದ ದಿನವೇ ಶೋಭನ ಆಗ ಬೇಕೆಂಬ ಆಸೆಯುಳ್ಳವರು. ಬಹಳಕಾಲ ಹೇಗೆ ತಡೆಯುತ್ತಾರೆ ? ಅವಳೂ ಮುದ್ದುಮರಿಯಲ್ಲ. ದಿನ ನೋಡಿ ಬೇಗನೇ ಒಂದು ಪ್ರಸ್ತದ ಶಾಸ್ತ್ರ ಮುಗಿಸ ಬಾರದಾ ? ಆ ಮೇಲೆ ಅವರು ಬೇಕಾದ್ದು ಮಾಡಿಕೊಳ್ಳಲಿ ! ಸೈಕಲ್

ವಾಲಿಯಂತೆ ಮೆರೆಸಲಿ; ಗುಡ್ಡಕ್ಕೆ ಕರೆದುಕೊಂಡು ಹೋಗಲಿ; ಲಂಡನಿಗೆ ಹೋಗಲಿ; ನಮಗೆ ಚಿಂತೆ ಇರುವುದಿಲ್ಲ. ಚಂದ ಕಾಣಿಸುತ್ತದೆ."

"ಸರಿ! ಸರಿ.'' ಎಂದವರು ಮುಗುಳು ನಗುತ್ತ ಉತ್ತರವಿತ್ತು ಮತ್ತೆ ನುಡಿದರು: "ಬೆಳಿಗ್ಗೆ ನಾನು ಶಿರ್ಲಕ್ಕೆ ಹೋದಾಗಲೇ ನೀನು ಹೇಳಲಿಲ್ಲ. ಅಲ್ಲಿ ಲಗ್ನಕ್ಕೆ ಪುರೋಹಿತರು ಬಂದಿದ್ದರು. ಸಾಧಾರಣ ಯಾವ ತಿಥಿಯ ಮೇಲೆ ಇಡಬಹುದೆಂದು ನೀನು ತಿಳಿಸುತಿದ್ದರೆ ನಾನು ಮುಹೂರ್ತ ಕೇಳುತ್ತಿದ್ದೆ."

"ನನಗೂ ತೋಚಲಿಲ್ಲ. ಇಷ್ಟು ಆತುರದಿಂದ ಮಾರಾಯ ಸುಳಿಯುತ್ತಾನೆಂದು ನನಗೇನು ಗೊತ್ತು?"

"ಎಲ್ಲ ಈಗಿನ ಹುಡುಗರು! ನನ್ನ ನಿನ್ನ ಹಾಗೇನೇ?" ಎಂದು ಗೋಪಾಲರಾಯರು ಜಲಜಮ್ಮನ ಕಡೆ ನೋಡಿ ನಕ್ಕರು. ಆ ನಗು, ನೋಟ ಬಹಳ ಅರ್ಥಗರ್ಭಿತವಾಗಿತ್ತು. ಜಲಜಮ್ಮ ತಾವು ತಮ್ಮ ಯಜಮಾನರೊಂದಿಗೆ ಕಳೆದ ಅಂದಿನ ರಸನಿಮಿಷಗಳನ್ನೂ ದಿನಗಳನ್ನೂ ಸ್ಮರಿಸಿಕೊಂಡರು.

ಆನಂದರಾಯ ಸಂಜೆ ಹೊರಡಲನುವಾದ. ಎರಡು ಮೂರು ದಿನಗಳ ವರೆಗೆ ಹಿಂತಿರುಗುವುದಿಲ್ಲ ಎಂದು ನಾರಾಯಣನ ಮುಂದೆ ಅವನು ಹೇಳಿ ಬಂದಿರುವುದೇನೋ ನಿಜ. ಆದರೆ ಬಂದು ಒಂದು ದಿನವಿದ್ದ ಮೇಲೆ ಹಿಂತಿರುಗಲು ಅವನಿಗೆ ಮನಸ್ಸಾಯಿತು. ಇಲ್ಲಿ ಕೆಲಸವೇನೂ ಇಲ್ಲವೆಂದು ಅವನು ಕಂಡ. ಹೊತ್ತು ಹೋಗುವುದೂ ಕಷ್ಟವಾಯಿತು. ಸಲಿಗೆ, ಸರಸದಿಂದ ಕಾವೇರಿಯೊಡನೆ ಮಾತನಾಡುವಂತೆಯೂ ಇಲ್ಲ. ಅವಳ ದರ್ಶನ ಲಾಭವೂ ಕಠಿನ. ಅಲ್ಲದೆ ಗೋಪಾಲರಾಯರು ಬಂದ ಮೇಲೆ ಅವನ ಮನಸ್ಸಿನೊಳಗಿನ ಕಳವಳ ಹೆಚ್ಚಿತು. ಹಿರಿಯರ ಮುಂದೆ ಹುಡುಗಾಟಿಕೆ ಚಂದವಲ್ಲವೆಂದರಿತ. ಹೀಗಾಗಿ ಹೊರಟು ನಿಂತ. ಆದರೆ ಗೋಪಾಲರಾಯರು ಬಿಡಲಿಲ್ಲ.

"ಬೆಳಿಗ್ಗೆ ಸೈಕಲ್ ಮೇಲೆ ಹನ್ನೆರಡು ಮೈಲು ಬಂದಿದ್ದೀರಿ. ಈಗ ಮತ್ತೆ ಸಂಜೆ ಹನ್ನೆರಡು ಮೈಲು ಹೊಡೆದರೆ ಜೀವ ಯಾಕಾದೀತು? ಈ ಸೈಕಲ್ ಅಷ್ಟು ಒಳ್ಳೆಯದಲ್ಲ. ಎದೆಗೆ ಪೆಟ್ಟಾಗುತ್ತದೆ. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ, ನೋಡುವಾ!'' ಎಂದವರು ತಡೆದರು.

ಆನಂದರಾಯ ಎಷ್ಟು ಹೇಳಿಕೊಂಡರೂ ಅವರು ಕೇಳಲಿಲ್ಲ. ಹೀಗಾಗಿ ಅವನು ತೊಟ್ಟ ಕೋಟನ್ನು ತೆಗೆದಿಡಬೇಕಾಯ್ತು.

ಅಷ್ಟರಲ್ಲಿ ಅರವಿಂದ ಒಳಗಿನಿಂದ ಬಂದು, "ಭಾವಯ್ಯಾ! ಗಂಟೆ ಎಷ್ಟಾಯಿತು ?" ಎಂದು ಕೇಳಿದ.

ಆನಂದರಾಯ ತನ್ನ ಕೈಯನ್ನು ನೋಡಿ, "ಅರೆ! ಅರೆ! ನನ್ನ ಗಡಿಯಾರ!'' ಎಂದು ತಡಬಡಿಸಿದ.

ಅರವಿಂದ ಗಂಭೀರ ಮುಖಮುದ್ರೆಯಿಂದ "ಗುಡ್ಡಕ್ಕೆ ಹೋದಾಗ ಬಿದ್ದು ಹೋಯಿತೋ ಏನೋ!" ಎಂದು ನುಡಿದ.

ಗೋಪಾಲರಾಯರು ನಿಜವೆಂದೇ ನಂಬಿ "ಹೋಗು, ಹುಡುಕು!" ಎಂದು ಅವನಿಗೆ ತಿಳಿಸಿದರು. ಆದರೆ ಅರವಿಂದ ಅವರ ಕಡೆ ಹೊರಳಿ ನಗೆ ಸೂಸಿ ಸನ್ನೆ ಮಾಡಿದ. ಆದುದರಿಂದ ಅವರೂ ಆ ಸೂಚ್ಯಾರ್ಥವನ್ನು ಗ್ರಹಿಸಿ "ಎಲ್ಲಿ ಬಿಟ್ಟಿರಿ ಸ್ವಾಮಿ! ತಂದಿದ್ದೀರೋ ಇಲ್ಲವೋ ಮತ್ತೆ?'' ಎಂದು ಕೇಳಿದರು.

"ಹೆ! ಹೆ! ತಂದಿದ್ದೆ" ಎಂದವನು ಉತ್ತರವಿತ್ತು ಸ್ವಲ್ಪ ಯೋಚಿಸಿ "ಸ್ನಾನ ಮಾಡುವಾಗ ತೆಗೆದಿಟ್ಟ ನೆನಪು'' ಎಂದ!

" ಹಾಗಾದರೆ ಅದು ಇನ್ನು ಸಿಕ್ಕ ಹಾಗೆಯೇ! ಆ ಕಸದಲ್ಲಿ ಎಲ್ಲಿ ಬಿದ್ದು ಹೋಯಿತೋ ಏನೋ!" ಎಂದು ಅವರು ಬೇಸರ ತೋರಿಸಿದರು.

"ಛೇ, ಛೇ, ಬಿದ್ದು ಹೋಗುವ ವಸ್ತುವಲ್ಲ. ಯಾರಾದರೂ ತೆಗೆದಿಟ್ಟಿರಬೇಕು''.

"ಹೌದಾ! ಅರವಿಂದ ನೀನು ತೆಗೆದಿಟ್ಟಿಯಾ?"

"ಇಲ್ಲ"

"ನಿನ್ನ ತಾಯಿಯೊಡನೆ ಕೇಳಿದೆಯಾ?''

"ಅವಳೂ ಕಂಡಿಲ್ಲ.''

"ಮತ್ತೆ ಸೈಕಲ್‌ವಾಲಿ?''

"ಅದು ನನಗೆ ಗೊತ್ತಿಲ್ಲ."

"ಕೇಳು"

"ನಾನು ಯಾಕೆ ಕೇಳಲಿ? ಯಾರ ಗಡಿಯಾರ ಕಳೆದು ಹೋಗಿದೆ

ಯೋ ಅವರೇ ಕೇಳಲಿ !''

"ಹಂ ! ಹಂ ! ಕಳ್ಳರು ಸಿಕ್ಕಿ ಬಿದ್ದರು, ಸ್ವಾಮಿ" ಎಂದು ಗೋಪಾಲರಾಯರು ಗಹಗಹಿಸಿ ನಕ್ಕು ನುಡಿದರು: "ನಿಮ್ಮ ಗಡಿಯಾರ ಇನ್ನು ನಿಮ್ಮ ಕೈಗೆ ಸಿಕ್ಕುವಂತಿಲ್ಲ. ತುಳಸೀದಳ ನೀರು ಬಿಟ್ಟು ಬಿಡಿ. ನಿಮ್ಮ ರಾಣೀ ಸಾಹೇಬರೇ ಕಟ್ಟಿಕೊಂಡಿರಬೇಕು! ಅಂತೂ 'ಪ್ಲಾನ್' ಮಾಡಿದ್ದಾರೆ ಅಣ್ಣ ತಂಗಿ ಕೂಡಿ.''

"ಆಗಲಿ ! ಹೆಂಗಸರಿಗೆ ನಮ್ಮ ಗಡಿಯಾರ ಬೇಕೆಂದಾದ ಮೇಲೆ ನಾವು ಲೇಡೀಸ್ ಗಡಿಯಾರ ಕಟ್ಟಿಕೊಂಡರೆ ಸರಿ!'' ಎಂದು ಆನಂದರಾಯ ಹೇಳಿ ನಕ್ಕ. ಅಂತೂ ಈ ಸಣ್ಣ ಘಟನೆಯಿಂದ ಅವನಿಗೆ ಹರ್ಷವಾಯಿತು. ಅಲ್ಲದೆ, ಅವನ ಮನೋಬಯಕೆಯನ್ನು ಸೂಕ್ಷ್ಮವಾಗಿ ಗ್ರಹಿಸಿದ ಜಲಜಮ್ಮ ಅವನ ಮುಂದೆ ಕಾವೇರಿ ಆಗಾಗ ಸುಳಿದು ಹೋಗುವಂತೆ ಮಾಡಿದರು. ರಾತ್ರಿ ಊಟಕ್ಕೇಳುವ ಮೊದಲು ಕಾಲು ತೊಳೆಯಲು ಅವಳೇ ನೀರು ತಂದಿಟ್ಟಳು. ತುಪ್ಪ, ಉಪ್ಪು, ಉಪ್ಪಿನಕಾಯಿ ಬಡಿಸಿದಳು. ಊಟವಾದ ಬಳಿಕ ಅರವಿಂದ ಮತ್ತು ಆನಂದರಾಯರಿಗೆ ಎರಡು ಲೋಟಗಳಲ್ಲಿ ಅವಳೇ ಹಾಲು ತಂದುಕೊಟ್ಟಳು. ಹೀಗಾಗಿ ಮಲಗಿಕೊಂಡ ಆನಂದರಾಯನು ಅನೇಕ ಸಂವೇದನೆಗಳನ್ನು ಅನುಭವಿಸುವಂತಾಯಿತು. ಕಾವೇರಿ ಅವನನ್ನು ಒಮ್ಮೆಯೂ ನೇರವಾಗಿ ನೋಡಿಲ್ಲ. ಸರಸಸಲ್ಲಾಪಗೈದಿಲ್ಲ. ಯಾವ ರೀತಿಯ ಪ್ರೇಮ ಪ್ರದರ್ಶನವನ್ನೂ ಮಾಡಿಲ್ಲ. ಆದರೂ ತನ್ನ ಮನೋ ಮಂದಿರದಲ್ಲಿ ಅವಳೇ ತುಂಬಿರುವಳಲ್ಲ! ಇದು ಏಕೆ, ಹೇಗೆ ಹೀಗಾಯಿತೆಂದು ಅವನು ಯೋಚಿಸಿದ. ಅನೇಕ ಸುಖ ಸ್ವಪ್ನಗಳನ್ನೂ ಕಂಡ.

ಬೆಳಿಗ್ಗೆ ಆನಂದರಾಯನೊಂದಿಗೆ ಅರವಿಂದನೂ ಸಿದ್ಧನಾದ. ಭಾವ ಸೈಕಲ್ ಸವಾರ. ಮೈದುನನ ಕಾಲೇ ವಾಹನ. ಆದರೆ ಹನ್ನೆರಡು ಮೈಲು ನಡೆಯಬೇಕಲ್ಲ. ಅರವಿಂದ ಅದನ್ನೊಲ್ಲದೆ ಬೇರೆದಾರಿ ಹಿಡಿಯಲು ಬಯಸಿದ. ನೇತ್ರಾವತಿ ಹೊಳೆಯ ಆಚೆ ಕಡಿರುದ್ಯಾವರ ಮಾರ್ಗವೊಂದಿದೆ. ಗೋಪಾಲರಾಯರ ಮನೆಯಿಂದ ಹೊರಟು ಆ ರಸ್ತೆಯಲ್ಲಿ ಆರು ಮೈಲು ನಡೆದರೆ ಸರಿ, ಮುಂಡಾಜೆಗೆ ತಲಪುತ್ತದೆ. ಗಟ್ಟದಿಂದ ಚಾರ್ಮಾಡಿ ಮಾರ್ಗವಾಗಿ ಬೆಳ್ತಂಗಡಿಗೆ ತೆರಳುವ ಮೋಟಾರುಗಳು ಸಿಗುತ್ತವೆ. ಅದು

ದರಿಂದ "ನೀನು ಈ ದಾರಿಯಲ್ಲೇ ಹೋಗು. ನಿನ್ನ ಮೊದಲೇ ನಿನ್ನ ಭಾವ ಬೆಳ್ತಂಗಡಿ ಮುಟ್ಟುತ್ತಾರೆ. ಬೇಕಾದರೆ ಈ ಹೊತ್ತು ಅಲ್ಲಿ, ಅವರೊಂದಿಗಿರು. ನಾಳೆ ಬೆಳಿಗ್ಗೆ ಪುತ್ತೂರಿಗೆ ಹೋಗು. ದೇವರ ದಯೆಯಿಂದ ನೀನು ಪಾಸಾದರೆ ಮುಂದೆ ಏನುಮಾಡಬೇಕೆಂದು ನೋಡುವಾ! ಕಾಲೇಜಿಗೆ ತೆರಳುವದಾದರೆ ಯಾವಾಗ ಅರ್ಜಿ ಹಾಕಬೇಕು, ಮೊದಲು ಎಷ್ಟು ಹಣ ಬೇಕಾಗುತ್ತದೆ, ಮಂಗಳೂರಿಗೆ ಹೋಗಿ ಕಾಲೇಜಿನ ಪ್ರಿನ್ಸಿಪಾಲರನ್ನು ಕಾಣಬೇಕೇ ಹೇಗೇ, ನಾನೂ ಬರಬೇಕಾಗುತ್ತದಾ, ಈ ಎಲ್ಲ ಸಮಾಚಾರವನ್ನು ಹೆಡ್‌ಮಾಸ್ತರರನ್ನು ಕೇಳಿ, ತಿಳಿದುಕೋ. ಬಹಳ ದಿನ ಇರಬೇಡ" ಎಂದು ಗೋಪಾಲರಾಯರು ತಿಳಿಸಿದರು. ಅರವಿಂದ ಅದಕೊಪ್ಪಿ ತಾಯಿ ಮತ್ತು ತಂಗಿಯಂದಿರಿಗೆ ಹೇಳಿ ಬರಲು ಒಳಗೆ ಹೋದ. ಆಗ ಕಾವೇರಿ ತಾನು ತೆಗೆದಿಟ್ಟುಕೊಂಡಿದ್ದ ಕೈಗಡಿಯಾರವನ್ನು ಅವನ ಕೈಗಿತ್ತು ಕೊಡಲು ಸಂಜ್ಞೆ ಮಾಡಿದಳು. ಅದರಂತೆ ಅವನು ತಂದು ಒಪ್ಪಿಸಿದಾಗ ಅದು "ಅವಳಿಗೇ ಇರಲಿ" ಎಂದು ಹಿಂದೆ ಕಳಿಸಿಕೊಟ್ಟ. ಗೋಪಾಲರಾಯರು ಸ್ವಲ್ಪ ದೂರದ ವರೆಗೂ ಮಾತನಾಡುತ್ತ ಅವರನ್ನು ಹಿಂಬಾಲಿಸಿದರು. "ನೀನು ಹೋಗು. ಮತ್ತೆ ಬಿಸಿಲಾಗುತ್ತದೆ" ಎಂದು ಅರವಿಂದನನ್ನು ಮೊದಲು ಕಳಿಸಿದರು. ಆ ಮೇಲೆ ಅಳಿಯ ದೇವರೊಡನೆ ಮೆಲ್ಲನೆ ಅರುಹಿದರು: "ಅರವಿಂದ ಪುತ್ತೂರಿಗೆ ಹೋಗಿ ಮರಳಲಿ. ಆ ಮೇಲೆ ದೈವಾನುಗ್ರಹದಿಂದ ಅವನು ಕಾಲೇಜಿಗೆ ಹೋಗುವ ಭಾಗ್ಯ ಒದಗಿ ಬಂದರೆ ಅವನು ಮಂಗಳೂರಿಗೆ ತೆರಳುವ ಮೊದಲು ಪ್ರಸ್ತ ಮುಗಿಸಿ ಬಿಡುವಾ. ನಾನು ದಿನ ನೋಡಿ ಎರಡು ಮೂರು ದಿನಗಳ ಮೊದಲೇ ನಿಮಗೆ ತಿಳಿಸುತ್ತೇನೆ."

"ಸರಿ" ಎಂದು ಆನಂದರಾಯ ಉತ್ತರಿಸಿ "ಮತ್ತೆ ಆಗ ಸೀರೆ, ಕುಬಸ ಇತ್ಯಾದಿ ಕೊಡುವ ರೂಢಿ ಇದೆಯೇ ಹೇಗೆ? ನನಗೇನೂ ಗೊತ್ತಿಲ್ಲ. ನೀವು ಹೇಳಿ" ಎಂದ.

"ಕೊಡುವ ಪದ್ಧತಿ ಇದೆ. ನಮ್ಮ ಮಟ್ಟಿಗೆ ಕೊಟ್ಟರೂ ನಡೆಯುತ್ತದೆ; ಬಿಟ್ಟರೂ ನಡೆಯುತ್ತದೆ. ಅದೆಲ್ಲ ಅವರವರ ಇಷ್ಟ" ಎಂದವರು ಉದಾರ ಅಂತಃಕರಣದಿಂದ ನುಡಿದರು.

"ಆಗಲಿ" ಎಂದವನು ಹೊರಟ.

ಗೋಪಾಲರಾಯರು ಹಿಂದೆ ಉಳಿದರು. ಅವರು ಕಣ್ಣಿಗೆ ಕಾಣಿಸದಾದ ಬಳಿಕ ಆನಂದರಾಯ ವೇಗದಿಂದ ಸೈಕಲ್ ತುಳಿಯಲಾರಂಭಿಸಿದ. "ಅರವಿಂದ ನನಗಿಂತ ಬೇಗನೇ ಎಲ್ಲಿ ಬೆಳ್ತಂಗಡಿ ಮುಟ್ಟುತ್ತಾನೋ ? ನನಗಿಂತ ಮೊದಲು ಅವನು ಹೋದರೆ ನಾರಾಯಣ ಏನು ಹೇಳುತ್ತಾನೋ ಏನೋ ! ಹೋಟೇಲಿಗೆ ಕಾಫಿ ಕುಡಿಯಲು ಅವನು ಹೊಕ್ಕರೆ ಅಲ್ಲಿಯೂ ಅವನ ಕಿವಿ ಊದುವವರು ಇದ್ದಾರೆ! ಅಂಥ ಸಂದರ್ಭಗಳು ಅವನಿಗೆ ಸಿಗಬಾರದು. ಅವನು ಮೋಟಾರಿನಲ್ಲಿ ಬಂದು ಸಿಲ್ಕನೆಯಲ್ಲಿ ಇಳಿದಾಗ ನಾನು ಅಲ್ಲಿ ಕಾದಿರಬೇಕು. ಅದರಿಂದ ಅವನಿಗೆ ಸಂತೋಷವಾಗುತ್ತದೆ. ಮತ್ತು ನಿಜ ರಹಸ್ಯ ತಿಳಿಯುವಂತಿಲ್ಲ. ಅಲ್ಲಿಂದ ಅವನನ್ನು ನೆಟ್ಟಗೆ ಆಸ್ಪತ್ರೆಗೆ ಕರೆದುಕೊಂಡು ಬರಬೇಕು. ಅಲ್ಲೇ ಕಾಫಿ ತರಿಸಿ ಸಾಧ್ಯವಾದರೆ ಇಂದೇ ಪುತ್ತೂರಿಗೆ ಅವನನ್ನು ಕಳಿಸಿ ಬಿಡುವುದು ಒಳ್ಳೇದು. ಒಂದು ವೇಳೆ ಅವನು ಈ ದಿನ ಇರಲು ಬಯಸಿದರೆ ಅವರಿವರ ಸಂಪರ್ಕ ಬೆಳೆಸದಂತೆ ಗಾಳಿ ಸವಾರಿಗೆ ಹೊಳೆಯ ಆಚೆಯ ಗುಡ್ಡಕ್ಕೆ ಕರೆದೊಯ್ಯಲು ತಪ್ಪಬಾರದು" ಎಂದು ಆನಂದರಾಯ ದಾರಿಯುದ್ದಕ್ಕೂ ಸಂಕಲ್ಪಿಸಿದ. ಆದರೆ ಬೆಳ್ತಂಗಡಿಗೆ ಬಂದ ಮೇಲೆ ಆಸ್ಪತ್ರೆಗೆ ಬೀಗ ಹಾಕಿದುದನ್ನು ಕಂಡೊಡನೆಯೇ ಅವನ ಮನಸ್ಸಿನೊಳಗೆ ಕಳ್ಳ ಹೊಕ್ಕಂತಾಯಿತು. "ಇನ್ನೂ ಮಧ್ಯಾಹ್ನವಾಗಿಲ್ಲ. ಯಾವ ಸ್ಮಶಾನಕ್ಕೆ ಹೋಗಿದ್ದಾನೆ ಈತ? ಬೇವರ್ಸಿ !" ಎಂದು ಬೈಯುತ್ತ ಸೈಕಲನ್ನು ಅಲ್ಲೇ ಗೋಡೆಗೊರಗಿಸಿಟ್ಟು ತನ್ನಲ್ಲಿದ್ದ ಬೀಗದ ಕೈಯಿಂದ ಬೀಗ ತೆಗೆದ. ಕೋಟು ತೆಗೆದು ಅದನ್ನು ತನ್ನ ಕುರ್ಚಿಯ ಹಿಂಬದಿಗೊರಗಿಸಿದ. ಬೂಟು ತೆಗೆದು ಪರದೆ ಸರಿಸಿದ. ಆಗ ಅವನ ಕಾಲಿಗೆ ಬೀಗಗಳ ಕೈಸರ ತಾಗಿತು. ಹಾವು ಮೆಟ್ಟಿದವರಂತೆ ಕಾಲನ್ನು ಕೊಡಹಿಕೊಂಡ. ಹಾವಿನಂತೆ ಆ ಕಬ್ಬಿಣದ ತುಂಡುಗಳೂ ತಣ್ಣಗಿದ್ದುವು. ಕೈಸರ ನೋಡಿದ ಮೇಲೆ ಅವನ ಕಾಲುಗಳೂ ತಣ್ಣಗಾದುವು. "ನಾರಾಯಣ ಇಲ್ಲ" ಎಂದು ಅವನಿಗೆ ತೋಚಿತು. ತಕ್ಷಣ ಅವನು ಬಾಗಿಲುಗಳನ್ನು ತೆಗೆದು ಒಳಕೋಣೆಗಳಿಗೆ ಪ್ರವೇಶಿಸಿದ. ನಾರಾಯಣನ ಬಟ್ಟೆಬರೆ, ಟ್ರಂಕುಗಳು ಇರಲಿಲ್ಲ. ಬೇರೆ ವಸ್ತುಗಳೂ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಔಷಧದ ಬಾಟ್ಲಿಗಳೂ ಒಂದೆರಡು ಒಡೆದಿವೆ. ಗುಳಿಗೆಗಳು ನೆಲದ ಮೇಲೆ ಹರಡಿವೆ. ಆನಂದರಾಯ

ಸುತ್ತಲೂ ಕಣ್ಣರಳಿಸಿ ನೋಡಿದ. ಮೊದಲು ಇದ್ದುದು ಏನೋ ಈಗ ಇಲ್ಲ ಎಂದವನಿಗೆ ಹೊಳೆಯಿತು. ಯಾವುದು, ಏನು ಎಂದವನು ಗುರುತಿಸಲಾರ. ಆದರೆ ಎಲ್ಲ ಸಾಮಾನುಗಳನ್ನು ಎತ್ತಿ, ತೆಗೆದು, ಹುಡುಕಿ ಅಥವಾ ಸ್ಥಳ ಬದಲಿಸಿಟ್ಟಿರುವುದು ವ್ಯಗ್ಗೋಚರವಾಗುವಂತಿತ್ತು. ಕಂಪೌಂಡರನ ಕೋಣೆ ಯಲ್ಲಿಯೂ ಹಾಗೆಯೇ. ಅವನು ಕುಳಿತಿರುವ ಕುರ್ಚಿಯ ಹಿಂಬದಿಯ ಕಪಾಟುಗಳಲ್ಲೂ ಅದೇ ಸ್ಥಿತಿ. ತಿಜೋರಿಯಲ್ಲಿ ನೋಟುಗಳೂ ಇರಲಿಲ್ಲ. ಚಿಲ್ಲರೆ ಹಣ ಮಾತ್ರ ಇತ್ತು. ನಾರಾಯಣ ಕೈಗೆ ಸಿಕ್ಕಿದುದನ್ನು ದೋಚಿ ಕೊಂಡು ಹೋಗಿರುವನೆಂದು ಅವನಿಗೆ ಖಚಿತವಾಯಿತು. ಏನೇನು ಹೊತ್ತಿ ರುವನು, ಎಷ್ಟು ಸೂರೆ ಮಾಡಿರುವನು, ಅವನು ಎಲ್ಲಿಗೆ ಹೋದ, ಎಂದು ಕುರ್ಚಿಯ ಮೇಲೆ ಕುಳಿತು ಚಿಂತಿಸಿದ. ಯೋಚಿಸುತ್ತ ಹೋದಂತೆ ಸಿಟ್ಟೂ ಬಂದಿತು. ಹೊರಗೆ ಬಂದು ಅವನು ನಿತ್ಯ ಸುಳಿದಾಡುತ್ತಿದ್ದ ಕಾಫಿ ಹೋಟೇಲು, ಬೀಡಿ ಅಂಗಡಿಗಳಿಗೆ ತೆರಳಿ, "ನೀವು ಕಂಡಿರಾ? ಎಲ್ಲಿ ಹೋಗಿದ್ದಾನೆಂದು ನೀವು ಬಲ್ಲಿರಾ? ನಿಮ್ಮೊಡನೆ ಏನಾದರೂ ಹೇಳಿದನೇ ಹೇಗೆ?'' ಎಂದು ಕೇಳಿದ.

ಅದನ್ನು ಕೇಳಿ ಎಲ್ಲರೂ ಆಶ್ಚರ್ಯಚಕಿತರಾದರು. "ನಿನ್ನೆ ಕಂಡೆ; ನಿನ್ನೆ ನಾನು ಹತ್ತು ರೂಪಾಯಿಗಳನ್ನು ಕೊಟ್ಟೆ; ನಿನ್ನೆ ಸಂಜೆ ನಮ್ಮ ಅಂಗ ಡಿಯಲ್ಲಿ ಕಾಫಿ ಕುಡಿದಿದ್ದ'' ಎಂದು ಒಬ್ಬೊಬ್ಬರು ಒಂದೊಂದು ಉತ್ತರ ವಿತ್ತರು. ನಾರಾಯಣ ಅನೇಕರಿಂದ ಬಾಕಿ ಹಣ ವಸೂಲ ಮಾಡಿರುವ ನೆಂದೂ ಅನೇಕರ ಸಾಲ ತೀರಿಸಬೇಕಾಗಿದೆಯೆಂದೂ ಆನಂದರಾಯನಿಗೆ ತಿಳಿಯಿತು. ಅವನು ಆಸ್ಪತ್ರೆಗೆ ಮರಳಿದಾಗ ಅವನ ಗೆಳೆಯರು, ಸಾಲಿಗರು, ಹಿಂಬಾಲಿಸಿದರು. ಎಲ್ಲರೂ ಸತ್ಯಕ್ಕೆ ಸಾವಿರ ಬೆರಸಿ ಇದ್ದ, ಇಲ್ಲದ ಸಮಾ ಚಾರ ವಿಚಾರಗಳನ್ನು ಹೇಳುವವರೇ! ಆನಂದರಾಯನೂ ಆಸ್ಪತ್ರೆಯ ಪ್ರತಿಯೊಂದು ಕೋಣೆಗೆ ಅವರನ್ನು ಕರೆದು ತೋರಿಸಿ, "ಇದು ಇಲ್ಲ. ಈ ಇಂಜೆಕ್ಷನ್‌ಗಳಿಲ್ಲ, ಆ ಬಾಟ್ಲೆ ಇಲ್ಲ, ಇಷ್ಟು ರೂಪಾಯಿಗಳಿಲ್ಲ" ಎಂದು ವಿವ ರಿಸಿದ. "ಡಾಕ್ಟರರೇ! ನಿಮಗೆ ಟೋಕರ ಕೊಟ್ಟ! ನಿಮಗೆ ಟೊಪ್ಪಿಗೆ ಹಾಕಿದ!" ಎಂದು ನುಡಿದರು. "ಛೀ! ಛೀ!'' ಎಂದು ನಾರಾಯಣನನ್ನು ಛೀಗಳೆದು, ಹೀಗಳೆದು "ನಿಮ್ಮಂತಹ ಸತ್ಪುರುಷರಿಗೆ ಹೀಗೆ ಮಾಡಿದರೆ

ಹೇಗೆ?'' ಎಂದು ಡಾಕ್ಟರನ ಗುಣಗಾನ ಮಾಡಿದರು. ಅದರಿಂದ ಗಾಳಿ ಗುಳ್ಳೆಯಂತೆ ಉಬ್ಬಿದ ಆನಂದರಾಯ "ಇಷ್ಟು ಸಣ್ಣವನಿದ್ದಾಗ ಆ ಪರ್ದೇಸಿ ಯನ್ನು ತಂದು ಸಾಕಿ ಸಲಹಿದೆ. ಈಗ ನೋಡಿದರೆ ಹಾವಿಗೆ ಹಾಲೆರೆ ದಂತಾಯಿತು!'' ಎಂದು ಹೇಳಿ ಬಿಸುಸುಯ್ದ. ಈ ನಾರಾಯಣ ಪುರಾಣದಲ್ಲಿ ಹೊತ್ತುಗಳೆಯಿತು. ಅರವಿಂದನ ಸ್ಮರಣೆಯೇ ಆಗಲಿಲ್ಲ.

ಅರವಿಂದ ಮೋಟಾರ ನಿಲ್ದಾಣದಲ್ಲಿ ಇಳಿದು ನೋಡಿದ; ಅವನ ಭಾವ ಕಾಣಿಸಲಿಲ್ಲ. ಆದರೆ ಅವನ ಗೆಳೆಯ ಬಾಲಕೃಷ್ಣ ಕಂಡ. ಬೆಳ್ತಂಗಡಿ ಶಾಲೆಯಲ್ಲಿ ಅವನು ಅರವಿಂದನ ಸಹಪಾಠಿ. ಎಂಟನೇ ದರ್ಜೆಯಾದ ಮೇಲೆ ಹೈಸ್ಕೂಲಿಗೆ ತೆರಳಲಾಗದೆ ಒಂದು ದರ್ಜಿ ಅಂಗಡಿಯನ್ನಿಟ್ಟ. ಅರ ವಿಂದನನ್ನು ಅವನು ಕೈ ಹಿಡಿದು ತನ್ನ ಅಂಗಡಿಗೆ ಕರೆದುಕೊಂಡು ಹೋಗಿ ಒಳಗೆ ಕುಳ್ಳಿರಿಸಿದ. ಅಲ್ಲಿಗೆ ಕಾಫಿ, ಅಂಬೊಡೆ ತರಿಸಿದ. ಇಬ್ಬರೂ ತಂತಮ್ಮ ಆಗುಹೋಗುಗಳನ್ನು ಬಹಳ ಹೊತ್ತಿನ ವರೆಗೆ ಮಾತನಾಡುತ್ತ ಕುಳಿತರು. ಆಗ ನಾರಾಯಣ ಫರಾರಿಯಾದ ಸುದ್ದಿಯೂ ಹೊರಟಿತು. ಅದರೊಂದಿಗೆ ಅವನಿಗೂ ಆನಂದರಾಯನಿಗೂ ಇರುವ ಸಂಬಂಧ, ಅವನ ವೇಶ್ಯೆ ಬೆಳ್ತಂಗಡಿಗೆ ಬಂದು ಹೋದುದು ಎಲ್ಲ ಮಾತು ಬಂತು. "ಹಾಗೆಯೇ ಆಗಬೇಕು ಸ್ವಾಮೀ! ಈ ಡಾಕ್ಟರ ಬಹಳ ದೊಡ್ಡ ಬದ್ಮಾಷ್!" ಎಂದು ಅರಿವೆ ಕತ್ತರಿಸುತಿದ್ದವನೊಬ್ಬ ಹೇಳಿದ. ಆನಂದರಾಯನ ಮೇಲೆ ಬಾಲ ಕೃಷ್ಣನೂ ಪ್ರೀತ್ಯಾದರದಿಂದ ನುಡಿಯಲಿಲ್ಲ. ಅರವಿಂದ ಅವನ ಮೈದುನ ನೆಂದು ಅವನು ತಿಳಿದಿರಲಿಲ್ಲ. ಆದುದರಿಂದ ಅವನ ಹೊಟ್ಟೆಯೊಳಗಿದ್ದುದೆಲ್ಲ ಹೊರಬಿತ್ತು. ಕೇಳುತ್ತ ಹೋದಂತೆ ಅರವಿಂದನ ಮೋರೆ ಸಣ್ಣಗಾಯಿತು. "ಅವರವರು ಮಾಡಿದ ಕರ್ಮವನ್ನು ಅವರವರು ಅನುಭವಿಸುತ್ತಾರೆ'' ಎಂದ ವನು ಅಷ್ಟೇ ಹೇಳಿದ.

ಆದರೆ ಅರವಿಂದನ ಮನಸ್ಸಿನಲ್ಲಾದ ಹೊಯ್ದಾಟ ಅಷ್ಟಿಷ್ಟಲ್ಲ. ಪುತ್ತೂರಿಗೆ ಹೊರಟವನಿಗೆ ಕಾಲೇ ಬರಲಿಲ್ಲ. ಪುನಃ ಮನೆಗೆ ಮರಳಬೇ ಕೆಂದು ಮನಸ್ಸಾಯಿತು. ಆಸ್ಪತ್ರೆಗೆ ತೆರಳಿ ಆನಂದರಾಯನನ್ನು ಕಾಣಲೂ ಇಷ್ಟಪಡಲಿಲ್ಲ. ಬೆಳ್ತಂಗಡಿಗೆ ಬಂದ ಮೇಲೆ ಅವನನ್ನು ಭೆಟ್ಟಿಯಾಗದೇ ಹಿಂತಿರುಗುವುದು ಸರಿಯಲ್ಲವೆಂದು ಅನ್ನಿಸಿತೇನೋ ನಿಜ. ಹೋದರೆ ಮತ್ತೆ

ಅವನು ಬಿಡಲಾರನೆಂದು ಭಾವಿಸಿದ. ಅಲ್ಲದೆ "ನಾನು ಬೆಳ್ತಂಗಡಿಗೆ ಬಂದು ದನ್ನು ಅವನು ನೋಡಿಲ್ಲ. ಅವನಿಗೆ ಗೊತ್ತೂ ಆಗಲಿಕ್ಕಿಲ್ಲ. ಮುಂಡಾಜೆ ಯಿಂದ ಬರಲಿಲ್ಲ; ಅಥವಾ ನೆಟ್ಟಗೆ ಪುತ್ತೂರಿಗೆ ಹೋದನೆಂದು ತಿಳಿಯಲೂ ಸಾಕು'' ಎಂದು ಆಲೋಚಿಸಿದ. ಆ ಮೇಲೆ ಬಾಲಕೃಷ್ಣನ ಕಡೆ ಹೊರಳಿ ಹೇಳಿದ :

" ಬಾಲಕೃಷ್ಣ ! ಈಗ ಒಂದು ಮೋಸವಾಯಿತಲ್ಲ! ಪುತ್ತೂರಿಗೆ ಹೋಗಬೇಕೆಂದು ಬಂದೆ. ಆದರೆ ಗಡಿಬಿಡಿಯಲ್ಲಿ ದುಡ್ಡು ತರಲಿಲ್ಲ!"

"ಎಷ್ಟು ಬೇಕು ? ನಾನು ಕೊಡುತ್ತೇನೆ.''

"ಛೇ ! ಛೇ ! ಐದು, ಹತ್ತು ಸಾಲದು. ಅಲ್ಲಿಂದ ಮಂಗಳೂರಿಗೆ ಹೋಗಬೇಕು. ಕಾಲೇಜಿಗೆ ಹೋಗುವ ವಿಚಾರವಿದೆ. ಈಗ ಒಂದು ಬಾಡಿಗೆ ಸೈಕಲ್ ತಂದು ಕೊಡು. ಸಾಯಂಕಾಲದೊಳಗೆ ಬಂದು ಬಿಡುತ್ತೇನೆ. ಮತ್ತೆ ಪುತ್ತೂರಿಗೆ ಹೋದರೆ ಸರಿ.''

"ಸರಿ" ಎಂದು ಬಾಲಕೃಷ್ಣ ಸೈಕಲ್ ತಂದುಕೊಟ್ಟ. ಅರವಿಂದ ತನ್ನ ಕಿಸೆಯೊಳಗಿನ ಕರವಸ್ತ್ರವನ್ನು ತಲೆಗೆ ಕಟ್ಟಿಕೊಂಡು ಆ ಅಂಗಡಿಯಿಂದ ಹೊರಬಿದ್ದ. ಕರವಸ್ತ್ರ ಬಿಸಿಲಿಗೂ ಆಯಿತು, ಗುರುತು ಸಿಗದಂತೆಯೂ ಆಯಿತು. ಆ ರಣ ಬಿಸಿಲಿಗೇ ಅವನು ಸ್ನಾನ, ಊಟವನ್ನೂ ಮಾಡದೆ ಊರಿನ ದಾರಿ ಹಿಡಿದು ಸಾಗಿದ.

## ೧೦ ನೆಯ ಅಧ್ಯಾಯ

ಕಾವೇರಿ ಇಷ್ಟರವರೆಗೆ ತಾನರಿಯದ ಯಾವುದೋ ಒಂದು ರೀತಿಯ ಕಾವಿನಿಂದ ಈಗ ಬಳಲಿದಳು. ಈ ಸಲ ಆನಂದರಾಯ ಮನೆಗೆ ಬಂದಂದಿ ನಿಂದ ಅವಳ ಮನಸ್ಸು ಸ್ಥಿರವಿರಲಿಲ್ಲ. ಅದು ಹೊರಗೆ ಹೋಗುತ್ತಿತ್ತು. ಎಷ್ಟು ಹಿಂದೆ ಎಳೆದರೂ ಅದು ಕೇಳುತಿದ್ದಿಲ್ಲ. ಓಡಾಡುವ ಆ ಮನಸ್ಸನ್ನು ಬಿಗಿಹಿಡಿವ ಉಪಾಯವೇ ಅವಳಿಗೆ ತಿಳಿದಿಲ್ಲ. ನಿತ್ಯ ಉಡುವ ಸೀರೆ ಬಿಚ್ಚಿ ಬೇರೊಂದನ್ನು ತೊಟ್ಟುಕೊಳ್ಳಲು ಅವಳು ಕೋಣೆಗೆ ಹೋದಳು. ಸೀರೆಯ ಗಂಟು ಸಡಿಲಿಸುವ ಕೈ ಬೆರಳುಗಳು ನಡುಗಿದುವು! ದಿನಂಪ್ರತಿ ಅವಳು

ಲಂಗಹಾಕಿಕೊಳ್ಳುವವಳಲ್ಲ! ಆದರೆ ಈ ದಿನ ಅದರ ಮೇಲೆ ಅವಳಿಗೆ ಆಸೆಯಾಗಿದೆ. ಅದರ ಲಡಿಯನ್ನು ಸ್ವಲ್ಪ ಬಿಗಿಯಾಗಿಯೇ ಕಟ್ಟಿಕೊಂಡಳು. ಒಂದು ಕುಬಸವನ್ನು ಟ್ರಂಕಿನಿಂದ ತೆಗೆದಳು. ಅದು ಇಷ್ಟವೆನಿಸಲಿಲ್ಲ. ಇದ್ದುದನ್ನು ತೆಗೆದು ಇನ್ನೊಂದನ್ನು ಧರಿಸಿದಾಗ ತನ್ನ ಮೊಲೆಕಟ್ಟನ್ನು ನೋಡಿ ತಾನೇ ನಾಚಿದಳು. ಅವನು ನೋಡುತ್ತಿರುವನೆಂಬ ಗಾಬರಿಯಿಂದ ಸೆರಗನ್ನು ಎಳೆದುಕೊಂಡಳು! ಸೀರೆಯ ಸೆರಗೂ ಆಗಾಗ ಜಾರಿತು. ಕೈಗಳು ಬೇರೆ ಬಳೆಗಳನ್ನಪೇಕ್ಷಿಸಿ ಮುಂದೆ ಚಾಚಿಕೊಂಡುವು. ತಲೆಗೂದಲಿಗೆ ಯಾವಾಗಲೂ ತೆಂಗಿನೆಣ್ಣೆ ಸವರುತಿದ್ದ ಅವಳು ಈ ದಿನ ಸುವಾಸನೆ ಎಣ್ಣೆಯನ್ನು ಪೂಸಿಕೊಂಡಳು. ಮಲೆನಾಡಿನಲ್ಲಿ ಹುಟ್ಟಿ ಬೆಳೆದ ಹುಡುಗಿ ನಗರದ ನಾರಿಯಂತೆ ಮೋರೆಗೆ "ಕ್ಯುಟಿಕ್ಯುರಾ" ಪೌಡರ್ ಲೇಪಿಸಿಕೊಂಡಳು. ಕನ್ನಡಿ ನೋಡಿದಷ್ಟು ತೃಪ್ತಿಯಿಲ್ಲ ಅವಳಿಗೆ. ತನ್ನ ಮುಖಬಿಂಬವನ್ನು ಕಂಡಾಗ ಲಲ್ಲ ಕಿರುನಗೆ ಸೂಸಿ, ಮುದ್ದಿಡುವವರಂತೆ ಸೀತ್ಕರಿಸಿ, ತನಗೆ ತಾನೇ ಅಣಕಿಸಿದಳು.

ಆನಂದರಾಯ ಹೊರಗಿರುವಾಗಲೇ ಹೀಗಾದರೆ ಅವನು ಹತ್ತಿರ ಬಂದಾಗ ಅವಳ ಅವಸ್ಥೆ ಹೇಗಾಗಿರಬೇಡ! ಅವನು ಸೈಕಲ್ ಹಿಡಿದಾಗ ಎದೆಗುಂಡಿಗೆಯ ಬಡಿತ ಹೆಚ್ಚಾಯಿತು. ಅವನ ಕೈ ಅವಳ ಕೈ ಮೈಗೆ ತಾಗಿದಾಗ ರೋಮಾಂಚ ಹೊಂದಿದಳು. ಸೈಕಲಿನಿಂದ ಅವಳು ಇಳಿದಾಗ ಅವನು ಅಪ್ಪಿಕೊಳ್ಳಲೆತ್ನಿಸಿದ. ಅವಳು ನಾಚಿ ಮೋರೆಯನ್ನು ಬೇರೆಡೆಗೆ ತಿರುಗಿಸಿದಳು. ''ಒಂದು ಗುಟ್ಟು ಹೇಳುತ್ತೇನೆ'' ಎಂದು ಮಾತನಾಡಿಸಿದಾಗ ಉತ್ತರಕೊಡಲು ಧೈರ್ಯ ಸಾಲಲಿಲ್ಲ. ಅವನ ಚೇಷ್ಟೆಯಲ್ಲಿ ತಾನು ಪಾಲುಗಾರಳಾಗದೆ ಓಡಿಬಂದಳು. ನಿಜ. ಆದರೆ ಅದರಿಂದ ಅವಳಿಗೆ ಬೇಸರವೆನಿಸಲಿಲ್ಲ. ರೋಷವನ್ನು ತಾಳಲಿಲ್ಲ. ಹೃದಯದಲ್ಲಿ ಏನೋ ಒಂದು ರೀತಿಯ ನೂತನ ಆನಂದವಾಯಿತು. ಮತ್ತು ಮುಖವು ಪ್ರಫುಲ್ಲವಾಯಿತು. ಅರಳಿದ ಮೊಗದಾವರೆಯಲ್ಲಿ ಪರಿಮಳದಂತೆ ನಗು ತೇಲಾಡಿತು.

ಕೊಟ್ಟಿಗೆಗೆ ಅವಳು ಹೋದಾಗ ಅವನು ಬಿಟ್ಟು ಹೋಗಿದ್ದ ಗಡಿಯಾರವನ್ನು ಕಂಡಳು. ಅದನ್ನು ಕೈಯಲ್ಲಿ ತೆಗೆದುಕೊಂಡು ಪರಿಕಿಸಿದಳು. ಆಗಲೂ ಅವಳ ಮೈ ನವಿರೆದ್ದಿತು. ಅದನ್ನು ಮುಷ್ಟಿಯಲ್ಲಿ ಹಿಡಿದು ಮನೆಗೆ

ಓಡಿಬಂದು ಅರವಿಂದನಿಗೆ ತೋರಿಸಿದಳು. ಆಗ ಅವನು ಆ ವಿನೋದದ ಆಟ ಹೂಡಿದ. ಅದರಿಂದಲೂ ಕಾವೇರಿಗೆ ಏನೋ ಒಂದು ಅಪರಿಮಿತ ಸಂತೋಷ! ಗಡಿಯಾರವನ್ನು ಅವಳು ತನ್ನ ಕೈಗೆ ಕಟ್ಟಿಕೊಂಡಳು. ರಾತ್ರಿ ಅದನ್ನು ತನ್ನ ಹಾಸಿಗೆಯ ಒತ್ತಿಗಿರಿಸಿದಳು. ಹಾಸಿಗೆಯ ಮೇಲೆ ಆನಂದ ರಾಯ ತನ್ನ ಒತ್ತಿಗೆ ಮಲಗಿರುವನೋ ಏನೋ ಎಂಬಂತೆ ಆ ಗಡಿಯಾರಕ್ಕೆ ಅಷ್ಟು ಸ್ಥಳ ಬಿಟ್ಟು ತಾನೊಂದು ಬದಿ ಸೇರಿದಳು. ಆಲಿಂಗಿಸುವಂತೆ ತೋಳನ್ನು ಚಾಚಿದಳು. ಅದನ್ನೇ ಉದ್ದೇಶಿಸಿ "ಗುಟ್ಟದಲ್ಲಿ ಇದನ್ನು ಕೇಳಿ ದಿರಿ, ಸ್ವಾಮಿ. ಕೇಳುವ ಸ್ಥಳ ಅದಲ್ಲ. ಯಾರಾದರೂ ನೋಡಿಯಾರೆಂದು ಬೆದರಿದೆ. ಈಗ ಒಂದೇಕೆ ಬೇಕಾದಷ್ಟು ಕೊಡುವೆ" ಎಂದು ಚುಂಬಿಸಿ ದಳು. ಅವಳ ಆ ಕೋಮಲ ತುಟಿಗಳಿಗೆ ಗಡಿಯಾರದ ಶೀತಲ ಗಾಜು ತಾಗಿದಾಗ, ಅವನ ತುಟಿ ಸ್ಪರ್ಶವಾದಂತೆ ಭಾವಿಸಿ, ಆಹ್ಲಾದಪಟ್ಟಳು. ಆ ಗಡಿಯಾರವನ್ನು ತನ್ನೆದೆಯ ಮೇಲೆ ಇರಿಸಿಕೊಂಡಳು. ಅದರ ಟಿಕ್ ಟಿಕ್ ಸದ್ದು ಅವನ ಮೆಲುಮಾತುಗಳೆಂದು ನಂಬಿ "ನನ್ನ ಮೇಲೆ ಸಿಟ್ಟಾ ಗಬಾರದು ಸ್ವಾಮಿ!" ಎಂದು ಅನುನಯದಿಂದ ಪ್ರಾರ್ಥಿಸಿದಳು. ಗಡಿ ಯಾರ ಅವಳ ಕುಬಸದೊಳಗೆ ಜಾರಿತು. ಪ್ರಥಮ ಸಲ ಆ ಲೋಹದ ತಂಪು ತಾಗಿದಾಗ ಪತಿಯ ಕರಸ್ಪರ್ಶವಾದಂತೆ ಅವಳು ರೋಮಾಂಚ ಗೊಂಡಳು. ಪತಿಯ ಕೈಗಳನ್ನು ಮೂಡುವಂತೆ ಅದನ್ನು ಸರಿಸಿದಳು. ಮುಗ್ಧೆಯಾದ ಕಾವೇರಿ ಹೀಗೆ ಮೆಲ್ಲಮೆಲ್ಲನೆ ಪ್ರೇಮಕಾಮುಗಳ ವೇದನೆಗ ಳನ್ನು ಅನುಭವಿಸಿದಳು.

ಆನಂದರಾಯ ಬೆಳಿಗ್ಗೆ ಹೊರಟು ನಿಂತಾಗ ಒಳಗೆ ನಿಲ್ಲಲು ಅವಳಿಗೂ ಶಕ್ಯವಾಗಲಿಲ್ಲ. ಅವನು ಅಂಗಳಕ್ಕೆ ಇಳಿದಾಗ ಕಿಟಕಿಯ ಒಳಗಿನಿಂದ ಹಣ ಕಿದಳು. ಅವನು ಹೆಬ್ಬಾಗಿಲು ದಾಟಿದಾಗ ಚಾವಡಿಗೆ ಬಂದಳು. ಆ ಮೇಲೆ ಮನೆಯೊಳಗಿಂದ ಓಡಿ ಬಾವಿಕಟ್ಟೆಗೆ ಬಂದು ನಿಂತಳು. ಗದ್ದೆ, ಗಿಡಮರ, ದೂರದ ಬೆಟ್ಟ ಯಾವುದೂ ಅವಳಿಗೆ ಕಾಣಿಸುತ್ತಿದ್ದಿಲ್ಲ. ಮರಗಳ ರೆಂಬೆ ಗಳಲ್ಲಿ ಕುಳಿತು ಪ್ರೇಮಗಾನ ನುತಿಸುವ ಹಕ್ಕಿಗಳ ಇಂಚರವೂ ಅವಳಿಗೆ ಕೇಳಿಸಲಿಲ್ಲ. ಅವಳ ಅಂಗಾಂಗಗಳೆಲ್ಲ ಕಣ್ಣಾಗಿ ಅವನನ್ನೇ ನೋಡುತ್ತಿದ್ದುವು. ಅವನು ತಲೆಮರೆಯಾಗಿ ಹೋದಾಗ ಅವಳ ಪ್ರಾಣವೂ ಹೋಯಿತೋ

ಏನೋ ! ಅಲ್ಲೇ ಕುಸಿದಳು. ಬಾವಿಕಟ್ಟೆ ಬಳಿ ಬೆಳೆದ ಅಡಿಕೆ ಮರದ ಸೋಗೆ ಯಿಂದ ಮಂಜಿನ ಹನಿ ಕಂಬನಿಯಂತೆ, ಕೆಳಗಿನ ಬಾಳೆಲೆಯ ಮೇಲೆ ತಟ ತಟ ಬಿದ್ದುವು.

"ಕಾಮೂ!'' ಜಲಜಮ್ಮ ಕರೆದರು.

ಕಾವೇರಿ ಎಚ್ಚರ ಹೊಂದಿದಳು. ಎರಡನೇ ಸಲ ತಾಯಿ ಕರೆದಾಗ "ಓ, ಬಂದೆ, ಬಂದೆ !'' ಎಂದು ನುಡಿದು ಒಳಗೆ ಓಡಿದಳು.

"ಗಡಿಯಾರ ಕೊಟ್ಟೆಯೋ ಇಲ್ಲವೊ ?'' ಎಂದು ತಾಯಿ ಕೇಳಿದರು.

"ಕೊಟ್ಟೆ. ಅವರು ಬೇಡವೆಂದರು.''

"ಮತ್ತೆ?"

"ನನ್ನಲ್ಲೇ ಇದೆ !''

"ನಮಗ್ಯಾಕೆ ಅದು ? ಈ ಹಳ್ಳಿ ಊರಲ್ಲಿ ಅದರಿಂದ ಏನು ಪ್ರಯೋ ಜನ ? ಗಡಿಯಾರ ಹೆಂಗಸರಿಗೆ ಯಾವ ಮಣ್ಣಿಗೆ ? ನೀನು ಮಿಟ್ರಿಸೇನು ? ಮಂಗನ ಕೈಯಲ್ಲಿ ಮಾಣಿಕ್ಯವಿದ್ದ ಹಾಗೆ ! ಇಲ್ಲಿ ಅದು ಕೆಟ್ಟರೂ ಸಮಮಾ ಡುವರಿಲ್ಲ ''

ಕಾವೇರಿ ಏನೂ ಹೇಳಲಿಲ್ಲ.

ಜಲಜಮ್ಮ ನುಡಿದರು : "ನಾಳೆ ಗಂಡನ ಮನೆಗೆ ಹೋದಮೇಲೆ ಸಹ ಅದು ಬೇಕು, ಇದು ಬೇಕು ಎಂದು ಹಠ ಮಾಡಬೇಡ. ನಿನಗೆ ಬೇಕಾ ಗಿರದ ವಸ್ತುವಿನ ಮೇಲೆ ಆಶೆಪಡಬೇಡ. ಬೇಕಾದುದನ್ನು ಬಾಯಿಬಿಟ್ಟು ಕೇಳಲೂ ಬಾರದು. ಕೇಳುವುದಾದರೂ ಯಾರನ್ನು, ಯಾವಾಗ, ಹೇಗೆ ಎಂದು ಮೊದಲು ತಿಳಿದಿರಬೇಕು. ಹೊತ್ತು ನೋಡಿ, ಪ್ರವೃತ್ತಿ ನೋಡಿ ಅನುನಯದಿಂದ. ಆಗದಿದ್ದರೆ ಜಗಳ ಮಾಡಬೇಡ. ಸಿಡುಕು ತೋರಿಸ ಬೇಡ. ಅವರು ಸಿಟ್ಟಿನಿಂದ ಏನಾದರೂ ಅಂದರೆ ಇದಿರಾಡಬಾರದು.''

ಕಾವೇರಿ ತಲೆತಗ್ಗಿಸಿಕೊಂಡೇ ಆಲಿಸಿದಳು.

"ಇಂದೋ ನಾಳೆಯೋ ನೀನು ಗಂಡನ ಬೆನ್ನ ಹಿಂದೆ ಹೋಗಬೇಕು. ನಿನ್ನ ಹಣೆಯಲ್ಲಿ ಏನೇನು ಬರೆದಿದ್ದಾನೋ ಗೊತ್ತಿಲ್ಲ. ಆದರೆ " ನೀರೊಳ ಗದ್ದು ಕ್ಷೀರದೊಳಗದ್ದು ನೀನೆ ಗತಿಯೆನಗೆ '' ಎಂದು ಪುರಂದರದಾಸರು ಹೇಳಿದಂತೆ ಸತಿಗೆ ಪತಿಯೇ ಗತಿ ! ನೀರಿನೊಳಗೆ ಮುಳುಗಿಸಿದರೆ ಅಳಬೇಡ.

ಹಾಲೆರೆದರೆ ತಲೆಯ ಮೇಲೇರಬೇಡ. ನಳನ ಹೆಂಡತಿ ದಮಯಂತಿರಬೇಕು ನೋಡು !" ಎಂದು ಅವರು ಹೇಳಿದರು.

ಜಲಜಮ್ಮ ಇಂದು ಈ ರೀಯ ಹಿತವಚನಗಳನ್ನು ನುಡಿದುದು ಹೊಸ ದೇನೂ ಅಲ್ಲ. ಕಾವೇರಿ ಸಣ್ಣವಳಿದ್ದಂದಿನಿಂದಲೂ ಹಾಗೆಯೇ. ಮಕ್ಕಳು ಸ್ಲೇಟಿನಲ್ಲಿ ಅಕ್ಷರಗಳ ಮೇಲೆ ಕಡ್ಡಿಯಿಂದ ತಿದ್ದುವಂತೆ ಕಾವೇರಿಯ ನಡೆ ನುಡಿಗಳನ್ನು ಅವರು ತಿದ್ದಿಕೊಂಡು ಬಂದಿರುವರು. ಅನುಕೂಲಸ್ಥರೆಂದು ಅಸಡ್ಡೆ ಮಾಡಿಲ್ಲ. ಒಬ್ಬಳೇ ಮಗಳೆಂದು ಮೂಗು ಚುಚ್ಚದೆ ಬಿಟ್ಟಿಲ್ಲ. ಅವಳು ಕೈಕಾಲುಗಳಲ್ಲಿ ನಡೆಯುತಿದ್ದಾಗಲೇ ಅಡಿಗೆ ಮನೆ ಕಂಡಿರುವಳು. "ಆ ಕಡೆಗೋಲು ತಾ ! ಆ ಸಟ್ಟುಗ ತಾ !" ಎಂದು ಜಲಜಮ್ಮ ತೋರಿಸು ತಿದ್ದರು. ಕಾವೇರಿ ಅಂಬೆಗಾಲಿಕ್ಕುತ್ತ ತಂದು ಕೊಟ್ಟರೆ ಅವಳನ್ನು ಬರ ಸೆಳೆದುಕೊಂಡು ಆ ಚಂದನದ ಬೊಂಬೆಯನ್ನು ಮುದ್ದಿಡುತಿದ್ದರು. ಕೈ ಬಿಟ್ಟು ಎದ್ದು ಬಿದ್ದು ನಡೆಯಲೆತ್ನಿಸಿದಾಗ ಹೊರಗೆ ಹೋಗಿ ಅಣ್ಣ ಮತ್ತು ಅಪ್ಪಯ್ಯನನ್ನು ಕಾಫಿ ಊಟಗಳಿಗೆ ಕರೆದು ತರುವ ದೂತಿ ಕಾರ್ಯ ಅವ ಳದು. ಭೂದೇವಿಯ ದರ್ಶನ ಎಲ್ಲರಿಗೂ ಎಲ್ಲ ಕಾಲಕ್ಕೂ ದೊರೆಯಬಾರ ದೆಂದು ಜಲಜಮ್ಮ ಹರುಕು ಸೀರೆಯ ಒಂದು ತುಂಡನ್ನು ಅವಳ ಸೊಂಟಕ್ಕೆ ಸುತ್ತಿದರು. ಇದು ದಿನನಿತ್ಯದ ಮನೆಯುಡುಗೆ! ಯಾರಾದರೂ ಬಂದಾಗ ಅಂಚಿನ ಲಂಗ ಧರಿಸುತಿದ್ದಳು. ಗಂಡು ಹುಡುಗರು ಲಂಗೋಟಿ ಕಟ್ಟದ ವಯಸ್ಸಿಗೆ ಅವಳು ಸಣ್ಣ ಸೀರೆ ಕುಬಸ ತೊಟ್ಟಳು. ಗಂಡಸರು ಏಳುವ ಮೊದಲೆದ್ದು ಬಿಡುತಿದ್ದಳು. ಬಂದೊಂದು ದಿನ ಅಕಸ್ಮಾತ್ ತಡವಾದರೆ ಜಲಜಮ್ಮ ಬಂದು "ದಬಡೆ ! ಕೈನೆ ! ಏಳು !" ಎಂದು ಎಬ್ಬಿಸಲು ಮರೆ ಯುತಿದ್ದಿಲ್ಲ.

ಕಾವೇರಿ ಮಾಡುವ ಕೆಲಸಗಳೂ ಇವೆ. ಜಲಜಮ್ಮ ಮನೆ ಕಸ ಗುಡಿಸಿದಾಗ ಅವಳೂ ಒಂದೆರಡು ಕೋಣೆಗಳನ್ನು ಗುಡಿಸುವಳು. ಅವರು ಕಾಫಿ, ಟಿಫಿನ್ ಸಿದ್ಧಗೊಳಿಸಿದಾಗ ಅವಳು ಕವುಳಿಗೆ ಲೋಟಗಳಿಗೆ ಹುಣಸೆ ಹಣ್ಣು ಹಚ್ಚಿ, ಬೂದಿ ತಿಕ್ಕಿ, ತೊಳೆದು ತರುವಳು. ಕಾಫಿಗೆ ಮಣೆಹಾಕಿ, ಬಾಳೆಲೆಯ ಸೀಳುಗಳನ್ನು ಆರಿಸಿ, ಒರಸಿ, ತಂದಿರಿಸುವವಳೂ ಅವಳೇ ! ಗಂಡಸರ ಬಾಯಾರಿಕೆ ತೀರಿದ ಬಳಿಕ ಅವನ್ನೆಲ್ಲ ತೆಗೆದು ಶುದ್ಧ ಮಾಡ

ಬೇಕು. ಆ ಮೇಲೆ ತಾಯಿ ಮಗಳು ಒಳಗೆ ಬಾಯಾಡಿಸುವರು. ಬಿಸಿ ನೀರಿಗೆ ಬೆಂಕಿ ಹೊತ್ತಿಸಲು ಜಲಜಮ್ಮ ಹೋದಾಗ ಕಾವೇರಿ ಸವುಟಿನಲ್ಲಿ ಕೆಂಡ ತೆಗೆದುಕೊಂಡು ಹೋದಳು. ಅವರು ಬಾವಿಕಟ್ಟೆಯಲ್ಲಿ ಮುಸುರೆ ತೊಳೆದಾಗ ಅವಳು ದೇವರ ಪೂಜೆಯ ಪಾತ್ರೆಗಳನ್ನು ತೊಳೆದಳು. ಜಲ ಜಮ್ಮನ ಕೈಗೆ ನೀರೆರೆವಳು ಅವಳೇ ! ಅವರ ಬೆನ್ನಹಿಂದೆ ಬಂದು ಸಣ್ಣಸಣ್ಣ ಪಾತ್ರೆಗಳನ್ನು ಓರಣವಾಗಿ ಇಡುವುದೂ ಅವಳಿಗೆ ತಿಳಿದಿದೆ. ಒದ್ದೆಬಟ್ಟೆಯಿಂದ ಮನೆಯ ನೆಲವನ್ನೆಲ್ಲ ಒರಸುವ ಕೆಲಸದಲ್ಲೂ ತಾಯಿಗೆ ಅವಳು ನೆರವಾಗು ತ್ತಾಳೆ. ಇಷ್ಟೆಲ್ಲ ಕೆಲಸವಾದಾಗ ಅಡಿಗೆಗೆ ಜಲಜಮ್ಮನವರಿಗೆ ಹೊತ್ತಾಗಿ ಬಿಡುತ್ತದೆ.

ಮೊದಮೊದಲು ಕಾವೇರಿಗೆ ಈ ಅಡಿಗೆಯ ಕೆಲಸ ಬೀಳುತಿದ್ದಿಲ್ಲ. ಅಡಿಗೆಗೆಲಸದಲ್ಲಿ ತಾಯಿಗೆ ಅವಳು ನೆರವಾದರೆ ಸರಿ. ಹರಿವೆ, ತಿಮರೆ ತೊಳೆದು ತಂದ ಮೇಲೆ ಹುಳ ಹುಪ್ಪಡಿ ನೋಡಿ ಈಳಿಗೆಯಲ್ಲಿ ಜಲಜಮ್ಮನ ವರ ಮುಂದೆ ಅವಳು ಕೊಯ್ದು ಕೊಡಬೇಕು. ಅಳಸಂಡೆ, ಬೇಂಡೆಗಳನ್ನು ಕೊಯ್ಯುವ ರೀತಿ ಬೇರೆ. ಗೊಜ್ಜು, ಪಲ್ಯ, ಹುಳಿಗಳಿಗೆ ಹಸುರುವಾಣಿ ಕೊಯ್ಯುವ ಕ್ರಮವೂ ಒಂದೊಂದು ವಿಧ. "ಇನ್ನೂ ಸಣ್ಣಗೆ ಕ್ಕೊ ! ಹೋಳು ದೊಡ್ಡದಾಯ್ತು. ಕೈ ಜಾಗ್ರತೆ !" ಎಂದು ಜಲಜಮ್ಮ ಆಗಾಗ ಹೇಳಿ ಕೊಡುತ್ತಿದ್ದರು. ಅದನ್ನು ತೊಳೆದು ಬೇಯಿಸಲಿಟ್ಟಾಗ "ಇಷ್ಟು ಉಪ್ಪು ತಾ ! ಹುಣಸೆ ಹಣ್ಣು ಎಲ್ಲಿದೆ ನೋಡು !" ಎಂದು ಅವಳಿಂದ ತರಿ ಸುತಿದ್ದರು. ಅವಳು ತಂದಾಗ "ಇಷ್ಟು ಪಲ್ಯಕ್ಕೆ ಅಷ್ಟು ಉಪ್ಪು ಬೇಡ. ಹುಣಸೆ ಹಣ್ಣು ಕಡಿಮೆಯಾಯಿತು. ಹಾಗಲಕಾಯಿಗೆ ಬೆಲ್ಲ ಬಹಳ ಬೇಕು. ಇಲ್ಲದಿದ್ದರೆ ಕಹಿ ವಿಷವಾಗುತ್ತದೆ" ಎಂದು ಕಲಿಸಿದರು. ಹೀಗೆ ಯಾವ ಮೇಲೋಗರಕ್ಕೆ ಯಾವ ಪದಾರ್ಥ, ಎಷ್ಟು ಎಂದು ಕಾವೇರಿ ಗ್ರಹಿಸಿಕೊಂಡಳು. ಒಬ್ಬರಿಗೆ, ಇಬ್ಬರಿಗೆ, ಹತ್ತು ಜನರಿಗೆ ಎಷ್ಟು ಅಡಿಗೆ ಮಾಡಬಹುದೆಂಬ ಅಂದಾಜನ್ನರಿತಳು. ಮಧ್ಯಾಹ್ನ ಮನುಷ್ಯ ಹಸಿದಿರು ತ್ತಾನೆ. ಆದರೆ ರಾತ್ರಿ ಊಟಕ್ಕೆ ಅಷ್ಟು ಅವಶ್ಯವಿಲ್ಲವೆಂದು ಕಂಡುಕೊಂಡಳು. ಅಣ್ಣ, ತಂದೆ, ತಾಯಿಯರ ರಸ ರುಚಿಗಳೂ ಅವಳಿಗೆ ಮನದಟ್ಟಾಯಿತು. ಹತ್ತು ಹನ್ನೆರಡು ದಾಟಿದ ಮೇಲೆ ಅವಳೂ ತಾಯಿಯೊಂದಿಗೆ ಸ್ನಾನತೀರಿಸಿ

ಅಡಿಗೆಗೆಲಸದಲ್ಲಿ ತೊಡಗಿದಳು. ಆಗ ಪರಮಾನ್ನ, ಪಕ್ವಾನ್ನ, ಭಕ್ಷ ಭೋಜ್ಯ ಗಳನ್ನು ತಯಾರಿಸುವುದನ್ನು ಜಲಜಮ್ಮ ಒಂದೊಂದಾಗಿ ಕಲಿಸಿದರು.

ಜಲಜಮ್ಮ ಹುಷಾರಾಗಿದ್ದಾಗ ಮಗಳಿಂದ ಎಲ್ಲ ಅಡಿಗೆಯನ್ನು ಮಾಡಿಸುತ್ತಿದ್ದಿಲ್ಲ. ತರಕಾರಿ ಕೊಯ್ಯುವ, ತೆಂಗಿನಕಾಯಿ ಕಡೆವ, ಹಾಲು ಕುದಿಸುವ, ಒಗ್ಗರಣೆಕೊಡುವ, ಚಿಲ್ಲರೆ ಕೆಲಸಗಳನ್ನು ಅವಳಿಂದ ಮಾಡಿಸುತಿದ್ದರು. ಏಕೆಂದರೆ ಅಪ್ಪಯ್ಯ ಕರೆದಾಗ ಅವಳು ಆಗಾಗ ಓಡಿ ಹೋಗಬೇಕಾಗುತಿತ್ತು. ಕೆಲಸದ ಆಳುಗಳಿಗೆ ಬಾಯಾರಿಕೆಗೆ ನೀರು, ಕಷಾಯ ಅಥವಾ ಮಜ್ಜಿಗೆ ನೀರು ಎರೆಯಬೇಕಾಗುತಿತ್ತು. ಹೀಗಾಗಿ ಅವಳು ನಡು ನಡುವೆ ಅಡಿಗೆಮನೆಯಿಂದ ಹೋಗುತಿದ್ದಳು. ಆದರೆ ಜಲಜಮ್ಮನಿಗೆ ಜ್ವರ ಬಂದಾಗ ಅಥವಾ ತಿಂಗಳಿನ ರಜೆ ದೊರೆತಾಗ ಕಾವೇರಿಯದೇ ಸ್ವಯಂಪಾಕ! ಆಗ ಗೋಪಾಲರಾಯರು ಗಂಟಲು ಕೆರೆದು "ಹೆ! ಹೆ! ಫಸ್ಟ್‌ಕ್ಲಾಸ್! ಬದನೆಕಾಯಿ ಪಲ್ಯ ಒಳ್ಳೆ ಹೆರ್ದ್! ಮಾವಿನಕಾಯಿ ಗೊಜ್ಜು ಒಂದರಿಂದಲೇ ಸೇರು ಅನ್ನ ಕತ್ತರಿಸಬಹುದು. ಸವುತೆ ಹುಳಿಯಂತೂ ಗಮಗಮಿಸುತ್ತದೆ" ಎಂದು ಹೊರಗೆ ಕುಳಿತಿದ್ದ ಜಲಜಮ್ಮನವರಿಗೆ ಕೇಳಿಸುವ ಹಾಗೆ ಹೊಗಳುವುದುಂಟು.

ಆಗ ಜಲಜಮ್ಮ ಕಿಟಕಿಯ ಆಚೆ ಬಂದು "ಎಲ್ಲ ಸುಳ್ಳು,ಬಿಡಿ. ಮಗಳು ಮಾಡಿದ್ದಾಳೆಂತ ಅಷ್ಟು, ನಿಮಗೆ!" ಎಂದನ್ನುವರು.

"ಏ, ಇವಳೇ! ಹಾಗಲ್ಲ. ನಿನಗಿಂತಲೂ ಇವಳ ಅಡಿಗೆ ಹೆಚ್ಚು ರುಚಿಯಾಗಿದೆ. ಊಟಮಾಡಿ ನೋಡು!"

"ಹಾಗಿದ್ದರೆ ದಿನಂಪ್ರತಿ ಅವಳೇ ಮಾಡಲಿ. ನಾನು ಮಾಡಿದ ಅಡಿಗೆ ನಿಮಗೆ ರುಚಿಸದಿದ್ದರೆ!"

"ಹಂ! ಹಂ! ಅಕೋ ಅದು ಮತ್ಸರಬುದ್ಧಿ!"

"ಇದರಲ್ಲಿ ಮತ್ಸರವೇನು ಬಂತು! ಅದೂ ಮಗಳ ಮೇಲೆ! ಅವಳು ಅಡಿಗೆಗೆ ತೊಡಗಿದರೆ ನನಗೆ ಸ್ವಲ್ಪ ವಿರಾಮ ದೊರೆಯುತ್ತದೆ. ಅಲ್ಲದೆ ನಾನು ತಯಾರಿಸಿದುದನ್ನು ತಿಂದುಂಡು ನಿಮಗೂ ನಾಲಿಗೆ ಕೆಟ್ಟಿದೆ. ನಾನು ಬೇಯಿಸಿದುದನ್ನು ನಾನೇ ತಿನ್ನುವದೆಂದರೆ ನನಗೂ ಬೇಸರ! ನನಗೂ ರುಚಿಯನ್ನಿಸುವುದಿಲ್ಲ. ಅವಳಿಗೆ ಉತ್ಸಾಹವಿದೆ; ಮಾಡಲಿ!"

"ಏ, ಎಷ್ಟು ಕಾಲ ಮಾಡುತ್ತಾಳೇನೇ, ಇನ್ನು? ಯಾವನಾದರೊಬ್ಬ ತಟ್ಟೇರಾಯ ಕೊರಳಿಗೆ ಕರಿಮಣಿ ಕಟ್ಟಿದರೆ ನಮ್ಮನ್ನು ಬಿಟ್ಟುಕೊಟ್ಟು ಹೊರಟಳೇ."

ಅದನ್ನು ಕೇಳಿ ಜಲಮ್ಮನಿಗೆ ನಗು ಬರುತ್ತದೆ. "ತಟ್ಟೇರಾಯ ಉಡುಪಿಯವನಂತೆ! ಈ ಬಂಗಾಡಿಗೆ ಅವನು ಯಾಕೆ ಬಂದಾನು? ಅಲ್ಲಿ ಅವನಿಗಾಗುವ ಹುಡುಗಿಯರೇ ಇಲ್ಲವೇನು?''

"ಯಾರ್ಯಾರ ಋಣಾನುಬಂಧ ಎಲ್ಲೆಲ್ಲಿದೆಯೆಂದು ಯಾರಿಗೆ ಗೊತ್ತು? ತಟ್ಟೇರಾಯ ಅಲ್ಲದಿದ್ದರೆ ಗುಮ್ಮಟರಾಯ!"

"ತಟ್ಟೇರಾಯ ಅಲ್ಲ ಬಿಡಿ, ಗುಮ್ಮಟರಾಯ! ಇಲ್ಲೇ ಹತ್ತಿರದಲ್ಲಿದ್ದಾನೆ, ವೇಣೂರಿನಲ್ಲಿ! ಅವನು ತಪ್ಪಿದರೆ ಕಾರ್ಕಳದವನಿದ್ದಾನೆ."

ಗುಮ್ಮಟರಾಯನ ಹೆಸರು ಕೇಳಿ ಕಾವೇರಿಗೆ ಸಿಟ್ಟು ಬರುತ್ತದೆ. ತನ್ನನ್ನೇ ಅಣಕಿಸುತ್ತಾರೆಂದು ಅವಳಿಗೆ ಗೊತ್ತಾಗುತ್ತದೆ. ಗಂಡನ ಮಾತು ಬಂದಾಗ ಗುಮ್ಮಟರಾಯನ ಹೆಸರು ಹೇಳುವುದು ಈ ನಾಡಿನಲ್ಲಿ ಲೋಕರೂಢಿಯಾಗಿದೆ. ಸಣ್ಣವರಿಗೂ ಅವನೇ ಗಂಡ! ದೊಡ್ಡ ಹೆಣ್ಣುಮಕ್ಕಳಿಗೂ ಅವನೇ! ಸಣ್ಣವರಿದ್ದಾಗ ತಮಾಷೆಗೆ, ದೊಡ್ಡವರಾದಾಗ ಬೇಸರದಿಂದ ಹಾಗನ್ನುವರು. ವರಾನ್ವೇಷಣೆಯಿಂದ ಬೇಸತ್ತ ತಾಯಿ ತಂದೆ "ಇನ್ನು ಎಲ್ಲಿ ಹುಡುಕಲಿ? ಅವಳಿಗೆ ಗುಮ್ಮಟರಾಯನೇ ಗತಿ!" ಎಂದನ್ನುವುದುಂಟು. ಹುಡುಗಿ ಬಲು ಬೆಳೆದವಳಿದ್ದರೆ, ಕುರೂಪಿಯಾಗಿದ್ದರೆ ನೆಂಟರಿಷ್ಟರು ನೆರೆಹೊರೆಯವರು "ಆ ಹುಡುಗಿಯನ್ನು ಯಾರು ಲಗ್ನವಾಗಬೇಕು? ಅವಳಿಗೆ ಗುಮ್ಮಟರಾಯನೇ ಗತಿ!" ಎಂದನ್ನುವರು. ಆ ಮಾತಿನ ವ್ಯಂಗ್ಯಾರ್ಥ ಸೀರೆ ಧರಿಸಲು ಕಲಿತ ಎಲ್ಲ ಬಾಲೆಯರು ಬಲ್ಲರು. ಮತ್ತು ಆಗ ಅವರು ಸಿಡಿಮಿಡಿಗೊಳ್ಳುವರು. ಕಾವೇರಿ ಈ ಸ್ತ್ರೀ ಸ್ವಭಾವಕ್ಕೆ ಅಪವಾದವಾಗಿಲ್ಲ. ಆದುದರಿಂದ ಅವಳು ತಾಯಿಯ ಕಡೆ ಹೊರಳಿ "ಅಮ್ಮಾ! ನಿನಗೆ ಬೇಡ ನನ್ನ ಸುದ್ದಿ'' ಎಂದು ಮುನಿಸು ತೋರಿಸುವಳು. ಅದು ಕೋಪಾತಿಶಯದ ಮಾತಲ್ಲ. ಯಾರೂ ಅದರಿಂದ ಕ್ರೋಧ ಸಂತಪ್ತರಾಗುವುದೂ ಇಲ್ಲ. ಆಡಿದ ಮಾತು ಗಾಳಿಯಲ್ಲಿ ಹಾರಿತು. ಮತ್ತೊಂದು ಕ್ಷಣಕ್ಕೆ ಅದು ಯಾರ ಸ್ಮರಣೆಯಲ್ಲೂ ಉಳಿಯುವದಿಲ್ಲ.

ಆದರೆ ಆನಂದರಾಯನನ್ನು ಬೀಳ್ಕೊಟ್ಟು ಬಂದ ಈ ದಿನ ಊಟಕ್ಕೆ ಕುಳಿತಾಗ ಗೋಪಾಲರಾಯರಿಗೆ ಹಿಂದಿನ ಆ ರಸನಿಮಿಷಗಳು ನೆನಪಿಗೆ ಬಂದುವು. "ಓ, ರಾಣೀ ಸಾಹೇಬ್!'' ಎಂದು ಅವರು ಹೆಂಡತಿಯನ್ನು ಕರೆದು "ನಾನು ಹಿಂದೆ ಹೇಳಿದ್ದ ಮಾತು ಈಗ ಸತ್ಯವಾಯಿತೋ ಇಲ್ಲವೋ ನೋಡೀಗ!'' ಎಂದು ಹೇಳಿದರು.

ಬಡಿಸುವ ಜಲಜಮ್ಮ ನಗುತ್ತಲೇ ನುಡಿದರು: "ಹೌದು, ನೀವು ಹೇಳಿದ್ದೆಲ್ಲ ವೇದವಾಕ್ಯವೇ! ನೀವು ಸಾಕ್ಷಾತ್ ಪರಬ್ರಹ್ಮ!''

"ನಂಬದಿದ್ದರೆ ಬಿಡು!''

"ನಂಬುವದಿಲ್ಲವೆಂದು ನಾನೆಲ್ಲಿ ಹೇಳಿದೆ? ಆದರೆ ಯಾವುದನ್ನು ಹೇಳಿ! ಗಾಳಿಯನ್ನು ನಂಬಲಿಕ್ಕಾಗುತ್ತದೇನು?"

"ಹಾಗೆ ಬಾ, ಮಾವನ ಮಗಳೆ! ದಾರಿಗೆ ಬಾ. ಹಿಂದೆ ನೀನು ನಮ್ಮ ಮಗಳಿಗೆ ಏನನ್ನುತ್ತಿದ್ದೆ?"

"ಏನನ್ನುತಿದ್ದೆ?"

"ಓಹೋ! ಎಲ್ಲ ಮರೆತು ಹೋಯಿತೇನು? "ನಿನಗೆ ಗುಮ್ಮಟರಾಯನೇ ಗತಿ, ಪತಿ'' ಎಂದು ಉಮಾಸಹಸ್ರ ಸ್ತೋತ್ರ ಸುರಿಸುತಿದ್ದಿಲ್ಲ?''

"ಹೇಳುತಿದ್ದೆ! ನೀವು ತಟ್ಟೀರಾಯ ಎಂದು ಸದಾ ಜಪ ಮಾಡುತಿದ್ದಿರಲ್ಲ!''

"ಹಾಂ! ನಿನಗೆ ನೆನಪಿದೆ! ಈಗ ತಟ್ಟೀರಾಯ ಬಂದನೋ, ಗುಮ್ಮಟರಾಯನೋ! ಋಣಾನುಬಂಧ ಹೇಗಿದೆ, ನೋಡು!''

ತಟ್ಟೀರಾಯನೆಂದರೆ ತಟ್ಟಿಯಿಂದ ಕಟ್ಟಿದ ಒಂದು ಗೊಂಬೆ. ಅದರ ಆಕೃತಿ ದೊಡ್ಡದು. ತಟ್ಟಿಯ ಮೇಲೆ ಬಿಳೀ ಅಂಗಿ ತೊಡಿಸುವರು. ಬೊಂಬೆಯ ಎಡಗೈಯಲ್ಲಿ ಢಾಲು ಮತ್ತು ಬಲಗೈಯಲ್ಲಿ ಕತ್ತಿ. ಉಡುಪಿಯಲ್ಲಿ ಪರ್ಯಾಯದುತ್ಸವ ಕಾಲಕ್ಕೆ ಪರ್ಯಾಯ ಸ್ವಾಮಿಗಳ ಮಠದ ಮುಂದೆ ಈ ಗೊಂಬೆಯನ್ನು ನಿಲ್ಲಿಸುತ್ತಾರೆ. ಕರಾವಳಿಯಲ್ಲಿ ವರನ ಮಾತು ಬಂದಾಗ ತಟ್ಟೀರಾಯನ ಹೆಸರು ಹೇಳುವುದು ಸಂಪ್ರದಾಯ. ಆಗ 'ಗುಮ್ಮಟರಾಯ' ಎಂದಷ್ಟೇ ಮುನಿಸು ಕರಾವಳಿಯ ಕನ್ನೆಯರಿಗುಂಟಾಗುತ್ತದೆ! ಮಲೆನಾಡಿನ ಜನರಿಗೆ ತಮ್ಮ ಹುಡುಗಿಯರನ್ನು ಕರಾವಳಿಗೆ ಕೊಡುವ ಆಶೆ. ಅಲ್ಲಿ ಮಲೆ

ಜ್ವರವಿಲ್ಲ. ಅಲ್ಲಿಯ ಜನ ಚೆಲುವರೂ ಹೌದು! ಅವರ ಸ್ವಭಾವವೂ ಮೃದು. ಬಡವರಾದರೂ ಹುಡುಗಿಯರನ್ನು ಕಾಡಿಸದೆ ಸುಖಪಡಿಸುತ್ತಾರೆ. ಆದುದರಿಂದ ಕರಾವಳಿ ಗಂಡನಿಗೆ ತಟ್ಟೇರಾಯನೆಂಬ ಗೂಡಾರ್ಥವನ್ನಿಟ್ಟು ಹಾಗೆ ಉಪಯೋಗಿಸುವರು. ಅದನ್ನು ಗ್ರಹಿಸಿದ ಜಲಜಮ್ಮನವರು "ಆಗಲಿ ಮಹಾರಾಯರೇ, ನಿಮ್ಮ ಮಾತೇ ಫಲಿಸಿತನ್ನಿ" ಎಂದರು.

ಈ ಸರಸೋಕ್ತಿಯಲ್ಲಿ ಮಗ್ನರಾದ ಗೋಪಾಲರಾಯರು "ಹೊ! ಹೊ! ಹೊ!" ಎಂದು ನಗುತಿದ್ದುದು ಮನೆಯ ಹೊರಗೂ ಕೇಳಿಸುವಂತಾಯಿತು. ಆ ಗದ್ದಲದಲ್ಲಿ ಹೊರಗೆ ಅರವಿಂದ ಬಂದ ಕಾಲ ಹೆಜ್ಜೆಯ ಸಪ್ಪಳ ಕೇಳಿಸಲಿಲ್ಲ. ಅವನು ಬಾಣದಂತೆ ಒಳಗೆ ಪ್ರವೇಶಿಸಿದಾಗ, ಗೋಪಾಲರಾಯರ ನಗು ತಕ್ಷಣ ನಿಂತಿತು. ಅವನ ಕೆದರಿದ ಕೂದಲು, ಕೆಂಪಗಾದ ಮೋರೆ, ಇಳಿವ ಬೆವರು, ಧೂಳು ಮಿಶ್ರಿತ ಲುಂಗಿ, ಒಂದು ರೀತಿಯ ಭೀಕರತೆಯನ್ನು ತೋರ್ಪಡಿಸಿತು.

ಗೋಪಾಲರಾಯರು ವಿಸ್ಮಿತರಾಗಿ ಕೇಳಿದರು: "ಅರವಿಂದ! ಏನು ಬಂದೆ? ಏನಾಯಿತು?"

"ಏನೂ ಇಲ್ಲ! ಏನೂ ಇಲ್ಲ!" ಎಂದವನು ಮತ್ತೆ ಹೊರಗೆ ಹೋಗಿಬಿಟ್ಟ.

ಗೋಪಾಲರಾಯರು ನಂಬಲಿಲ್ಲ. "ಪರೀಕ್ಷೆಯಲ್ಲಿ ಹುಡುಗ ಫೈಲಾಗಿರುವನೋ ಏನೋ?" ಎಂದು ಗೊಣಗಿ ಬೇಗನೆದ್ದು ಕೈ ತೊಳೆದುಕೊಂಡು ಹೊರ ಚಾವಡಿಗೆ ಬಂದು "ಏನೋ! ನಿನ್ನ ರಿಜಲ್ಟ ಏಂತೇನು? ಬೆಳ್ತಂಗಡಿಗೆ ಹೋದವನು ಯಾಕೆ ವಾಪಸು ಬಂದೆ?" ಎಂದು ಅನುನಯದಿಂದ ಕೇಳಿದರು.

"ರಿಸಲ್ಟ ಗೊತ್ತಾಗಿಲ್ಲ. ನಾನು ಪುತ್ತೂರಿಗೆ ಹೋಗಲಿಲ್ಲ. ಬೆಳ್ತಂಗಡಿಯಿಂದಲೇ ಬಂದೆ. ನಮ್ಮ ಭಾವಯ್ಯನ ಇತಿಶ್ರೀ ಆಯಿತು."

"ಅಂದರೆ?"

"ಅವರ ಆಸ್ಪತ್ರೆಯಲ್ಲಿ ಒಬ್ಬ ಕಂಪೌಂಡರನಿದ್ದನಲ್ಲ! ಭಾವನ ಸವಾರಿ ಇತ್ತ ಬಂದಾಗ ಅತ್ತ ಅವನು ಇದ್ದುಬಿದ್ದುದನ್ನೆಲ್ಲ ದೋಚಿಕೊಂಡು ಫರಾರಿಯಾದ!"

"ರಾಮಕೃಷ್ಣ!" ಎಂದು ಗೋಪಾಲರಾಯರು ಹಣೆ ಬಡೆದುಕೊಂಡು

"ಉದ್ಧಾರವಾಯಿತು! ಉದ್ಧಾರವಾಯಿತು!" ಎಂದೂ ಉದ್ಗರಿಸಿದರು.

ಅರವಿಂದ ದನಿ ಇಳಿಸಿ ಅತ್ತಿತ್ತ ಹೊರಳಿ ನೋಡಿ ಎಲ್ಲವನ್ನೂ ಹೇಳಿದ. "ಬೆಳ್ತಂಗಡಿಯಲ್ಲಿ ಕಿವಿದೆರೆದು ತಿರುಗುವಹಾಗಿಲ್ಲ. ಎಲ್ಲರ ಬಾಯಲ್ಲೂ ಇದೇ ಮಾತು!" ಎಂದು ಮುಗಿಸಿದ.

"ಇದು ಏನು ಕಥೆ ಅರವಿಂದ ? ಏನು ?" ಎಂದು ಅವನು ಒಳಗೆ ಬಂದಾಗ ತಾಯಿಯು ದೀನವಾಣಿಯಿಂದ ಕೇಳಿದರು. ಅರವಿಂದ ಬಾಯ್ತೆರೆದ. ಆದರೆ ಕಾವೇರಿ ಅಲ್ಲಿದ್ದುದರಿಂದ ಅವಳ ಕಡೆ ಹೊರಳಿ ನೋಡಿದ. ಆ ನೋಟ ಮತ್ತು ಅವನ ಕಂದಿದ ಮುಖ ಕಂಡು ಕಾವೇರಿ ಗಾಬರಿಯಾದಳು. ಏನೋ ವಿಶೇಷವಿದೆ, ಅದು ದುಃಖದ ವಾರ್ತೆಯೇ ಇರಬೇಕು. ಆದುದರಿಂದಲೇ ಅರವಿಂದ ಮರಳಿರುವನು. ಅವನು ಪರೀಕ್ಷೆಯಲ್ಲಿ ತೇರ್ಗಡೆ ಹೊಂದದ ವಿಷಯವಲ್ಲ. ಹಾಗಿದ್ದರೆ ಅವನು ದುಃಖಿಸುತಿದ್ದ. ತಂದೆ ಕೂಡ ಕೇಳಿ ತುಂಬ ವ್ಯಾಕುಲಪಟ್ಟಂತೆ ತೋರುತ್ತದೆ. ನನ್ನೆದುರು ಹೇಳಲಾರದ ಸುದ್ದಿ ನನಗೆ ಸಂಬಂಧಿಸಿರಬೇಕು. ಅದು ಏನು? ಎಂದು ಅವಳು ಚಿಂತಾತುರಳಾದಳು. ಬೆಳಿಗ್ಗೆ ತನ್ನ ಗಂಡ ಸೈಕಲ್ ಮೇಲೆ ಬೆಳ್ತಂಗಡಿಗೆ ಹೋದರು. ದಾರಿಮಧ್ಯೆ ಬಿದ್ದುಬಿಟ್ಟರೇ ? ಕೈ ಕಾಲುಗಳನ್ನು ಮುರಿದುಕೊಂಡರೇ ? ಅಥವಾ ಮತ್ತೇನಾದರೂ ಆಯಿತೇ ? ಎಂದೂ ಕಾವೇರಿಯ ತಲೆಯಲ್ಲಿ ಯೋಚನಾ ತರಂಗಗಳೆದ್ದುವು. ತಾನು ಸ್ವಲ್ಪ ಮರೆಯಾದರೆ ಅರವಿಂದ ತಾಯಿಗೆ ಹೇಳದೇ ಇರಲಾರನೆಂದು ಭಾವಿಸಿ ಅಲ್ಲಿಂದ ಹೊರಟಳು. ಹೊಸ್ತಿಲು ದಾಟಿ ಅವರಿಗೆ ಕಾಣಿಸದಂತೆ ಅಲ್ಲಿ ನಿಂತುಕೊಂಡಳು. ಅವಳು ಊಹಿಸಿದಂತೆಯೇ ಆಯಿತು. ಅರವಿಂದ ತಾಯಿ ಮುಂದೆ ಕುಳಿತು ಗುಸುಗುಟ್ಟಿದ. ಭಾವ, ಸೂಳೆ, ನಾರಾಯಣ, ತಮ್ಮ, ಆಸ್ಪತ್ರೆ, ಕಳವು, ಓಡಿಹೋದ, ಒಳ್ಳೆ ಮನುಷ್ಯನಲ್ಲಮ್ಮ, ಎಂದು ಅವನು ಆಡಿದ ಅನೇಕ ಶಬ್ದಗಳು ಕಿವಿಗೆ ಮುಟ್ಟಿದುವು. ಒಂದೊಂದು ಶಬ್ದ ಒಂದೊಂದು ಸೂಜಿಯಂತೆ ಅವಳ ಹೃಯವನ್ನು ಚುಚ್ಚಿತು. ಕಾವೇರಿ ತನ್ನ ಸೆರಗಿನ ತುದಿಯನ್ನು ಎಳೆದು ಬಾಯಿಯೊಳಗೆ ತುರುಕಿಸಿ ಕೊಂಡಳು. "ಅವಳ ಪ್ರಾರಬ್ಧ ಕರ್ಮ, ಮಗನೇ! ಯಾರೇನು ಮಾಡುವವರು ? ಇನ್ನು ಏನೇನು ದುಃಖ ಅನುಭವಿಸಲಿದೆಯೋ, ದೇವರೇ ಬಲ್ಲ!" ಎಂದು ತಾಯಿ ಸ್ವಲ್ಪ ಗಟ್ಟಿಯಾಗಿಯೇ ಹೇಳಿ

ಅಳತೊಡಗಿದುದನ್ನೂ ಅವಳು ಕೇಳಿದಳು.

ಕಾವೇರಿ ಬಾಯಿಯನ್ನು ಬಿಗಿ ಹಿಡಿದು ತುದಿಗಾಲಿನಿಂದ ತನ್ನ ಕೋಣೆಗೆ ಹೋಗಿ ಬಾಗಿಲಿಕ್ಕಿದಳು. ಆ ಮೇಲೆ ನಿಲ್ಲಲೂ ಅವಳ ಕಾಲುಗಳಲ್ಲಿ ತ್ರಾಣವುಳಿಯಲಿಲ್ಲ. ಆದುದರಿಂದ ನೆಲದ ಮೇಲೆ ಬಿದ್ದುಕೊಂಡಳು. ಬಾಯಿಗೆ ಸೆರಗನ್ನು ತುರುಕಿಸಿಕೊಂಡುದರಿಂದ ಅವಳ ಅಳು ಮೋರೆ ಯಾರಿಗೂ ಕೇಳಿಸಲಿಲ್ಲ. ಹರಿದ ಕಣ್ಣೀರು ಆ ಸೆರಗಿನಲ್ಲೇ ಇಂಗಿತು. ರಾತ್ರಿ ಅದೇ ಸ್ಥಳದಲ್ಲಿ ಅವಳು ಸ್ಮೃದುಶಯ್ಯೆಯ ಮೇಲೆ ಒಂದು ಮೇಣದ ಬೊಂಬೆಯಂತೆ ಮಲಗಿದ್ದಳು. ಆದರೆ ಈಗ ಕಠೋರವಾದ ನೆಲದಲ್ಲಿ ಶಿಲಾಬಾಲಿಕೆಯಂತೆ ಬಿದ್ದುಕೊಂಡಿರುವಳು! ಆಗ ಕಗ್ಗತ್ತಲೆ ಇದ್ದರೂ ಅವಳ ಕಣ್ಣ ಜ್ಯೋತಿ ಎಲ್ಲವನ್ನೂ ಬೆಳಗಿಸಿತ್ತು. ದೀಪದ ಸಹಾಯವಿಲ್ಲದೆ ಕೋಣೆಯಲ್ಲಿ ವಸ್ತುಗಳು ಎಲ್ಲಿವೆ ಎಂದು ಕಾಣುತಿದ್ದಳು. ಅದು ಅವಳ ಭವಿಷ್ಯಜೀವನದ ಮೇಲೆ ಕೂಡ ಪ್ರಕಾಶ ಬೀರಿತ್ತು. ಆದರೆ ಈಗ ಈ ನಡುಹಗಲಲ್ಲಿ ಅವಳ ಕಣ್ಣಿಗೆ ಕತ್ತಲೆ ಮುತ್ತಿದಂತಾಗಿದೆ. ಕೋಣೆಯಲ್ಲೆಲ್ಲ ಕತ್ತಲೆ. ಭವಿಷ್ಯ ಜೀವನವನ್ನು ಗಾಢಾಂಧಕಾರ ಮುಸುಕಿದಂತೆ ತೋರುತ್ತದೆ. ಕೈ ಮೈ ಯಾವುದರ ಪರಿವೆಯೂ ಅವಳಿಗಿಲ್ಲ. ಸ್ವಸೌಂದರ್ಯವನ್ನು ಕಂಡು ನಾಚಿದ್ದ ಕಾವೇರಿ ಈಗ ತನಗೇ ತಾನೇ ಹೇಸಿದಳು. ಮೈಮೇಲಿನ ಸೀರೆ ಉಕ್ಕಿನ ಕವಚದಂತೆ ಭಾರವಾಗಿ ಕಾಣಿಸಿತು. ಕಟ್ಟಿರುವ ಕರಿಮಣಿಯ ಹಗ್ಗ ಅವಳ ಗೋಣಿಗೆ ನೇಣಾಗಿ ಬಿಗಿಗೊಳ್ಳುತ್ತಿದೆಯೋ ಹೇಗೆ? ಇಲ್ಲದಿದ್ದರೆ ಈ ರೀತಿ ಉಸಿರು ಕಟ್ಟಿದಂತಾಗಲು ಕಾರಣವಾದರೂ ಏನು? ಬಳೆಗಳ ಕಿಣಿಕಿಣಿ ಈಗ ಅವಳಿಗೆ ಕರ್ಣ ಕಠೋರವಾಗಿದೆ. ಸಿಟ್ಟಿನಿಂದ ಕೈಯನ್ನು ನೆಲಕ್ಕೆ ಅಪ್ಪಳಿಸಿದಳು. ಆಗ ಒಂದು ಬಳೆ ಒಡೆಯಿತು. ಅವನು ಬಂದಾಗ ಅದೇ ಕೈಗಳು ಹೊಸ ಹೊಸ ಅಂದದ ಬಳೆಗಳನ್ನು ಅಪೇಕ್ಷಿಸಿದ್ದವು. ಆದರೆ ಈಗ ಒಡೆದುಹೋದರೂ ಬೇರೆ ಬಳೆಯನ್ನಿಟ್ಟುಕೊಳ್ಳುವ ಮನಸ್ಸಾಗಲಿಲ್ಲ. ಆ ಮನಸ್ಸೂ ಹಿಂದೆ ಅವಳ ಮಾತು ಮೀರಿ, ಗೋಡೆ ತೂರಿ, ಮತ್ತೆ ಮತ್ತೆ ಹೊರಗೆ ಹರಿಯುತಿತ್ತಲ್ಲ! ಈಗ ಅದು ಅವಳ ಮನೋಮಂದಿರದಲ್ಲಿ ಒಕ್ಕಲಾಗಿ ರಣಹದ್ದಿನ ಕೊಕ್ಕಿನಂತೆ ಕುಕ್ಕುತ್ತಿದೆ. ಅವನೊಂದಿಗೆ ಹೊರಟುಹೋಗಿದ್ದ ಪಂಚಪ್ರಾಣಗಳೂ ಪುನಃ ಅವಳ ಪಂಚೇಂದ್ರಿಯಗಳಲ್ಲಿ ಪ್ರವೇಶಿಸಿವೆ.

ಕಾವೇರಿ ದಿಗ್ಗನೆದ್ದಳು. ಟ್ರಂಕಿನ ಬೀಗ ತೆಗೆದು ಸೀರೆ, ಕುಬಸ, ಕಣಗಳನ್ನೆಲ್ಲ ಆಚೀಚೆ ಸರಿಸಿ, ಆ ಗಡಿಯಾರವನ್ನು ತೆಗೆದಳು. ಗಾಜು, ಲೋಹಗಳ ಆ ಶೀತಲಸ್ಪರ್ಶ ಈಗ ಹಾವು ಹಿಡಿದಂತನ್ನಿಸಿತು ಅವಳಿಗೆ. ಅದನ್ನು ಹಿಚುಕಿ ಕೊಲ್ಲುವವಳಂತೆ ಮುಷ್ಟಿಯನ್ನು ಬಿಗಿಗೊಳಿಸಿದಳು. ನೇತಾಡುವ ಹಾವಿನ ಬಾಲದಂತೆ ಗಡಿಯಾರದ ತೊಗಲು ತೂಗಿತು. ಅದು ಪ್ರಾಣವನ್ನು ಬಿಟ್ಟಂತೆ ಗಡಿಯಾರದ ಟಿಕ್ ಟಿಕ್ ಜೀವನಾಡಿ ನಿಂತಿತು. ಕಾವೇರಿ ಮುಷ್ಟಿಯನ್ನು ಸಡಿಲಿಸಿದಳು. ಸತ್ತ ಹಾವನ್ನು ಹೊರಗೆಸೆದು ಬಿಡುವಂತೆ ಇದನ್ನು ಕಿಟಕಿಯ ಆಚೆ ಚೆಲ್ಲಬೇಕೇಂದು ಅನ್ನಿಸಿತು. ಆದರೆ ಅಷ್ಟರಲ್ಲಿ ಹೊರಗೆ "ಅರವಿಂದ! ಅರವಿಂದ! ಇಲ್ಲಿಗೆ ಬಾ!'' ಎಂದು ತಂದೆ ಕೂಗಿದುದು ಕೇಳಿಸಿತು. ಆ ಕೂಗು ಆರ್ತನಾತವಾಗಿರದೆ ಅಧಿಕಾರವಾಣಿ ಯಾಗಿತ್ತು. ಅದರಿಂದ ಕಾವೇರಿ ಸ್ವಲ್ಪ ಬೆಚ್ಚಿಬಿದ್ದಳು. ಮತ್ತು ಆ ಗಡಿ ಯಾರವನ್ನು ಟ್ರಂಕಿನಲ್ಲಿಟ್ಟು ಕಣ್ಣು ಮೋರೆಗಳನ್ನೆಲ್ಲ ಸೆರಗಿನಿಂದ ಒರಸಿ ಕೊಂಡಳು. ಕೆದರಿದ ಕೂದಲನ್ನು ಬಾಚಣಿಗೆಯಿಂದ ಸ್ವಲ್ಪ ಬಾಚಿಕೊಂ ಡಳು. ಸೀರೆ ಕುಬಸಗಳನ್ನು ಸರಿಪಡಿಸಿ ಕೋಣೆಯಿಂದ ಹೊರಬಿದ್ದಳು.

ಗೋಪಾಲರಾಯರು ಕರೆದಾಗ ಅರವಿಂದ ತಾಯಿಯೊಂದಿಗಿದ್ದ. ಆದುದರಿಂದ ಕರೆದುದು ಜಲಜಮ್ಮನವರಿಗೆ ತಿಳಿದರೂ ಯಾಕೆ ಎಂದು ಗೊತ್ತಾಗಲಿಲ್ಲ. ಏಕೆಂದರೆ ಅರವಿಂದ ಚಾವಡಿಯಿಂದ ಅಂಗಳಕ್ಕೆ ಹಾರಿ ಓಡುತ್ತ ಅಲ್ಲಿಂದಲೇ ಹೊರಗೆ ಹೋಗಿಬಿಟ್ಟ. ಆದರೆ ಕಾವೇರಿ ಮಾತ್ರ ಅರಿ ತಿದ್ದಳು. "ರಾಮುಗೌಡ ಇದ್ದಾನೋ ನೋಡು ! ಇದ್ದರೆ ಈಗಿಂದೀಗ ಗಾಡಿ ಕಟ್ಟಿಕೊಂಡು ಬರಲಿಕ್ಕೆ ಹೇಳು. ಬೇಗ!'' ಎಂದು ತಂದೆ ಅರವಿಂದ ನಿಗೆ ಆಜ್ಞಾಪಿಸಿದುದನ್ನು ಅವಳು ಕೇಳಿದ್ದಳು. ಅದರಿಂದ ಅವಳ ಸಂಕಟ ಇನ್ನಷ್ಟು ಹೆಚ್ಚಾಯಿತು. ಬಹುಶಃ ಅಪ್ಪಯ್ಯ ಬೆಳ್ತಂಗಡಿಗೆ ಹೋಗುವು ದಕ್ಕೆ ಗಾಡಿ ತರಹೇಳಿರುವರು ಎಂದು ಅವಳು ಅರ್ಥಮಾಡಿಕೊಂಡಳು. ಹೀಗಾಗಿ ನೊಂದವಳಾಗಿ ತಾಯಿಯ ಹತ್ತಿರ ಬಂದಳು. ಅವಳ ಕಂದಿದ ಮೊಗದಾವರೆಯನ್ನು ಕಂಡ ತಾಯಿ ಕೇಳಿದರು:

"ಅರವಿಂದ ಎಲ್ಲಿಗೆ ಹೋದ?''

"ರಾಮುಗೌಡನಿದ್ದಲ್ಲಿ"

"ಯಾಕೆ, ಗಾಡಿ ತರಲು ಹೇಳಿದರೇನು?''

"ಹುಂ"

ಜಲಜಮ್ಮ ಗಾಬರಿಯಾಗಿ "ಈಗ ಯಾಕೆ ಗಾಡಿ ಇವರಿಗೆ?'' ಎಂದು ಕೇಳಿ ಮಗಳನ್ನುದ್ದೇಶಿಸಿ "ನೀನು ಒಳದಾರಿಯಿಂದ ಓಡು. ರಾಮುಗೌಡ ಮನೆಯಲ್ಲಿದ್ದರೆ ಬೇರೆಲ್ಲಾದರೂ ಹೋಗಲಿ. ಈಗ ಅವನು ಗಾಡಿ ತರುವುದು ಬೇಡ. ನಾನು ತಿಳಿಸಿದೆನೆಂದು ಅರವಿಂದನಿಗೆ ಹೇಳು. ಓಡು!" ಎಂದು ಕಳಿಸಿದರು.

ಕಾವೇರಿ ಹಿತ್ತಿಲಕಡೆಯಿಂದ ಓಡಿದ ಬಳಿಕ ಜಲಜಮ್ಮನವರು ಈಚೆ ಬಂದು ಬಾಗಿಲೆಡೆ ನಿಂತು ಚಾವಡಿಯನ್ನು ಹಣಕಿ ನೋಡಿ "ಅರವಿಂದ!" ಎಂದು ಕರೆದರು. ಅರವಿಂದನಿಲ್ಲನೆಂದು ಅವರು ಬಲ್ಲರು. ಆದರೆ ತನ್ನ ಸಾನ್ನಿಧ್ಯವನ್ನು ವ್ಯಕ್ತಪಡಿಸುವ ಜಲಜಮ್ಮನವರ ರೀತಿ ಹಾಗೆ. ಇದನರಿತ ಗೋಪಾಲರಾಯರು "ಅರವಿಂದ ಇಲ್ಲ. ನಿನಗೆ ಏನು ಬೇಕು?" ಎಂದು ಕೇಳುತ್ತ ಒಳಗೆ ಬಂದರು. "ಈಗ ನೀವು ಜಿಲ್ಹೆಂಗಡಿಗೆ ಹೋಗುವದಾದರೂ ಯಾಕೆ? ನೀವು ಏನಾದರೂ ಅಂದರೆ ಅವನೂ ಇದಿರುತ್ತರ ಕೊಟ್ಟಾನು! ಮಾತಿಗೆ ಮಾತು ಬಂದು ಜಗಳವೂ ಆದೀತು. ನಾಲ್ಕು ಜನರ ಮುಂದೆ ನಗೆಗೀಡಾಗುತ್ತದೆ. ಈಗಲೇ ಊರಲ್ಲಿ ಸುದ್ದಿ ಹಬ್ಬಿದೆಯಂತೆ! ಇನ್ನು ಜಗಳವಾಗುವುದೊಂದು ಬಾಕಿ. ಮತ್ತೆ ತಲೆ ಎತ್ತಿ ಊರಲ್ಲಿ ತಿರುಗುವಂತಿಲ್ಲ. ಅವರವರು ಮಾಡಿದ್ದನ್ನು ಅವರವರು ಉಣ್ಣುತ್ತಾರೆ'' ಎಂದು ಜಲಜಮ್ಮ ಸಂತೈಸಲೆತ್ನಿಸಿದರು.

"ಅದು ಹೇಗೇನೆ? ನಾವೊಂದು ಹೆಣ್ಣು ಕೊಟ್ಟಿದ್ದೇವಲ್ಲ!''

"ಹೌದು. ಕೊಡುವ ಮೊದಲು ಸರಿಯಾಗಿ ನೋಡಬೇಕಾಗಿತ್ತು. ಈಗ ಕೊಟ್ಟ ಮೇಲೆ ಏನು ಮಾಡಲಿಕ್ಕಾಗುತ್ತದೆ? ಆದುದನ್ನು ಇದಿರಿಸಬೇಕು; ಸಹಿಸಬೇಕು. ತಾರ್‌ಪೂರ್ ಎಂದರೆ ಮತ್ತೆ ಅವನು ಸಿಟ್ಟಾಗುತ್ತಾನೆ. ಅದರಿಂದ ನಮ್ಮ ಹುಡುಗಿಗೇ ಕಷ್ಟ! ನಮ್ಮ ಮೇಲಿನ ಕೋಪವನ್ನು ಅವರ ಮೇಲೆ ತೀರಿಸಿ ಹಿಂಸಿಸಿದರೆ ಏನು ಮಾಡೋಣ, ಹೇಳಿ. ಆದುದರಿಂದ ನಾವು ಈಗ ಇದನ್ನೆಲ್ಲ ನುಂಗಿಕೊಳ್ಳಬೇಕು. ದೇವರ ದಯೆಯಿಂದ ಅವನಿಗೆ ಮುಂದೆ ಒಳ್ಳೆ ಬುದ್ಧಿ ಬಂದರೂ ಬಂದೀತು''

ಗೋಪಾಲರಾಯರು ಸ್ವಲ್ಪ ಯೋಚಿಸಿ ನುಡಿದರು: "ಹಾಗಾದರೆ ಈಗ ಏನು ಮಾಡಬೇಕನ್ನುತ್ತಿದ್ದೀಯಾ?''

"ಏನೂ ಇಲ್ಲ. ಬೇಗನೇ ಪುಣ್ಯಾರ್ಜನೆ ಮುಗಿಸಿ ಹುಡುಗಿಯನ್ನು ಅವನ ಹಿಂದೆ ಕಳಿಸಿಬಿಡೋಣ. ಹೆಂಡತಿ ಮನೆಯೊಳಗಿದ್ದ ಮೇಲೆ ಮನಸ್ಸು ಅಲ್ಲೇ ಎಳೆದೀತು. ಹೊರಗೆ ಹರಿದಾಡಲಿಕ್ಕಿಲ್ಲ."

"ಏನೋ ಅಪ್ಪಾ! ಅಂತೂ........'' ಎಂದು ಗೋಪಾಲರಾಯರು ಬೇಸರದ ದನಿ ಎಳೆದು ಹೊರಗೆ ಬಂದು ಕುಳಿತರು.

ಸ್ವಲ್ಪ ಹೊತ್ತಿನ ಮೇಲೆ ಬಂದ ಅರವಿಂದ "ರಾಮುಗೌಡ ಇಲ್ಲ. ಈ ಹೊತ್ತು ಬರುತ್ತಾನಂತೆ'' ಎಂದು ತಂದೆ ಮುಂದೆ ನುಡಿದ. ಅದಕ್ಕೆ ಅವರು ಉತ್ತರವನ್ನೇ ಕೊಡಲಿಲ್ಲ. ಆದುದರಿಂದ ತಾಯಿಗೆ ತಿಳಿಸಲು ಒಳಗೆ ನುಸುಳಿದ. ಆದರೆ ಕಾವೇರಿ ಮೂಲಕ ಜಲಜಮ್ಮನವರಿಗೆ ಮೊದಲೇ ಗೊತ್ತಾಗಿತ್ತು. ಅವಳು ರಾಮುಗೌಡನ ಮನೆ ಸೇರುವ ಮೊದಲೇ ಅರವಿಂದ ಇದಿರಾಗಿದ್ದ. ಒಟ್ಟಿಗೆ ಇಬ್ಬರೂ ಬಂದಿದ್ದರು. ಆದರೆ ಅರವಿಂದ ಹೆಬ್ಬಾಗಿಲಿನಿಂದ ಮನೆಯೊಳಗೆ ನುಸುಳಿದ್ದರೆ ಅವಳು ಹಿಂಬದಿಯಿಂದ ಪ್ರವೇಶಿಸಿದ್ದಳು.

ಅದೇ ದಿನ ಸಾಯಂಕಾಲ ಕಾಫಿ ಕುಡಿದೊಡನೆಯೇ ಅರವಿಂದ ಬೆಳ್ತಂಗಡಿಗೆ ಹೊರಟು ನಿಂತಾಗ, ಕಾವೇರಿ ಆ ಕೈಗಡಿಯಾರವನ್ನು ತಂದು ಅವನ ಕೈಗಿತ್ತಳು. ಅವನು ಆಶ್ಚರ್ಯದಿಂದ ತಂಗಿಯ ಮೋರೆ ನೋಡಿದ; ಅವಳು ತಲೆತಗ್ಗಿಸಿಕೊಂಡಿದ್ದಳು.

"ನಿನಗೇ ಕೊಟ್ಟಿದ್ದಾರಲ್ಲ!" ಎಂದವನು ನೆನಪು ಹುಟ್ಟಿಸಿದ.

"ನನಗ್ಯಾಕೆ ಅದು ?''

"ಮತ್ತೆ ನನಗೇಕೆ ಇದು ?''

"ಕೊಟ್ಟು ಬಿಡು" ಎಂದವಳು ಹೇಳಿ ದುಃಖವನ್ನು ತಡೆಯಲಾರದೆ ಬೆನ್ನು ತಿರುಗಿಸಿ ಹೋದಳು.

ಆದರೆ ಅರವಿಂದ ಬೆಳ್ತಂಗಡಿಗೆ ಬಂದಾಗ ಆನಂದ ಆಸ್ಪತ್ರೆಗೆ ಬೀಗ ಹಾಕಿತ್ತು. ಅವನು ಊರಲ್ಲಿಯೂ ಇರಲಿಲ್ಲ.

# ೧೧ ನೇಯ ಅಧ್ಯಾಯ

ಅರವಿಂದ ಹೊರಟುಹೋದ ಮೇಲೆ ಆನಂದರಾಯನಿಗೆ ಅವನ ನೆನಪಾಯಿತು. ಅವನು ಗಡಿಬಿಡಿಯಿಂದ ಮೋಟಾರ ನಿಲ್ದಾಣದ ಕಡೆ ಓಡಿಬಂದ. ಅಲ್ಲೇ ರಸ್ತೆಯ ಅಂಚಿನಲ್ಲಿ ಬಾಲಕೃಷ್ಣನ ದರ್ಜಿಯಂಗಡಿ. ಬಿಸಿಲೇರಿದ್ದುದರಿಂದ ಬಾಲಕೃಷ್ಣ ಒಂದೊಂದೇ ಹಲಿಗೆಗಳನ್ನು ಎತ್ತಿಟ್ಟು ಅಂಗಡಿಯ ಬಾಗಿಲು ಹಾಕುತಿದ್ದ. ಡಾಕ್ಟರ್ ಆ ದಾರಿಯಿಂದ ಬಂದೊಡನೆಯೇ ಅವನು "ಓಹೋಹೋ, ಡಾಕ್ಟರರು ! ನಮಸ್ಕಾರ ಸ್ವಾಮಿ ! ನಿಮಗೆ ನೂರು ವರುಷ ಆಯುಷ್ಯ!" ಎಂದು ಹೇಳಿ ಕರಜೋಡಿಸಿದ.

"ಯಾಕ್ರೀ ? ಹೇಳುವುದು ಹೇಳುತ್ತೀರಂತೆ! ಇನ್ನೂ ಒಂದು ಐವತ್ತು ವರುಷಗಳನ್ನು ಸೇರಿಸಿ ಆಶೀರ್ವಾದ ಮಾಡಿದರೆ ನಿಮ್ಮ ಗಂಟು ಖರ್ಚೇನಾಗುತ್ತದೆ ?''

"ಹ! ಹ!'' ಎಂದು ಬಾಲಕೃಷ್ಣ ನಕ್ಕು "ಐವತ್ತು ಯಾಕೆ ಸ್ವಾಮೀ? ಮತ್ತೆ ನೂರೇ ಇರಲಿ ! ಈಗ, ಈಗ, ನಿಮ್ಮ ವಿಷಯವನ್ನೇ ಮಾತನಾಡುತಿದ್ದೆವು !''

"ಏನು ಮಾಡಾಯರೆ, ಅಂಥ ಪ್ರಸಂಗ?''

"ಏನಿಲ್ಲ. ಬಂಗಾಡಿಯ ನಮ್ಮ ಮಿತ್ರರೊಬ್ಬರು ಬಂದಿದ್ದರು. ಆಗ ನಿಮ್ಮ ಮಾತು ಹೊರಟಿತ್ತು. ನಾನು ಹೇಳಿದೆ : "ಡಾಕ್ಟರರೆಂದರೆ ನಮ್ಮ ಬೆಳ್ತಂಗಡಿಯಲ್ಲಿ ಒಂದು ಜನವಯ್ಯ! ಸುಳ್ಳಿಲ್ಲ, ಸಿಟ್ಟಿಲ್ಲ, ವಂಚನೆಯಿಲ್ಲ ! ಯಾವಾಗಲೂ ನಗುಮುಖ. ಒಳ್ಳೇ ಕುಶಾಲ್‌ಬಾಯಿ! ದೇವತಾಮನುಷ್ಯ!"

ಆನಂದರಾಯ ದೇಶಾವರಿ ನಗೆ ಬೀರಿ ಕೇಳಿದ: "ಬಂಗಾಡಿಯವರು ಯಾರು ?''

"ನನ್ನ ಫ್ರೆಂಡ್, ಅರವಿಂದ !"

"ಅರವಿಂದ?''

"ಹುಂ, ನಾವು ಇದೇ ಶಾಲೆಯಲ್ಲಿ ಒಟ್ಟಿಗೆ ಕಲಿತವರು. ಬೆಳಿಗ್ಗೆ ಬಂದಿದ್ದರು.''

"ಬೆಳಿಗ್ಗೆ ಬಂದಿದ್ದರು ? ಮತ್ತೆ ನಮ್ಮಲ್ಲಿ ಬರಲಿಲ್ಲವಲ್ಲ ! ಒಳ್ಳೆ

ಮೈದುನ ಮಾರಾಯ !''

ಬಾಲಕೃಷ್ಣ ಬೆಪ್ಪು ಬೆರಗಾಗಿ "ಯಾರ ಮೈದುನ ಸ್ವಾಮಿ ?" ಎಂದು ಕೇಳಿದ.

"ಮತ್ತಾರದು, ನಮ್ಮದು ! ಈಗಿನ ಹುಡುಗರೇ ಒಂದು ರೀತಿ. ಈಗ ಎಲ್ಲಿಗೆ ಹೋದರು ?''

ಬಾಲಕೃಷ್ಣನ ಮೋರೆ ಸಪ್ಪಗಾಯಿತು. " ಪುತ್ತೂರಿಗೆ ಹೋಗಲು ಬಂದಿದ್ದರಂತೆ. ಆದರೆ ಮರೆತು ದುಡ್ಡು ತಂದಿರಲಿಲ್ಲ. ಕೊನೆಗೊಂದು ಬಾಡಿಗೆ ಸೈಕಲ್ ಮಾಡಿಕೊಂಡು ವಾಪಾಸ್ ಹೋದರು. ಸಾಯಂಕಾಲ ಬರಬಹುದು " ಎಂದವನು ಅಂಗಡಿಯೊಳಗೆ ನುಸುಳಿದ.

ಡಾಕ್ಟರ್ ನಾನಾ ವಿಚಾರಗಳಿಂದ ತತ್ತರಿಸಿ ಸ್ತಂಭವಂತೆ ಅಲ್ಲೇ ನಿಂತ. ಅವನು ಹೊರಟು ಹೋಗುವ ವರೆಗೆ ಬಾಲಕೃಷ್ಣನೂ ಹೊರಬೀಳ ಲಿಲ್ಲ. ಆ ಮೇಲೆ ಒಬ್ಬೊಬ್ಬರು ಒಂದೊಂದು ಚಿಂತೆಯಿಂದ ಒಂದೊಂದು ದಾರಿ ಹಿಡಿದರು. ಈ ನೆಂಟಸ್ಥಿಕೆಯನ್ನರಿಯದ ಬಾಲಕೃಷ್ಣ ಅರವಿಂದನ ಮುಂದೆ ಡಾಕ್ಟರನನ್ನು ನಿಂದಿಸಿದ್ದ. ಅಂಗಡಿಯಲ್ಲಿದ್ದ ಇನ್ನಿತರರೂ ಅವನ ದುರ್ಗುಣ, ದುಶ್ಶೀಲಗಳನ್ನು ವರ್ಣಿಸಿ, ಹಳಿದಿದ್ದರು. ಅರವಿಂದ ಅವರಿಂದ ತುಂಬ ನೊಂದುಕೊಂಡಿರಬೇಕೆಂದು ಬಾಲಕೃಷ್ಣ ಊಹಿಸಿ ಪಶ್ಚಾತ್ತಾಪದ ನಿಟ್ಟುಸಿರಿಟ್ಟ. ಅರವಿಂದ ಸಾಯಂಕಾಲ ಬಂದಾಗ ಅವನಿಗೆ ಹೇಗೆ ತನ್ನ ಈ ಸುಟ್ಟುಮೋರೆಯನ್ನು ತೋರಿಸಲಿಯೆಂದು ಮರುಗಿದ. ಡಾಕ್ಟರನ ವ್ಯಸನಕ್ಕೆ ಕಾರಣ ಬೇರೆಯೇ. ಅರವಿಂದನ ಮುಂದೆ ಈ ಬಾಲಕೃಷ್ಣ ನನ್ನನ್ನು ದೂರಿರಬೇಕು. ಅರವಿಂದ ಅದನ್ನು ಕೇಳಿಯೇ ಆಸ್ಪತ್ರೆಗೆ ಬರ ಲಿಲ್ಲ. ಮತ್ತು ಮನೆಯವರಿಗೆ ತಿಳಿಸಲು ಅವನು ಮರಳಿದ. ದುಡ್ಡು ತಂದಿಲ್ಲವೆಂದು ಹೇಳಿದುದೆಲ್ಲ ಸುಳ್ಳು ನೆವ. ಬಾಲಕೃಷ್ಣನ ಮಾತುಗಳನ್ನು ನಂಬಲಾಗದು. ಇದಿರಿಗೆ ಹೊಗಳುವ ಈ ಬೇವರ್ಸಿಗಳು ಹಿಂದಿನಿಂದ ನಕಲಿ ಮಾಡುತ್ತಾರೆ ! ಇವರ ನಾಲಿಗೆಯೆಂದರೆ ಸಾಣೆ ಹಿಡಿದ ಕತ್ತಿ ! ಬದ್ಮಾಷರಿಗೆ ಬೇರೆ ಉದ್ಯೋಗವಿಲ್ಲ. ಅಂತೂ ಇದೊಂದು ಗದ್ದಲಕ್ಕೇ ಕಾರಣವಾಯಿ ತಲ್ಲ !– ಈ ರೀತಿ ಆನಂದರಾಯ ತಳಮಳಿಸಿದ. ಉರಿವಲ್ಲಿ ಉಪ್ಪಿಕ್ಕಂತೆ ಅವನು ನೋವಿನಿಂದ ಚಡಪಡಿಸಿದ. ಹೋಟೇಲಿಗೆ ಬಂದು ಸ್ನಾನ ಪಾನ

ಭೋಜನಗಳನ್ನು ಮುಗಿಸಿ ಆಸ್ಪತ್ರೆಗೆ ಮರಳಿದ ಅವನಿಗೆ ಅಲ್ಲಿರಲು ಬೇಸರ ವೆನಿಸಿತು. ಕುಳಿತಲ್ಲಿ ಕುಳಿತಿರಲಾರ. ನಿಂತಲ್ಲಿ ನಿಂತಿರಲಾರ. ಒಳಕೋಣೆಗೆ ಹೋಗಿ ಹಾಸಿಗೆ ಬಿಡಿಸಿ ಬಿದ್ದುಕೊಂಡ. ಮತ್ತೇನೋ ನೆನಪಾಗಿ ತಕ್ಷಣ ಎದ್ದು ಕಂಪೌಂಡರನ ಕೋಣೆಗೆ ಹೊಕ್ಕು ಕಪಾಟುಗಳನ್ನು ತೆರೆದು ಪರೀಕ್ಷಿಸಿದ. ಕುರ್ಚಿಯಲ್ಲಿ ಕುಳಿತು ಕಾಲುಗಳನ್ನು ಮೇಜಿನ ಮೇಲೆಸೆದು ಏನೋ ಯೋಚಿಸಿದ. ಮೋಟರ ನಿಲ್ದಾಣದಲ್ಲಿ "ಪೋಂ, ಪೋಂ" ಎಂದು 'ಹಾರ್ನ' ಬಾರಿಸಿದುದು ಕೇಳಿಸಿತು. ಆ ನಾದ ನೂತನ ವಿಚಾರವೊಂದನ್ನು ಕೆರಳಿಸಿತು. ಆನಂದರಾಯ ದಿಗ್ಗನೆದ್ದು ಬೇರೆ ಸೂಟು ಬೂಟು ಧರಿಸಿ ಆಸ್ಪತ್ರೆಗೆ ಬೀಗವಿಕ್ಕಿ ರಸ್ತೆಯ ಬದಿಯಲ್ಲಿ ನಿಂತ. ಮತ್ತು ಮೋಟಾರ ಬಸ್ ಬಂದೊಡನೆಯೇ ಕೈಚಾಚಿ ನಿಲ್ಲಿಸಿ ಅದನ್ನೇರಿದ.

ಮೋಟಾರ ವೇಗದಿಂದ ಮಂಗಳೂರು ಕಡೆ ಓಡಿತು. ಒಂದೊಂದೇ ಫರ್ಲಾಂಗು, ಮೈಲುಕಲ್ಲುಗಳನ್ನು ದಾಟಿ ಹೋದಂತೆ ಬೆಳ್ತಂಗಡಿ ಹಿಂದೆ ಉಳಿಯಿತು. ಅದರಂತೆ ಬೆಳ್ತಂಗಡಿ, ಬಂಗಾಡಿಯ ವಿಷಯಗಳೂ ಆನಂದ ರಾಯನ ಮನಸ್ಸಿನಲ್ಲಿ ಹಿನ್ನೆಲೆ ಸೇರಿದುವು. ಮಂಗಳೂರು, ವಾಸಂತಿ, ನಾರಾಯಣ ಇವೇ ಹೆಸರುಗಳು ಅವನ ಮಾನಸ ಸರೋವರದಲ್ಲಿ ತೇಲಾಡಿದುವು. "ನಾರಾಯಣ ಮಂಗಳೂರಿಗೆ ಹೋಗಿರಬೇಕು. ಮತ್ತೆಲ್ಲಿ ಹೋಗುತ್ತಾನೆ-ಬೇವರ್ಸಿ! ತಾಯಿ ಹೊಟ್ಟೆಯೊಳಗೆ ಪ್ರವೇಶಿಸಿದರೂ ನಾನು ಬಿಡಲಾರೆ" ಎಂದವನು ಔಡುಗಚ್ಚಿದ. ನಾರಾಯಣ ಮಹಾವೈರಿಯಂತೆ ಅವನ ಕಂಣಿಗೆ ಕಾಣಿಸಿದ. ಅವನಿಂದ ತನಗೆ ತುಂಬ ಅಪಮಾನ ಆಯಿತೆಂದು ಅವನ ಕಲ್ಪನೆ. "ವಾಸಂತಿಯ ಸಂಗತಿಯನ್ನು ಮುಂದಿ ಮುಂದೆ ಹೇಳಿದವನು ಅವನೇ. ಅವಳು ಬೆಳ್ತಂಗಡಿಗೆ ಬರಲು ಅವನೇ ಕಾರಣ ಇದರಿಂದ ಊರಲ್ಲೆಲ್ಲ ಅಪಖ್ಯಾತಿ ಹಬ್ಬಿತು. ನಾಲ್ಕು ಜನ ದೊಡ್ಡ ಮನುಷ್ಯರ ಮುಂದೆ ಮೋರೆ ತೋರಿಸದಂತಾಯಿತು. ಅವನು ಹೀಗೆ ಮಾಡಿದುದು ಮಹಾಪರಾಧ. ವಾಸಂತಿ ಯಾರು ? ತಾನು ಯಾರು ? ಮೇಲೆ ಉಗುಳಿದರೆ ಅದು ತನ್ನ ಮೋರೆ ಮೇಲೆ ಬೀಳುತ್ತದೆಂದು ಕೂಡ ತಿಳಿದಿಲ್ಲ. ಆಗಲೇ ನಾನು ಅವನ ಕೈಕಾಲುಗಳನ್ನು ಮುರಿದು ಹಾಕಬೇಕಾಗಿತ್ತು. ಹಾವನ್ನು ಹೊಡೆದು ಅರ್ಧ ಜೀವ ಮಾಡಿ ಬಿಡಬಾರದು ಎಂದನ್ನುತ್ತಾರೆ. ಅದು ನಿಜ.

ಈಗ ಅದು ಮತ್ತೆ ಚೇತರಿಸಿಕೊಂಡು ಬಂದು ನನ್ನನ್ನು ಕಚ್ಚಿತು. ರಾತ್ರಿ ಸಾಮಾನುಗಳನ್ನೆಲ್ಲ ದೋಚಿಕೊಂಡು ಹೋದ ! ಇದರಿಂದ, ಅಪಖ್ಯಾತಿಯನ್ನು ಇನ್ನಷ್ಟು ಡಂಗುರ ಹೊಡೆದು ಸಾರಿದಂತಾಯಿತು ! ನೀಚ, ಪರಮ ನೀಚ !" ಎಂದು ಆನಂದರಾಯ ತನ್ನೊಳಗೆ ಮೆಲುಕಾಡಿದ.

ಔಷಧ, ಬಾಟ್ಲಿ, ಇಂಜೆಕ್ಷನ್‌ಗಳನ್ನೆಲ್ಲ ಎಲ್ಲಿಗೆ ತೆಗೆದುಕೊಂಡು ಹೋದ, ಏನು ಅವನ ಯೋಚನೆ ಎಂದೂ ಆನಂದರಾಯ ಚಿಂತಿಸಿದ. ಪ್ರಾಯಶಃ ಅಕ್ಕನ ಮನೆಯಲ್ಲಿ ಅವನ್ನಿಟ್ಟಿರಬೇಕು. ತಾನು ಬೆವರು ಸುರಿಸಿ ಗಳಿಸಿದುದಲ್ಲ ! ಧರ್ಮಕ್ಕೆ ಸಿಕ್ಕಿದುದು; ಅರ್ಧ ಬೆಲೆಗೆ ಮಾರಾಟ ಮಾಡಿದರೂ ಅವನಿಗಾಗುವ ನಷ್ಟವೇನು ? ಕೂತಲ್ಲಿ ಅಷ್ಟು ಹಣ ಕಿಸೆಗೆ ಬಿದ್ದ ಹಾಗಾಗುತ್ತದೆ. ಅಗ್ಗಕ್ಕೆ ಸಿಗುವ ಮಾಲು ಯಾರಿಗೆ ಕಹಿಯಾಗುತ್ತದೆ ? ಮಂಗಳೂರಿನಲ್ಲಿ ಅನೇಕ ಕೆಮಿಸ್ಟ ಅಂಗಡಿಗಳಿವೆ; ಡಾಕ್ಟರರಿದ್ದಾರೆ. ಸಿಕ್ಕರೆ ಬಿಡುವವರಲ್ಲ. ಆದರೆ ಇಷ್ಟರೊಳಗೆ ಮಾಲು ಫೈಸಲ್ ಆಗಿರಲಿಕ್ಕಿಲ್ಲ ! ಒಂದೆರಡು ದಿನಗಳೊಳಗೆ ಗಿರಾಕಿ ಸಿಕ್ಕಿರಲಿಕ್ಕಿಲ್ಲ. ಮಾಲು ಸಿಗಬಹುದು" ಎಂದು ಒಮ್ಮೆ ಅವನೆದೆಯಲ್ಲಿ ಆಶೆ ಉದಯಿಸಿತು. ಇನ್ನೊಮ್ಮೆ ಅವನು ವಾಸಂತಿಯ ಮೇಲೆ ಸ್ವಲ್ಪ ಸಂದೇಹಪಟ್ಟ. "ನಾರಾಯಣನ ಈ ಕಾರಸ್ಥಾನದಲ್ಲಿ ಅವಳು ಕೂಡಿಕೊಂಡಿರುವಳೇ ? ವಾಸಂತಿ ಬೆಳ್ತಂಗಡಿಗೆ ಬಂದುದೇಕೆ ? ಅದೇನಿದ್ದರೂ ಈಗ ಬಯಲಾಗುತ್ತದಲ್ಲ" ಎಂದವನು ತರ್ಕಿಸಿದ. ಬೇಗನೆ ಮನೆ ಮುಟ್ಟಲು ಅವನ ಆತುರ. ಅವನ ಆ ಮನೋವೇಗದ ಮುಂದೆ ಮೋಟಾರು ಎತ್ತಿನ ಗಾಡಿಯಾಗಿದೆಯೆಂದು ಅವನು ಬೇಸರಪಟ್ಟ. ಗುರುವಾಯನಕೆರೆ, ಬಂಟ್ವಾಳ ಮೊದಲಾದ ಸಣ್ಣ ಸಣ್ಣ ಊರುಗಳಲ್ಲಿ ಮೋಟಾರ್ ನಿಂತಾಗ ಅವನಿಗೆ ತುಂಬ ಅಸಮಾಧಾನವಾಗುತ್ತಿತ್ತು. ಮಾರ್ಗಮಧ್ಯೆ ಯಾರಾದರೂ ಇಳಿಯಲು ಅಥವಾ ಹತ್ತಲು ಮೋಟಾರನ್ನು ನಿಲ್ಲಿಸಿದಾಗ ಅವನು ಕೆರಳಿದ. "ಥೂ! ಎಷ್ಟು ಹೊತ್ತು! ಏನು ಕಥೆ ! ಇನ್ನೂ ಬರಲಿಲ್ಲವಲ್ಲ!" ಎಂದು ತನ್ನೊಳಗೆ ಅಂದುಕೊಂಡ. ಉರಿಬಿಸಿಲು ವೈಮನಸ್ಸನ್ನು ಇನ್ನಷ್ಟು ಬಿಸಿಗೊಳಿಸುವಂತಿತ್ತು. ಹಾಗೂ ಹೀಗೂ ಮಂಗಳೂರಿಗೆ ಮುಟ್ಟಿದಾಗ ಡಾಕ್ಟರ್ "ಅಮ್ಮಯ್ಯ! ಹೇಗೂ ಬಂದೆವು !" ಎಂದು ನಿಟ್ಟುಸಿರಿಟ್ಟ.

ಮನೆಯ ಮುಖಮಂಟಪದಲ್ಲಿ ಬೂಟಿನ ಸಪ್ಪಳ ಕೇಳಿ ಒಳಗಿದ್ದ

ವಾಸಂತಿ ಹೊರಗೆ ಓಡಿ ಬಂದಳು–ಆನಂದರಾಯ ! ಯಾವಾಗಲೂ ಅವಳನ್ನು ಕಂಡೊಡನೆ ಅವನ ಅರೆದೆರೆದ ತುಟಿಗಳು ನಗು ಸೂಸುತಿದ್ದುವು. ನಗುವಿನ ಲಾಸ್ಯ ಅವನ ಮೋರೆಯಲ್ಲಿ ತೇಲಾಡುತಿತ್ತು. ಮೋರೆ ಹಿಗ್ಗಿತ್ತು. ಕಣ್ಣುಗಳು ಸುಖಾತುರದಿಂದ ಮಿಂಚುತಿದ್ದುವು. ಅದರಿಂದ ಅವಳ ಅಂಗಾಂಗಗಳಲ್ಲಿ ವಿದ್ಯುಲ್ಲತೆ ಪಸರಿಸಿದಂತಾಗುತಿತ್ತು. ಆದರೆ ಈ ದಿನ ಅವನ ಸ್ವರೂಪವೇ ಬೇರೆಯಾಗಿದೆ ! ಮೋರೆ ಗಂಟಿಕ್ಕಿದೆ. ಕಣ್ಣುಗಳಲ್ಲಿ ಕ್ರೌರ್ಯದ ಕುರುಹಿದೆ. ಹಣೆ, ಹುಬ್ಬು, ಕಣ್ಣು, ಮೂಗುಗಳ ಮೇಲೆ ತಲೆಗೂದಲು ಬಿದ್ದುಕೊಂಡಿದೆ. ವಾಸಂತಿ ಬೆದರಿದಳು. ಅವಳ ತುಟಿಗಳು ಒಣಗಿದುವು. ಎದೆ ದಡದಡನೆ ಹಾರತೊಡಗಿತು. ಕಾಲುಗಳು ನಡುಗಿದುವು. ಬಾಗಿಲಿನ ಸಂದಿಗೆ ಒಂದು ಕೈಕೊಟ್ಟು ಅವಳು ನಿಂತಳು.

"ನಾರಾಯಣ ಎಲ್ಲಿದ್ದಾನೆ?"

ಆನಂದರಾಯ ಅವಳನ್ನು ಕಂಡೊಡನೆಯೇ ಸಿಟ್ಟಿನಿಂದ ಪ್ರಶ್ನಿಸಿದ.

ಅವಳು ಬೆರಗಾಗಿ "ನಾರಾಯಣ !" ಎಂದು ನುಡಿದಳು.

"ಹುಂ ನಾರಾಯಣ ! ಬೇವರ್ಸಿ, ಘಟಿಂಗ, ಬದ್ಮಾಷ್, ಹೊಲೆಯರವನು ! ಎಲ್ಲಿದ್ದಾನೆ ?" ಎಂದು ಬೈಗಳ ಸುರಿಮಳೆಗರೆಯುತ್ತ ಬೂಟುಗಳನ್ನು ಬಿಚ್ಚದೆ ಅವಳನ್ನು ದೂಡಿಕೊಂಡು ಒಳಗೆ ಪ್ರವೇಶಿಸಿದ. ಅವನು ಅಡಗಿ ಕುಳಿತಿರುವನೆಂದು ನಂಬಿ ಆ ಕೋಣೆ, ಈ ಕೋಣೆ, ಕೊನೆಗೆ ಅಡಿಗೆ ಕೋಣೆಯನ್ನು ಹೊಕ್ಕು ನೋಡಿದ. ಅಕಸ್ಮಾತ್ ನಾರಾಯಣ ಅಲ್ಲಿರುತಿದ್ದರೆ ಅವನ ಗತಿಯೇನಾಗುತಿತ್ತೋ ! ಆದರೆ ಅವನು ಅಲ್ಲಿರಲಿಲ್ಲ. ಅದರಿಂದ ಆನಂದರಾಯನ ಕೋಪ ಇನ್ನಷ್ಟು ಪ್ರಜ್ವಲಿಸಿತು. ಮತ್ತು ಅದು ವಾಸಂತಿಯ ಮೇಲೆ ಹೊರಳಿತು. ಅವನು ಫಕ್ಕನೇ ಅವಳ ಕೈಯನ್ನು ಹಿಡಿದು "ನಾರಾಯಣ ಎಲ್ಲಿದ್ದಾನೆ, ಹೇಳು ! ಹೇಳು ! ನೀನೂ ಅವನೂ ಕೂಡಿಯೇ ನನ್ನನ್ನು ವಂಚಿಸಬೇಕೆಂದು ಮಾಡಿದಿರೇನು ? ಅವನು ಎಲ್ಲಿಗೆ ಹೋದ ? ಆಸ್ಪತ್ರೆಯ ಔಷಧ, ದುಡ್ಡು ದುಗ್ಗಾಣಿಯನ್ನೆಲ್ಲ ದೋಚಿಕೊಂಡು ಹೋದನಲ್ಲ ! ಅವನಪ್ಪ ಗಳಿಸಿಟ್ಟದ್ದೇನು ? ಅದನ್ನು ಎಲ್ಲಿಟ್ಟಿದ್ದಾನೆ, ಹೇಳು !" ಎಂದು ಗರ್ಜಿಸಿದ.

ಅವನ ಹಿಡಿತದಿಂದ ವಜ್ರಪಾಶದಂತೆ ನೋವಾಯಿತು ವಾಸಂತಿಗೆ

ಅವರೊಂದಿಗೆ ನಾರಾಯಣ ಓಡಿಹೋದ ಸುದ್ದಿ ಒಂದು ಸಿಡಿಲು! ತನ್ನ ಮೇಲೂ ಆನಂದರಾಯ ಅಪವಾದ ಹೊರಿಸಿದುದನ್ನು ಕೇಳಿ ಅವಳು ಇನ್ನಷ್ಟು ದುಃಖಿತಳಾದಳು. "ನನಗೆ ಗೊತ್ತಿಲ್ಲ, ನನಗೆ ಗೊತ್ತಿಲ್ಲ'' ಎಂದು ಉತ್ತರ ವಿತ್ತಳು. "ನಿನಗೆ ಗೊತ್ತಿಲ್ಲ, ಪಾಪ! ಹೇಳುತ್ತಿಯೋ ಇಲ್ಲವೋ ?" ಎಂದು ಆನಂದರಾಯ ಅವಳ ಕೈಯನ್ನು ತಿರುವಿ "ನಿನ್ನ ಕೈಯನ್ನು ಮುರಿದುಬಿಡು ತ್ತೇನೆ. ಹೇಳು !" ಎಂದು ಗದರಿಸಿದ. ''ದಮ್ಮಯ್ಯ! ದಮ್ಮಯ್ಯ! ಅವನು ಇಲ್ಲಿಗೆ ಬಂದಿಲ್ಲ. ನನಗೇನೂ ಗೊತ್ತಿಲ್ಲ. ದಮ್ಮಯ್ಯ! ಅಯ್ಯೋ! ಅಯ್ಯೋ!" ಎಂದು ಅವಳು ಅಳತೊಡಗಿದಳು.

"ವಾಸಂತಿ ಬಾಯಿ ! ವಾಸಂತಿ ಬಾಯಿ !" ಎಂದು ನೆರೆಮನೆಯಲ್ಲಿ ಯಾರೋ ಕೂಗಿದರು.

ಆನಂದರಾಯ ಅವಳ ಕೈ ಬಿಟ್ಟ. ಅವಳು ಗೋಡೆಯ ಬದಿಯಲ್ಲಿ ಕುಳಿತು ಭುಜಗಳನ್ನು ತಿಕ್ಕಿಕೊಳ್ಳುತ್ತ ಬಿಕ್ಕಿ ಬಿಕ್ಕಿ ದುಃಖಿಸಿದಳು. ಅವನನ್ನು ಒಮ್ಮೆಯೂ ತಲೆಯೆತ್ತಿ ನೋಡಲಿಲ್ಲ. ಆದರೆ ಅಷ್ಟರಲ್ಲಿ ವಾಸಂತಿಯನ್ನು ಕರೆದ ನೆರೆಮನೆಯವರು ಯಾರೋ ಬಂದರು. ಆನಂದರಾಯನಿಗೆ ಪರಿಚ ಯವಿಲ್ಲ. ಅವನು ಅಲ್ಲಿದ್ದುದನ್ನು ಅವರು ನಿರೀಕ್ಷಿಸಿರಲೂ ಇಲ್ಲ. ಆದುದ ರಿಂದ ಫಕ್ಕನೇ ಕಂಡು ವಿಸ್ಮಿತರಾಗಿ ಹೊಸ್ತಿಲ ಹೊರಗೇ ನಿಂತು " ಯಾಕೆ ವಾಸಂತಿ ಬಾಯಿ ? ಏನಾಯಿತು ?" ಎಂದು ಅವರು ಕೇಳಿದರು. ಅವಳು ಉತ್ತರವನ್ನೀಯದೆ ಸೆರಗಿನಿಂದ ಮೋರೆಯನ್ನು ಮುಚ್ಚಿಕೊಂಡಳು. ಆನಂದ ರಾಯನೇ ನುಡಿದ: "ಅವಳ ತಮ್ಮ ಸತ್ತು ಹೋದ! ಅದಕ್ಕೆ ಅಳುತಿದ್ದಾಳೆ!"

"ಅಯ್ಯೋ, ಪಾಪ! ಅಯ್ಯೋ, ಪಾಪ !" ಎಂದು ಅವರು ಹೇಳುತ್ತ ಹೊರಟು ಹೋದರು.

ಆನಂದರಾಯನಿಗೂ ಅಲ್ಲಿ ಇರಲು ಇಷ್ಟವೆನಿಸಲಿಲ್ಲ. ಅವನು ಮುಖ ಮಂಟಪಕ್ಕೆ ಬಂದ. ಅವನು ಮೆಟ್ಟಲುಗಳನ್ನಿಳಿದ ಮೇಲೆ ಹೋದನೆಂದು ವಾಸಂತಿ ಅರಿತಳು. ಆದುದರಿಂದ ಗಾಬರಿಯಾಗಿ ಕಣ್ಣುಗಳನ್ನೊರಸುತ್ತ ಅತ್ತಿತ್ತ ನೋಡಿದಳು. ಬಾಗಿಲೆಡೆ ಬಂದು ನಿಂತಳು. ಅವನು ರಸ್ತೆ ಹಿಡಿ ದಾಗ ಮುಖಮಂಟಪಕ್ಕೆ ಬಂದು ಕಲ್ಲುಕುಂದಕ್ಕೆ ಒರಗಿ ನೋಡಿದಳು. ಅವನು ಒಮ್ಮೆಯೂ ಹಿಂತಿರುಗಿ ನೋಡಲಿಲ್ಲ. ಗಟ್ಟಿಯಾಗಿ ಕೂಗಿ ಕರೆಯ

ಬೇಕೆಂದು ಬಯಸಿದಳು. ಆದರೆ ಗಂಟಲಿನಿಂದ ಸ್ವರವೇ ಹೊರಡಲಿಲ್ಲ. ಅವಳ ಕಣ್ಣಿನಿಂದ ಸುರಿಯುತ್ತಿದ್ದ ಕಂಬನಿಯೂ ಇಂಗಿಹೋಯಿತು. ಕಣ್ಮರೆಯಾಗುವ ವರೆಗೂ ಅವನನ್ನು ದಿಟ್ಟಿಸಿದಳು. ಆ ಮೇಲೂ ಅಲ್ಲೇ ನಿಂತುಕೊಂಡಳು. ಹಿಂದೆ ಉಡುಪಿಯಲ್ಲಿದ್ದಾಗ "ಈ ಗಿಳಿ ಯಾವಾಗ ಹಾರಿಹೋಗುತ್ತದೋ ಏನೋ?'' ಎಂದು ಅವಳಲ್ಲುದಯಿಸಿದ್ದ ಒಂದು ಚಿಂತೆ ಅವಳನ್ನು ಈಗ ಕಾಡಿಸಿತು. ಮಲೆನಾಡಿನಲ್ಲೊಂದು ಅರಗಿಳಿಯನ್ನು ಅದು ಈಗ ಹುಡುಕಿಕೊಂಡಿದೆ ಎಂದು ನೆನಸಿ ಸಂಕಟಪಟ್ಟಳು. ತಕ್ಷಣ ಅವಳ ಕಣ್ಣುಗಳು ಪುನಃ ನೀರಿನಿಂದ ತುಂಬಿಕೊಂಡವು. ದುಃಖವನ್ನು ಸಹಿಸಲಾರದೆ ಒಳಗೆ ಬಂದು ಬಾಗಿಲಿಕ್ಕಿ ನೆಲದ ಮೇಲೆ ಬಿದ್ದು ಬಿಸುಸುಯ್ದಳು. ಅವನು ಬಂದೊಡನೆಯೇ ನಾನು ನಗಲಿಲ್ಲ. ಅವನು ಕೋಪವನ್ನು ತೋರ್ಪಡಿಸಿದಾಗ ನಾನು ಸಮಾಧಾಯಿಸಲಿಲ್ಲ. ಅವನು ಕೈ ತಿರುವಿದರೇನಾಯಿತು? ಅದು ಮುರಿಯಿತೇ? ಮುರಿಯಿತೆಂದೆನ್ನೋಣ. ಅವನ ಅನ್ನದಿಂದ ಬೆಳೆದ ಕೈ! ಅದೊಂದನ್ನೇ ಕಳೆದುಕೊಳ್ಳುತ್ತಿದ್ದೆ. ಆದರೆ ಈಗ ಅವನನ್ನೇ ಕಳೆದುಕೊಂಡಂತಾಯಿತೇ, ಹೇಗೆ? ಅಯ್ಯೋ, ನಾನು ಏಕೆ ಕೂಗಿದೆ? ನಾನು ಅವನ ಇದಿರಲ್ಲಿ ಏಕೆ ಕಣ್ಣೀರು ಸುರಿಸಿದೆ? ಒರಟು ಮಾತುಗಳನ್ನಾಡಿದೆನೇ? ಅವನು ಹೊರಟಾಗ ಕಾಲುಗಳನ್ನು ಗಟ್ಟಿಯಾಗಿ ಹಿಡಿಯಲಿಲ್ಲವಲ್ಲ! ಅಯ್ಯೋ, ಅಮ್ಮಾ!'' ಎಂದು ಬಹಳ ಹೊತ್ತಿನ ವರೆಗೆ ವಾಸಂತಿ ಕಣ್ಣೀರ್ಗರೆದಳು.

ಆನಂದರಾಯ ರಸ್ತೆ ಹಿಡಿದು ನಡೆದನೇನೋ ನಿಜ. ಆದರೆ ಅದು ಯಾವ ದಾರಿಯೆಂದು ಅವನಿಗೆ ತಿಳಿದಿಲ್ಲ. ತಾನೆಲ್ಲಿ ಹೋಗುತಿದ್ದೇನೆಂದೂ ಗೊತ್ತಿಲ್ಲ. ತನಗೆ ಇದಿರಾಗುತ್ತಿರುವ ಸ್ತ್ರೀ ಪುರುಷರು, ಜಟ್ಕಾ, ಸೈಕಲ್, ಮೋಟಾರ್, ಸಿಟಿಬಸ್ ಯಾವುದರ ಪರಿವೆಯೂ ಅವನಿಗಿಲ್ಲ. ಪುಣ್ಯಕ್ಕೆ ಅವನು ರಸ್ತೆಯ ಅಂಚಿನಲ್ಲಿ ನಡೆಯುತಿದ್ದಾನೆ. ಯಾಂತ್ರಿಕವಾಗಿ ಹೆಜ್ಜೆಗಳನ್ನಿಡುತಿದ್ದ ಅವನು ಒಂದೆಡೆ ಫಕ್ಕನೇ ನಿಂತು ಬಿಟ್ಟ. ರಸ್ತೆಯನ್ನು ಹಿಂದೆ ಮುಂದೆ ಪರಿಕಿಸಿದ. ಬದಿಯಲ್ಲಿರುವ ಮನೆ ಮಠಗಳನ್ನು ನೋಡಿದ. ಓಹೋ! ದಾರಿ ತಪ್ಪಿಲ್ಲ ಎಂದಂದುಕೊಂಡು ಪುನಃ ನಡೆಯಲಾರಂಭಿಸಿದ. ಸ್ವಲ್ಪ ದೂರ ಹೋದ ಬಳಿಕ ಹಾವು ಮೆಟ್ಟಿದವರಂತೆ ಮತ್ತೆ ಅವನು ತಟ್ಟನೇ

ನಿಂತ. ಇದು ಹಂಪನಕಟ್ಟೆಗೆ ಹೋಗುವ ದಾರಿ. ನಾನು ಅಲ್ಲಿಗೇಕೆ ಹೊರಟೆ? ಅಲ್ಲಿ ನನಗೇನು ಕೆಲಸವಿದೆ? ಬೆಳ್ತಂಗಡಿಗೆ ವಾಪಾಸು ಹೋಗುತ್ತೀಯಾ? ಈಗ ಮೋಟಾರಿಲ್ಲ ಎಂದು ಚಿಂತಿಸಿದ. ಆಗ ಇನ್ನೊಂದು ವಿಚಾರ ಹೊಳೆಯಿತು: ನಾರಾಯಣ ಉಡುಪಿಗೆ ಹೋಗಿರಬೇಕು. ಅವನು ಇಲ್ಲಿಗೆ ಬಂದಿಲ್ಲ. ಈಗ ಉಡುಪಿಗೆ ತೆರಳುವ ಮೋಟಾರುಗಳು ಇವೆಯೋ ಹೇಗೆ? ನೋಡೋಣ ಎಂದು ಅವನು ವೇಗದಿಂದ ಮೋಟಾರ ನಿಲ್ದಾಣಕ್ಕೆ ಬಂದ. ಆದರೆ ಸಂಜೆಯಾಗಿದ್ದುದರಿಂದ ಕೊನೆಯ ಬಸ್ಸು ಹೊರಟು ಹೋಗಿತ್ತು.

ಆನಂದರಾಯ ಬೇಸರದಿಂದ ಬಾವಟೆ ಗುಡ್ಡದ ದಾರಿ ಹಿಡಿದ. ಆ ಏರನ್ನು ಹತ್ತುವಾಗ ಅವನ ಕಾಲುಗಳು ಸೋತುವು. ನಿಟ್ಟುಸಿರು ಬಿಡುತ್ತ ಗುಡ್ಡವನ್ನೇರಿ ಒಂದು ಒರಗು ಬೆಂಚಿನಲ್ಲಿ ಕುಳಿತ. ಕತ್ತಲೆ ಕವಿಯುತ್ತಿದೆ. ಕಾಗೆಗಳು ಗುಂಪುಗುಂಪಾಗಿ ಕೂಗುತ್ತ ಹಾರುತ್ತಿವೆ. ಬೇರೆ ಬೆಂಚು, ಮುರಕಲ್ಲುಗಳಲ್ಲಿ ಕುಳಿತ ಸ್ತ್ರೀ ಪುರುಷ ಬಾಲಕರು ಎದ್ದು ಹೋಗುತಿದ್ದಾರೆ. ಆದರೆ ಹೊರಡುವ ಯೋಚನೆ ಇಲ್ಲದೆ ಆನಂದರಾಯ ಕುಳಿತಿದ್ದಾನೆ. ಅಂಗಿಯ ಗುಂಡಿಗಳನ್ನು ತೆಗೆದು ಸಮುದ್ರದ ತಂಪು ಗಾಳಿಗೆ ಮೈಯೊಡ್ಡಿರುವನು. ಸ್ವಲ್ಪ ಹೊತ್ತಿನ ಮೇಲೆ ಅತ್ತಿತ್ತ ನೋಡಿದ. ಅಲ್ಲಿ ಯಾರೂ ಇರಲಿಲ್ಲ. ತಾನು ಒಬ್ಬಂಟಿಗನಾಗಿರುವೆನೆಂದು ಕಂಡುಕೊಂಡ. ಆಗ ಜೀವನದಲ್ಲೂ ತಾನು ಏಕಾಂಗಿಯಾಗಿಯೇ ಇರುವೆನೆಂಬ ಒಂದು ಭಾವನೆ ಅವನಲ್ಲುದಯಿಸಿತು. ಹಿಂದೆಂದೂ ಈ ರೀತಿಯ ಅನುಭವವಾಗಿರಲಿಲ್ಲ ಅವನಿಗೆ.

ಹಿಂದೊಮ್ಮೆ ಅವನು ಇದೇ ಬಾವಟೆ ಗುಡ್ಡಕ್ಕೆ ಬಂದಿದ್ದ. ವಾಸಂತಿಯೂ ಅವನೊಟ್ಟಿಗಿದ್ದಳು. ಇಬ್ಬರೂ ಒಂದು ಬೆಂಚಿಯಲ್ಲಿ ಕುಳಿತುಕೊಂಡಿದ್ದರು. ಇದಿರಿಗೆ ಸಮುದ್ರದ ನೀರು ತೋರುತಿತ್ತು. ಅಲೆಗಳು ದಂಡೆಗೆ ಬಂದು ಬಡಿಯುತಿದ್ದುವು. ಮಚ್ವಾಗಳು ಚಲಿಸುತಿದ್ದುದನ್ನು ಅವನು ಅವಳಿಗೆ ತೋರಿಸಿದ್ದ. ಮಂಗಳೂರಿನಿಂದ ಹಂಚು, ಗೇರು ಬೀಜ, ಒಳ್ಳೆಮೆಣಸು ಇತ್ಯಾದಿ ವಸ್ತುಗಳನ್ನು ಹೇರಿಕೊಂಡು ಈ ಹಾಯಿ ಹಡಗಗಳು ಕುಮಟಾ, ಕಾರವಾರ, ಗೋವಾ, ಮುಂಬಯಿಗಳಿಗೆ ಚಲಿಸುತ್ತಿವೆಯೆಂದು ವಿವರಿಸಿದ್ದ. ಬಂದರದ ಈಚೆ ಕೊಳವೆಗಳಂತೆ ಕಾಣುತಿದ್ದ ಹಂಚಿನ ಕಾರ್ಖಾನೆಗಳ ಚಿಮುಣಿಗಳನ್ನು ವರ್ಣಿಸಿದ. ಕತ್ತಲಾದ ಮೇಲೂ ಅವರು

ಹೊರಡುತಿದ್ದಿಲ್ಲ. ಕತ್ತಲೆಯಾಪಂತೆ ವಾಸಂತಿ ಅವನ ಒತ್ತಿಗೆ ಮತ್ತೆ ಮತ್ತೆ ಸರಿಯುತಿದ್ದಳು. ಬಲಗೈಯನ್ನು ಅವಳ ನಡುವಿಗೆ ಸುತ್ತಿ ಅವನು ಆಕಾಶದ ಅದ್ಭುತ ಚಮತ್ಕಾರಗಳನ್ನು ಹೇಳುತಿದ್ದುದುಂಟು. ತಾರೆಗಳನ್ನು ಅವನು ತೋರಿಸಿ "ನಿನ್ನ ಕಣ್ಣುಗಳು ಆ ತಾರೆಗಳನ್ನು ನಾಚಿಸುತ್ತಿವೆ" ಎಂದು ಹೇಳಿದ್ದ. ಅದರಿಂದ ಅವಳು ತುಂಬ ಪ್ರಸನ್ನಳಾಗಿದ್ದಳು. ಮತ್ತು "ಈ ತಾರಾಲೋಕದಲ್ಲಿ ಚಂದ್ರಮ ನೀನು" ಎಂದು ಹೇಳಿ ಪ್ರೇಮದಿಂದ ಚಿವುಟಿದ್ದಳು.

ಆದರೆ ಈ ದಿನ ಅದೇ ಕಣ್ಣುಗಳು ಕರಗಿ ನೀರು ಸುರಿಸುವಂತಾಯಿತಲ್ಲ! ಅದನ್ನು ನೆನಸಿ ಆನಂದರಾಯನ ಮನಸ್ಸು ಸ್ವಲ್ಪ ಕರಗಿತು. ಆಕಾಶದಲ್ಲಿ ಒಂದೊಂದೇ ತಾರೆ ಮಿನುಗತೊಡಗಿದಂತೆ ವಾಸಂತಿಯ ಒಂದೊಂದೇ ಗುಣವು ಅವನ ಕಣ್ಣ ಮುಂದೆ ಪ್ರಕಾಶ ಬೀರಿತು. ಅವಳು ಚೆಲುವೆ. ಕಲಿತವಳು. ಯಾರೂ ಅವಳನ್ನು ಲಗ್ನವಾಗುತಿದ್ದರು. ದೊಡ್ಡ ದೊಡ್ಡ ಜಮೀನ್ದಾರರೂ ಅವಳನ್ನು ಅರಸಿಯಂತೆ ಮೆರೆಸುತಿದ್ದರು. ಆದರೆ ಅವಳು ಅದನ್ನೆಳಸಲಿಲ್ಲ. ವೇಶ್ಯೆಯಾದರೂ ಆ ಕಸುಬಿನ ಮೇಲೆ ಅವಳಿಗೆ ಅಸಹ್ಯವಿದೆ. ಮರ್ಯಾದೆಯ ಜೀವನ ನಡೆಸಬೇಕೆಂಬ ಹಂಬಲವಿದೆ. ನಾನು ಲಗ್ನವಾದೆನೆಂದು ತಿಳಿದ ಮೇಲೂ ಅವಳು ಸಂಬಂಧವನ್ನು ಕಡಿದುಕೊಳ್ಳಲಿಲ್ಲ. ಎಂತಹ ಋಣಾನುಬಂಧ! ಎಂತಹ ಪ್ರೇಮ! ಅವಳ ಅಂಗಾಂಗಗಳೆಷ್ಟು ಸುಂದರ, ಮಧುರ! ಹೀಗೆ ಯೋಚಿಸಿದ ಆನಂದರಾಯ ಮತ್ತೆ ಹಣೆಗೆ ಕೈಯಿಟ್ಟುಕೊಂಡು "ಕೈ ಹಿಡಿದು ತಿರುವಿದೆ. ಎಷ್ಟು ನೋವಾಯಿತೋ ಏನೋ! ಏನು ತಿಳಿದುಕೊಂಡಳೋ! ಎಷ್ಟು ಸಿಟ್ಟು ದೇವರೇ, ನಿನಗೆ?" ಎಂದು ತನ್ನನ್ನೇ ಹಳಿದುಕೊಂಡ. ಮತ್ತು ತಕ್ಷಣ ಅಲ್ಲಿಂದೆದ್ದು ವಾಸಂತಿಯನ್ನು ಹೇಗೆ ಸಮಾಧಾನಗೊಳಿಸಲೆಂದು ಯೋಚಿಸುತ್ತ ಹಿಂತಿರುಗಿದ.

ಆನಂದರಾಯ ಕಾಲುಗಳಿಗೆ ಬೂಟುಗಳನ್ನು ಸಿಕ್ಕಿಸಿಕೊಂಡಿದ್ದರೂ ಕಳ್ಳ ಹೆಜ್ಜೆಗಳನ್ನಿಡುತ್ತ ನಡೆದ. ಮುಖಮಂಟಪದ ಸಿಮೆಂಟ್ ನೆಲದ ಮೇಲೆ ಕೂಡ ಸದ್ದಾಗದಂತೆ ಬಂದ. ಬಾಗಿಲು ಹಾಕಿತ್ತು. ಆದುದರಿಂದ ಅವನು ಬೆರಳುಗಳಿಂದ ಮೆಲ್ಲಗೆ ಕದ ತಟ್ಟಿ "ವಸೀ, ವಸೀ" ಎಂದು ಕೋಮಲ ಕಂಠದಿಂದ ಕರೆದ.

"ಯಾರು ?"

"ನಾನು !" ಎಂದು ಅವನು ಅಳುಕಿ ಹೇಳಿದ.

ವಾಸಂತಿ ಬಾಗಿಲು ತೆರೆದಳು. ಮತ್ತು ಅವನು ಒಳಗೆ ಬಂದೊಡನೆ ಮುಚ್ಚಿದಳು. ಅವನು ಕೋಟನ್ನು ತೆಗೆದು ಅವಳ ಕೈಯಲ್ಲಿ ಕೊಟ್ಟ. ಕುರ್ಚಿಯಲ್ಲಿ ಕುಳಿತು ಬೂಟುಗಳನ್ನು ಬಿಚ್ಚಲೆತ್ನಿಸಿದಾಗ ಅವಳೇ ಬಂದು ಕಾಲ ಬುಡದಲ್ಲಿ ಕುಳಿತು ಪಾರ ಬಿಡಿಸಿದಳು. ಆಗ ಆನಂದರಾಯ ಅವಳ ಭುಜದ ಮೇಲೆ ಕೈ ಆಡಿಸಿದ. ಅವಳು ತಲೆತಗ್ಗಿಸಿಕೊಂಡೇ ಇದ್ದಳು. ಆನಂದರಾಯ ಮತ್ತೆ ಅವಳ ಗಲ್ಲವನ್ನೆತ್ತಿ ನೋಡಿದ. ವಾಸಂತಿ ಕಣ್ಮುಚ್ಚಿ ಕೊಂಡಳು. ಮತ್ತು ಅವಳ ಆನನದಿಂದ ಕಂಬನಿ ಕೆನ್ನೆಯ ಮೇಲೆ ಇಳಿ ಯಿತು. ಅವನ ಮನಸ್ಸು ತುಂಬ ಕದಡಿತು. ಮತ್ತು ಅವಳನ್ನು ಮೈಮೇಲೆ ಎಳೆದುಕೊಂಡು "ವಸೀ, ನನ್ನನ್ನು ಕ್ಷಮಿಸು. ನನ್ನ ಮೇಲೆ ಸಿಟ್ಟಾಗಬೇಡ'' ಎಂದು ತಲೆ ಬೆನ್ನುಗಳನ್ನು ಸವರಿದ. ಅವನ ತೊಡೆಯ ಮೇಲೆ ತಲೆಯ ನ್ನಿಟ್ಟ ವಾಸಂತಿ ಬಹಳ ಕಣ್ಣೀರ್ಗರೆದಳು. ಮಾತನಾಡಲಿಲ್ಲ. ಅವಳ ಆ ಮೌನವೇ ಅವನ ಹೃದಯವನ್ನು ದಹಿಸಿತು. ರಾತ್ರಿ ಒಂದೆ ಹಾಸಿಗೆಯಲ್ಲಿ ಒರಗಿದಾಗಲೂ ಅವಳು ಸರಸೋಕ್ತಿಗಳನ್ನಾಡಲಿಲ್ಲ. ಅವನು ನಾಚಿಕೆಯಿಂದ ನೋಡುತಿದ್ದ. "ವಸೀ, ನನ್ನ ತಪ್ಪಾಗಿದೆ. ಇನ್ನು ಈ ರೀತಿ ದುಃಖಕ್ಕೆ ಗುರಿ ಪಡಿಸಬೇಡ. ಯಾವ ಶಿಕ್ಷೆಯನ್ನು ಕೊಡುತ್ತೀಯೋ ಕೊಡು" ಎಂದು ಬೇಡಿದ. ಆಗ ಅವಳು ಪುನಃ ಕಣ್ಣೀರನ್ನು ಕರೆದಳು. ಮತ್ತು ಅವಳ ಆ ಕೋಪವೂ ರಮ್ಯವಾಗಿಯೇ ಪರಿಣಮಿಸಿತು. ಏಕೆಂದರೆ ಆನಂದರಾಯ ಅವಳನ್ನು ಬಲಾತ್ಕಾರದಿಂದ ಎಳೆದು ಆಲಿಂಗಿಸಿದ. ಅನೇಕ ವರುಷಗಳ ಪ್ರೇಮ ಕಾಮಗಳ ಅಂಟುನಂಟಿನಿಂದ ಅವಳ ಕೋಪ ಕುಸಿದು ಬಿದ್ದಿತು. ಸ್ಪರ್ಶಾಪೇಕ್ಷೆಯಿಂದ ಅರಳುವ ಹೂವಿನಂತೆ ಅವಳೆದೆ ವಿಶಾಲವಾಯಿತು. ಮತ್ತು ಅದರಲ್ಲಿ ಆನಂದರಾಯ ತುಂಬಿಯಂತೆ ಹುದುಗಿಕೊಂಡ. "ಗುಲಾಬಿ ಯಂತಿದ್ದ ನಿನ್ನ ಕೆನ್ನೆಗಳು ಬಿಳುಪೇರಿದೆಯಲ್ಲ!'' ಎಂದು ಕಾಲೋಚಿತ ವಾದ ಜಾಣತನದ ನುಡಿಗಳನ್ನು ಅವನು ಆಡಿ ಅವಳ ಬಾಯಿ ಬಿಡಿಸಿದ. "ಏನೂ ಇಲ್ಲ'' ಎಂದೆಂದು ಅವಳು ಒಂದೊಂದೇ ಉತ್ತರ ಕೊಡಲಾರಂಭಿಸಿ ದಳು. ಸರಸ ಸಲ್ಲಾಪದಿಂದ ಅವನಿಗೆ ಕಾತರ ಹೆಚ್ಚಿತು. ಕೈಯಿಂದ ಅವಳ

ಸೀರೆಯ ಗಂಟನ್ನು ಬಿಚ್ಚಿ, ಕಾಲಿನ ತುದಿ ಬೆರಳಿನಿಂದ ಇಕ್ಕುಳದಂತೆ ಹಿಡಿದೆಳೆದು ಎಸೆದು ಆ ಕಾಲದಲ್ಲಿ ಪ್ರಿಯನಿಗುಚಿತವಾದ ಕಾರ್ಯದಲ್ಲಿ ತಲ್ಲೀನನಾದ. ಆದರೆ ಪ್ರಯಾಣದಿಂದ ಅವನು ಬಳಲಿದ್ದ. ಮನಃಕ್ಷೋಭೆಗೂ ಒಳಗಾಗಿದ್ದ. ಆದುದರಿಂದ ಬೇಗನೇ ದಣಿದ. ಆದರೆ ವಾಸಂತಿಯ ಸ್ಥಿತಿ ಹಾಗಲ್ಲ. ಕೂತಲ್ಲಿ ತಿಂದುಂಡು ಇದ್ದವಳು. ಕೆರಳಿಸಿದ ಕಾಮನೆಗಳು ಅಷ್ಟು ಬೇಗನೇ ಶಾಂತವಾಗಲಾರವು. ಹೀಗಾಗಿ ಪುನಃ ಅವನನ್ನು ಪ್ರೇರೇಪಿಸಿದಳು. "ಇನ್ನು ಸಾಕು" ಎಂದು ಅವಳು ಸೀತ್ಕರಿಸಿದ ಮೇಲೆ ಆನಂದರಾಯ ಅವಳೊತ್ತಿಗೆ ಒರಗಿದ. ದೇಹಾಯಾಸದಿಂದ ಬೆವರಿನ ಹನಿಗಳು ಒಡೆದುವು. ಕಣ್ಣುಗಳು ಬಳಲಿದುವು. ಅವನ ವೈಮನಸ್ಸು ಈ ರೀತಿ ಪುಡಿಯಾದಾಗಲೇ ಅವಳು ಅವನನ್ನು ಜಯಿಸುವ ಒಂದೊಂದೇ ವಾಗ್ಬಾಣಗಳನ್ನೆಸೆಯುತ್ತಾಳೆ. ಈಗ ಕೂಡ ತನ್ನ ವೃತ್ತ ಕುಚಗಳನ್ನು ಅವನೆದೆಗೊತ್ತಿ, ಹಸ್ತಗಳಿಂದ ಅವನ ತಲೆ ಹಿಡಿದು, ಮೋರೆಗೆ ಮೋರೆ ತಂದು "ನಾರಾಯಣ ಯಾವಾಗ ಹೋದ?" ಎಂದು ಕೇಳಿದಳು.

"ನಿನ್ನೆ"

"ಏನೇನು ತೆಗೆದುಕೊಂಡು ಹೋದ ?"

"ಕೈಗೆ ಸಿಕ್ಕಿದ್ದು. ಔಷಧ, ಇಂಜೆಕ್ಷನ್, ದುಡ್ಡು ದುಗ್ಗಾಣಿ ಎಲ್ಲ"

"ದುಡ್ಡೆಲ್ಲಿತ್ತು?"

"ಪೆಟ್ಟಿಗೆಯಲ್ಲಿ"

"ಅಲ್ಲೇಕೆ ಇಟ್ಟಿದ್ದಿರಿ ?"

"ಹೀಗಾಗುತ್ತದೆಂದು ಹೇಗೆ ಗೊತ್ತು? ಕನಸು ಬಿದ್ದಿತ್ತೇನು ?"

"ನಾನೂ ಕಳ್ಳಿಯೆಂದು ಭಾವಿಸಿ ಇಲ್ಲಿಗೆ ಬಂದಿರಾ ?"

"ಅಲ್ಲ. ಇಲ್ಲಿಗೆ ಅವನು ಬಂದಿರಬೇಕೆಂದು ಬಂದೆ"

"ಅವನು ಉಡುಪಿಗೆ ಹೋಗಿರಬಾರದೇಕೆ ?"

"ಹೋಗಿರಬಹುದು"

"ಅಲ್ಲಿಲ್ಲದಿದ್ದರೆ ?"

"ಮಾಡುವುದೇನು ? ಗುಳುಮ್ಮಾಯಿ ಸ್ವಾಹಾ ಆಯಿತೆಂದು ಸುಮ್ಮನಿರುವುದು."

"ನೀವು ಪೋಲೀಸರಿಗೇಕೆ ತಿಳಿಸಲಿಲ್ಲ ?''

"ಮತ್ತೆ ಪೋಲೀಸರಿಗೆ! ಇಷ್ಟು ಕಳೆದುಕೊಂಡದ್ದಲ್ಲದೆ ಮತ್ತೆ ಅವರಿಗಷ್ಟು ತಿನ್ನಿಸಬೇಕೇನು? ಯಾರು ಕಚೇರಿಗೆ ದಿನ ಬೆಳಗಾದರೆ ಓಡುತ್ತಾರೆ? ತಿನಲಿ, ಪರಭಾರೀ ಮನುಷ್ಯನಲ್ಲಲ್ಲ. ಅವನ ಋಣ ಅಷ್ಟಿತ್ತು. ತಿಂದ. ಹಾಳಾಗಿ ಹೋಗಲಿ.''

"ಹಾಗಿದ್ದರೆ ಇಷ್ಟು ಸಿಟ್ಟು, ಸಿಡುಕು ಏತಕ್ಕಾಗಿ ?"

"ನಿನಗೆ ಗೊತ್ತಿಲ್ಲ ವಸೀ. ಅವನು ಅಷ್ಟು ದೋಚಿಕೊಂಡು ಹೋದುದರಿಂದ ನನ್ನ ಸಂಪತ್ತೆಲ್ಲ ಸೂರೆಯಾದಂತಾಗಲಿಲ್ಲ. ಅವನು ಕೇಳುತಿದ್ದರೆ ನಾನೇ ಕೊಡುತಿದ್ದೆ. ಅವನನ್ನು ಒಂದು ದಾರಿಗೂ ಹಿಡಿಸುತಿದ್ದೆ. ಅದರೆ ಈ ರೀತಿ ಮಾಡಬಾರದಿತ್ತು, ನೋಡು. ಊರಲ್ಲೆಲ್ಲ ಧಮಾಮಿಯಾಯಿತು. ಎಂತಹ ಅಪಮಾನ ನೋಡು! ನನ್ನ ಮೋರೆಗೆ ಮೂರು ಕಾಸಾಯಿತು. ಊರಲ್ಲಿ ತಲೆ ಎತ್ತಿ ಅಲೆದಾಡುವಂತಿಲ್ಲ. ನನ್ನಿದಿರಿಗೆ "ಹೆಂ! ಹೆಂ!" ಎಂದು ಹಲ್ಲು ಕಿರಿದು ಚಂದದ ನುಡಿಗಳನ್ನಾಡುತ್ತಾರೆ. ನನ್ನ ಬೆನ್ನು ಕಂಡರೋ ಇಲ್ಲವೋ, ಮಾತಿಗೆ ಆರಂಭ! ಜನರಿಗೆ 'ಸೂ' ಈ ಒಂದು ಎಳೆ ಸಿಕ್ಕರೆ ಸಾಕು. ಸುರುವಾಗುತ್ತದೆ ಹಲ್ಕಾ ಬೈಗಳು! ಅವನ ತಾಯಿ ತಂದೆ, ಅಜ್ಜ ಮುತ್ತಜ್ಜ, ಇದ್ದವರು ಇಲ್ಲದವರು, ಸತ್ತವರು ಸ್ವರ್ಗದಲ್ಲಿದ್ದವರು ಎಲ್ಲರೂ ಅವರ ನಾಲಿಗೆಯಲ್ಲಿ ನಲಿದಾಡುತ್ತಾರೆ. ಊರಲ್ಲಿ ತಲೆಎತ್ತಿ ಅಲೆದಾಡುವಂತಿಲ್ಲ."

"ಅವನಿಗೆ ಎಂತಹ ದುರ್ಬುದ್ಧಿ ಬಂತು, ದೇವರೇ !''

"ನೋಡು, ನೀನೇ ನೋಡು.''

"ನಾನು ಹೋಗಿಬಿಡುತ್ತೇನೆ ಎಂದು ಹಿಂದೊಮ್ಮೆ ನನ್ನೊಡನೆ ಹೇಳಿದ್ದ. ಏನೋ ಬೇಸರದಿಂದ ಹೀಗೆ ನುಡಿದಿರಬೇಕೆಂದು ನಾನು ಸುಮ್ಮಗಿದ್ದೆ. ಹೀಗೆಲ್ಲ ಮಾಡುತ್ತಾನೆಂದು ಗೊತ್ತಾಗಲಿಲ್ಲ. ಉಂಡ ಮನೆಗೆ ಎರಡು ಬಗೆದಂತಾಯಿತಲ್ಲ, ದೇವರೇ.''

"ಎರಡು ಬಗೆಯುವುದೇನು, ಚುಹಾ? ಹಿಂದಿನಿಂದ ಬಂದು ಬೆನ್ನು ತಿವಿದಂತಾಯಿತು. ಬಂಗಾಡಿಯ ಬೀಗರು ಕೇಳಿದರೆ ಏನೆಂದಾರು? ದೊಡ್ಡ ಅಪಮಾನ, ನಾಚಿಕೆಯ ಪ್ರಸಂಗ! ನಮ್ಮ ಒಳಗಿನ ಗುಟ್ಟು ಏನೇ ಇರಲಿ,

ಬೀಗರಿಗೆ ಅವರ ಗಂಧಗಾಳಿ ಬೀಸಬಾರದು. ನಾವು ದೊಡ್ಡ ಮನುಷ್ಯರೆಂದು ನಟಿಸಬೇಕು. ಹಾಗಿದ್ದರೆ ಅತ್ತೆ, ಮಾವ, ಭಾವ ಅಷ್ಟೇ ಏಕೆ ಹೆಂಡತಿಗೂ ಪರಿಮಳವಾಗುತ್ತದೆ. ನಾವು ಸಲಿಗೆ ಕೊಟ್ಟೆವೋ, ನಮ್ಮ ಗುಟ್ಟು ರಟ್ಟಾಯಿತೋ, ಆಗ ಇದ್ದ ಗೌರವವನ್ನು ಕಳೆದುಕೊಳ್ಳುತ್ತೇವೆ. ಕಾಲಿನ ಕಸವಾಗುತ್ತೇವೆ. ಅಳಿಯ ಬಂದನೋ ಬಂದ; ಹೋದನೋ ಹೋದ ಎಂದಷ್ಟಕ್ಕಷ್ಟೇ! ಬಡತನ ಬಂದ ಮೇಲೆ ಬಂಧುಗಳ ಸಮೀಪವಿರಬಾರದೆಂದು ಹೇಳುತ್ತಾರೆ. ಅಪಕೀರ್ತಿಗೆ ಗುರಿಯಾದಾಗಲೂ ಹಾಗೆಯೇ."

ಉಡುಪಿಯಲ್ಲಿದ್ದಾಗ ಕೂಡ ಆನಂದರಾಯ ಇದೇ ರೀತಿ ನುಡಿದಿದ್ದುದನ್ನು ವಾಸಂತಿ ಸ್ಮರಿಸಿಕೊಂಡಳು. ಎಲ್ಲಾದರೂ ಹೋಗಬೇಕೆಂಬ ವಿಚಾರಗಳು ಪುನಃ ಅವನ ತಲೆಯಲ್ಲಿ ಸುಳಿದಾಡುತ್ತಿರಬೇಕೆಂದು ಅವಳು ಗ್ರಹಿಸಿದಳು. ಆದರೆ ಹಿಂದಿನಂತೆ ಈ ಸಲ ಅದನ್ನು ಕೇಳುವ ಧೈರ್ಯವಾಗಲಿಲ್ಲ ಅವಳಿಗೆ. ಅದರಿಂದ ಸ್ವಲ್ಪ ಭಯವೂ ಆಯಿತು. ನಿಂದೆ ಅಪಮಾನಗಳಿಂದ ಅವನ ಮನಸ್ಸು ನೊಂದಿದೆ. ಹೀಗಿರುವಾಗ ಕೇಳುವುದುಚಿತವಲ್ಲವೆಂದು ನುಂಗಿಕೊಂಡಳು. ಆದರೂ ಓಡಿ ಹೋಗುವ ವಿಚಾರ ಪದೇ ಪದೇ ಈ ಮನುಷ್ಯನ ತಲೆಯಲ್ಲಿ ಓಡಾಡುತ್ತಿದೆಯಲ್ಲ ಎಂದು ವ್ಯಸನಪಟ್ಟಳು. ಅವನ ಮೋರೆಯನ್ನಾವರಿಸಿದ ಚಿಂತೆ ಸಂಸರ್ಗ ರೋಗದಂತೆ ಅವಳಿಗೂ ಅಂಟಿಕೊಂಡಿತು.

ಬೆಳಿಗ್ಗೆ ಆನಂದರಾಯ ಕರಾವಳಿ ಮಾರ್ಗವಾಗಿ ಉಡುಪಿಗೆ ಹೊರಟ. ವಾಸಂತಿ ಮುಂದೆ ಅವನು ಉಡುಪಿ ಪ್ರಯಾಣವನ್ನು ತಿಳಿಸಿರಲಿಲ್ಲ. ತಾನೂ ಬರುವೆನೆಂದು ಅವಳು ಹಟ ಹಿಡಿವಳೆಂದು ಅವನಿಗೆ ಗೊತ್ತಿತ್ತು. ಕರಾವಳಿ ರಸ್ತೆಯಿಂದ ಒಮ್ಮೆ ಪ್ರಯಾಣ ಮಾಡಬೇಕೆಂದು ಅವಳು ಅನೇಕ ಸಲ ತನ್ನ ಮನದಾಸೆಯನ್ನು ನಿವೇದಿಸಿಕೊಂಡಿದ್ದಳು. ಏಕೆಂದರೆ ಈ ಮಾರ್ಗದಿಂದ ತೆರಳುವಾಗ ಮೂಲ್ಕಿ, ಪಡುಬಿದರೆ, ಎರ್ಮಾಳ್, ಉಚ್ಚಿಲ, ಕಾಪು, ಕಟ್ಪಾಡಿ ಮೊದಲಾದ ಸಣ್ಣ ಸಣ್ಣ ನಗರಗಳನ್ನು ನೋಡುವುದಕ್ಕಾಗುತ್ತದೆ. ಕೂಳೂರು, ಮೂಲ್ಕಿ, ಪಾವಂಜೆ, ಉದ್ಯಾವರ ಮೊದಲಾದ ಕಡೆ ಅಡ್ಡ ನದಿಗಳಿವೆ. ದೋಣಿಯಲ್ಲಿ ಹೊಳೆಗಳನ್ನು ದಾಟಬೇಕು. ರಸ್ತೆಯ ಇಮ್ಮಗ್ಗಲುಗಳಲ್ಲಿರುವ ಗದ್ದೆ, ನದಿಯ ದಂಡೆಗಳಲ್ಲಿರುವ ತೆಂಗಿನ ತೋಟ,

ನದಿಯ ಮೇಲಾಗುವ ಜಲವಿಹಾರ ಕಣ್ಮನಗಳಿಗೆ ಆನಂದಕರ ! ಮೋಟಾರ ಪ್ರಯಾಣದ ದೇಹಾಯಾಸವಾಗುವುದಿಲ್ಲ. ಪಾಪಂಜೆ, ಉಚ್ಚಿಲ ದೇವಸ್ಥಾನಗಳು ರಸ್ತೆಯ ಬದಿಯಲ್ಲಿರುವುದರಿಂದ ಕುಳಿತಲ್ಲಿಂದಲೇ ದೇವರಿಗೆ ಕೈಜೋಡಿಸಬಹುದು. ಕಾಪು ಮಾರಿಯಮ್ಮನ ಗುಡಿ, ದೀಪಸ್ತಂಭಗಳೂ ಕಾಣಿಸುತ್ತಿವೆ. ಅವಳ ತಾಯಿ ಹೇಳುತಿದ್ದುದನ್ನು ವಾಸಂತಿ ಕೇಳಿ ಆನಂದ ರಾಯನ ಮುಂದೆ ನುಡಿಯುತಿದ್ದುದುಂಟು. ಈಗ ನದಿ, ತೋಟ, ಸಮುದ್ರ ಗರ್ಜನೆ, ಗುಡಿ ಮೊದಲಾದವುಗಳನ್ನು ಕಂಡು ಕೇಳಿದ ಆನಂದರಾಯ ಅದೆಲ್ಲವನ್ನು ನೆನಪಿಗೆ ತಂದುಕೊಂಡ. "ಕರೆದುಕೊಂಡು ಬರಬಹುದಿತ್ತು" ಎಂದು ಕೂಡಾ ಅವನ ಹೃದಯಾಂತರಾಳದಲ್ಲಿ ಪಶ್ಚಾತ್ತಾಪ ಮೂಡಿತು. ಚಂದ್ರಾವತಿಯೂ ಅದೇ ಅಪೇಕ್ಷೆಯನ್ನು ಅಂದು ತೋರಿಸಿದಳು.

ನಾರಾಯಣ ಉಡುಪಿಗೂ ಬಂದಿರಲಿಲ್ಲ. ಅವನು ಬೆಳ್ತಂಗಡಿಯಿಂದ ಹೊರಡುವ ಮೊದಲು ಗೀಚಿದ್ದ ಒಂದು ಪತ್ರ ಮಾತ್ರ ಚಂದ್ರಾವತಿಗೆ ದೊರಿತಿತ್ತು. ಅದರಲ್ಲಿ ವಿಶೇಷವೇನಿಲ್ಲವೆಂದು ಅವಳು ತಿಳಿಸಿದಳು. ಅದನ್ನು ಕೊಡಲಿಲ್ಲ. ಚಂದ್ರಾವತಿ ಹಿಂದಿನಂತೆ ಅವನಿಗೆ ಸತ್ಕಾರವನ್ನು ಮಾಡಲಿಲ್ಲ. ಅವಳ ಮೋರೆಯಲ್ಲಿ ನಗುವಿರಲಿಲ್ಲ. ವಾತಾವರಣವನ್ನು ಅರಿತ ಆನಂದ ರಾಯ ಐದು ನಿಮಿಷಗಳಿಗಿಂತ ಹೆಚ್ಚು ಅಲ್ಲಿ ನಿಲ್ಲಲಿಲ್ಲ. ಹೋಟೇಲಿನಲ್ಲಿ ಸ್ನಾನಪಾನ ಭೋಜನ ಮುಗಿಸಿ, ಮಣಿಪಾಳ, ಹಿರಿಯಡ್ಕ, ಕಾರ್ಕಳ, ಮೂಡಬಿದರೆ ಮಾರ್ಗವಾಗಿ ಮಂಗಳೂರಿಗೆ ಹಿಂತಿರುಗದೆ ಸಂಜೆ ಬೆಳ್ತಂಗಡಿ ಸೇರಿದ.

## ೧೨ ನೇಯ ಅಧ್ಯಾಯ

ಮಳೆಗಾಲ ಆರಂಭವಾಯಿತು. ಈ ಮಲೆನಾಡಿನಲ್ಲಿ ಅದರ ಆರ್ಭಟ ಬಹಳ. ಗಾಳಿ, ಮಳೆ ಮತ್ತು ಮಿಂಚುಗಳು ಮೇಳಗೂಡಿ ತಾಂಡವ ನೃತ್ಯವನ್ನು ಆಡುತ್ತವೆ. ಕರಾವಳಿ ಗಾಳಿ ಜೋರಾಗಿ ಬೀಸುತ್ತದೆ. ಅದು ತನ್ನ ಬೆನ್ನ ಮೇಲೆ ಕರಿ ಮೋಡಗಳ ಮೂಟೆಗಳನ್ನು ಹೊತ್ತು ತರುತ್ತದೆ. ಪಶ್ಚಿಮ ಘಟ್ಟದ ಸಾಲು ಗಾಳಿಯನ್ನು ತಡೆಯುವದರಿಂದ ಬಂಗಾಡಿಯಲ್ಲಿ

ಮತ್ತೆ ಮತ್ತೆ ಅದು ಸುಳಿದು ಹಾವಳಿಯನ್ನೆಬ್ಬಿಸುತ್ತದೆ. ಮುಳಿಹುಲ್ಲು ಮನೆಗಳು ಅದಕ್ಕೆ ಆಹುತಿ. ಅದು ಉರುಳಿಸುವ ತೆಂಗು ಕಂಗು ಮರ ಮಟ್ಟುಗಳಿಗೂ ಕಡಿಮೆಯಿಲ್ಲ. ಈ ಗಡಿಬಿಡಿಯಲ್ಲಿ ಮೋಡಗಳು ಅಲ್ಲೇ ಕೂಡಿ ಆಕಾಶವನ್ನು ಕರಿ ಪರದೆಯಂತೆ ಮುಚ್ಚಿ ಬಿಡುತ್ತವೆ. ಅನೇಕ ದಿನಗಳ ವರೆಗೆ ಸೂರ್ಯದರ್ಶನವಾಗದೆ ಇರುವುದೂ ಉಂಟು. ಗುಡುಗು ಮಿಂಚುಗಳು ಗಂಗಾಮನದ ನಗಾರಿ ದುರುಸು ಬಾಣಗಳಂತೆ ಕಾಣಿಸುತ್ತವೆ. ಆ ಮೇಲೆ ಹಿಡಿದ ಮಳೆ ಬಿಡುವುದೂ ಇಲ್ಲ.

ಕುದುರೆ ಮುಖ, ಬಲ್ಲಾಳರಾಯ ದುರ್ಗ ಪರ್ವತಾವಳಿಗಳಲ್ಲಿರುವ ಕೋಡುಗಲ್ಲುಗಳ ಮೇಲೆ ಕೊಡವೆತ್ತಿ ದೇವಕನ್ನಿಕೆಯರು ಅಭಿಷೇಕ ಮಾಡಿದ ಜಲಧಾರೆ ಕೆರೆ ತೊರೆ ತೋಡು ಹೊಳೆಗಳಲ್ಲಿ ತುಂಬಿ ಹರಿಯುತ್ತದೆ. ಸಣ್ಣ ಸಣ್ಣ ತೊರೆಗಳನ್ನು ದಾಟುವುದೇ ಕಷ್ಟ. ಕಿಲ್ಲೂರ್ ಸಾರ್, ನೇತ್ರಾವತಿ ಹೊಳೆ, ಬಂಡಾಜೆಸಾರ್ ದಾಟುವುದಂತೂ ದೂರವೇ ಉಳಿಯಿತು. ಹೊಳೆ ಹಳ್ಳಗಳ ಈಚೆ ದಂಡೆಯಲ್ಲಿದ್ದವರು ಈಚೆ. ಆಚೆಯಲ್ಲಿದ್ದವರು ಆಚೆ. ಒಂದು ದಿನವಲ್ಲ, ವಾರವಲ್ಲ, ತಿಂಗಳಲ್ಲ, ಅನೇಕ ತಿಂಗಳುಗಳ ವರೆಗೆ ಹೀಗೆಯೇ. ಹೊಳೆಗಳಿಗೆ ದೋಣಿಗಳೂ ಇಲ್ಲ. ದೋಣಿ ನಡೆಸುವುದೂ ಅಶಕ್ಯ. ಏಕೆಂದರೆ ನೀರಿನ ರಭಸ ಬಹಳ. ಶಾಂತವಾಗಿ ನೀರು ಹರಿಯುವದಿಲ್ಲ. ಇಳಿಜಾರು ನೆಲದಲ್ಲಿ ಪ್ರವಾಹವಿದೆ. ಕೆಳಗೆ ಕೊರಕಲು, ಕಲ್ಲುಬಂಡೆ. ಮಧ್ಯೆ ಮಧ್ಯೆ ಗಿಡಗಳೂ ಬೆಳೆದಿರುತ್ತವೆ. ನೆರೆಯಲ್ಲಿ ಗಿಡಮರಗಳು ತೇಲಿ ಬರುವುದೂ ಉಂಟು. ಸಮುದ್ರದ ಮಹಾ ತೆರೆಗಳಂತೆ ಭೋರ್ಗರೆದು ಹರಿವ ಈ ಕೆನ್ನೀರನ್ನು ಕಂಡೊಡನೆ ಕಣ್ಣು ಕತ್ತಲೆ ಬಂದೀತು. ದಾಟುವ ಸಾಹಸಕ್ಕೆ ಧುಮುಕುವವರು ವಿರಳ. ಒಂದು ವೇಳೆ ದಾಟಬೇಕಾದ ಅಗತ್ಯ ಬಿದ್ದರೆ ಈ ನದಿಗಳ ಮೂಲದ ಕಡೆ ತೆರಳಬೇಕು. ಒಳದಾರಿಗಳನ್ನೆಲ್ಲ ಸುತ್ತಿ, ಎದ್ದು ಬಿದ್ದು, ಎಡವಿ, ಕಲ್ಲು ಮುಳ್ಳು ತುಳಿದು, ಹುಣಿಗದ್ದೆ ಕೆಸರು ಕೊಂಪೆ ಹಾರಿ, ಎಲ್ಲೆಲ್ಲೋ ಹೋಗಿ, ಏನೇನೋ ಕಷ್ಟಪಟ್ಟು ತೊಯ್ದು, ಒದ್ದೆ ಮುದ್ದೆಯಾಗಿ ಹೊಳೆ ದಾಟುವುದು ಒಂದು ಯಾತ್ರೆಯೇ ಆಗುತ್ತದೆ. ಹೀಗಾಗಿ ಜನರು ಊರು ಬಿಟ್ಟು ಹೋಗುವಂತಿಲ್ಲ. ಬಂಗಾಡಿಗೆ ಹೊರಗಿನ ಜನರ ಸಂಪರ್ಕವೂ ಇಲ್ಲ. ಬೇಸಾಯವೊಂದನ್ನು ಬಿಟ್ಟರೆ

ಬೇರೇನು ಕೆಲಸವಿಲ್ಲ. ಸ್ತ್ರೀಪುರುಷರು ಕಂಬಳಿ ಹೊದ್ದು ತಂತಮ್ಮ ಮನೆಯೊಳಗೆ ಬೆಚ್ಚಗೆ ಹಗಲೂ ಕುಳಿತುಬಿಡುತ್ತಾರೆ. ಮಳೆ ಬಂದೊಡನೆ ಮಲೆಜ್ವರದ ಪೀಡೆಯೂ ಬಹಳವಿರುವುದರಿಂದ ಪ್ರತಿಯೊಂದು ಮನೆಯಲ್ಲಿ ಕೂರುವ, ಕೆಮ್ಮುವ, ಕಂಬಳಿ ಹೊದ್ದು ಮಲಗುವ ಜನವಿದ್ದೇ ಇರುತ್ತಾರೆ. ಅವರಂತೆ ಈ ಸಲ ಗೋಪಾಲರಾಯರು ಹಾಸಿಗೆ ಹಿಡಿದರು.

ಈ ಮಲೆಜ್ವರವೂ ಒಂದು ವಿಚಿತ್ರ. ಮೊದಲು ಚಳಿ ಬರುತ್ತದೆ. ಆಗ ಕೈ ಮೈ ನಡುಗುವುದು. ಒಂದಲ್ಲ ಹತ್ತು ಕಂಬಳಿಗಳನ್ನು ಹೊದ್ದರೂ ಕಡಿಮೆಯಾಗುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಮನೆಯಲ್ಲಿದ್ದವರು ಕೈ ಕಾಲುಗಳನ್ನು ಗಟ್ಟಿಯಾಗಿ ಬಿಗಿ ಹಿಡಿದುಕೊಳ್ಳುವರು. ಸ್ವಲ್ಪಹೊತ್ತಿನ ಮೇಲೆ ತಲೆಸಿಡಿತ. ಮುಂದೆ ಮೈ ಬಿಸಿಯೇರುತ್ತದೆ. ಆಗ ಆಗುವ ಬಾಯಾರಿಕೆಯನ್ನು ಸೈರಿಸುವುದೇ ಕಷ್ಟ. ಒಳ್ಳೆ ಮೆಣಸಿನ ಕಷಾಯ ಕುಡಿದಷ್ಟು ಮತ್ತೆ ಬೇಕೆಂದನ್ನಿಸುತ್ತದೆ. ಆ ಕುಡಿದ ನೀರೆಲ್ಲ ಬೆವರಾಗಿ ಸರ್ವಾಂಗಗಳಿಂದ ಹರಿಯುತ್ತದೆ. ಅಂಗಿ, ಲುಂಗಿ, ಹೊದೆದ ದುಪ್ಪಟಿ ಎಲ್ಲ ಒದ್ದೆಮುದ್ದೆ. ಈ ಜ್ವರದಿಂದ ಪ್ರಾಣಾಪಾಯವಿಲ್ಲ. ನಿಜ. ಆದರೆ ಜ್ವರ ಬಿಟ್ಟಮೇಲೆ ಅದರ ವೇದನೆ ಅನಂತ. ಜ್ವರ, ರಕುತವನ್ನೆಲ್ಲ ಹೀರಿಬಿಡುತ್ತದೆ. ಮೋರೆ ಕಳೆಗುಂದುತ್ತದೆ. ಕೈಕಾಲುಗಳಲ್ಲಿ ಬಲವಿರುವದಿಲ್ಲ. ಬಾಯಿ ಕಹಿ. ತಿನ್ನಲು ಆಸೆ. ತಿನ್ನುವಂತಿಲ್ಲ. ತಿನ್ನುವಾಗ ನಾಲಿಗೆಗೆ ರುಚಿಯನ್ನಿಸುವುದಿಲ್ಲ. ಹೀಗೆ ನಿತ್ರಾಣ ಜಾಸ್ತಿಯಾಗುತ್ತದೆ. ಅಂಥ ವೇಳೆಯಲ್ಲಿ ಗದ್ದೆ ಬೇಸಾಯಕ್ಕೆಂದು ಹೊರಗೆ ಬಂದರೆ, ಮೈ ಬಿಟ್ಟು ತಿರುಗಾಡಿದರೆ, ಗಾಳಿಯಲ್ಲಿದ್ದ ನೀರನ್ನು ದೇಹ ಪುನಃ ಹೀರಿಕೊಳ್ಳುತ್ತದೆ. ಪುನಃ ಚಳಿ ಬಂದು ಮಲಗಬೇಕಾಗುತ್ತದೆ. ಮಲಗಿದಾಗ ಇದ್ದರೆ ಅಷ್ಟು ಕ್ವಿನಿನ್ ಗುಳಿಗೆಗಳನ್ನು ನುಂಗಿತು; ಅದು ಇಲ್ಲದಿದ್ದರೆ ಕಿರಾತಕಡಿ ಕಷಾಯ ಮಾಡಿ ಕುಡಿಯಿತು; ಒಳ್ಳೆ ಮೆಣಸಿನ ಕಷಾಯವಾದರೆ ಅದೂ ಸರಿಯೆ. ಕಳ್ಳಿ ತಂದು ಕೆಂಡಕ್ಕೆ ಹಾಕಿ ಅದರ ರಸದಲ್ಲಿ ಸಾಸಿವೆ ಅರೆದು ಬಿಸಿಮಾಡಿ ನೆತ್ತಿಗೆ ಹಾಕಿಕೊಳ್ಳುವವರೂ ಇದ್ದಾರೆ. ಆ ಮೇಲೆ ಸುಮ್ಮಗೆ ನರಳುತ್ತ ಹೊರಳುತ್ತ ಮಲಗಿಕೊಂಡು ಬಿಡುವುದು! ಮೈ ಬೆವರಿ ಜ್ವರ ಬಿಟ್ಟಿತೋ ಇಲ್ಲವೋ,ಕಂಬಳಿ ಎಸೆದು ಎದ್ದರೇ. ಏಕೆಂದರೆ ಮಲಗಿಕೊಂಡೇ

ಇದ್ದವರೆ ಮನೆಗೆಲಸ, ಗದ್ದೆ ಬೇಸಾಯ, ಕೂಲಿಕುಂಬಳಿ, ಆಳು ಕಾಳು, ನಡೆಯುವುದಾದರೂ ಹೇಗೆ? ಹೀಗಾಗಿ ಸರಿಯಾದ ಔಷಧ, ಉಪಚಾರ, ಪಥ್ಯ ವಿಶ್ರಾಂತಿಗಳೂ ಇಲ್ಲ. ಜ್ವರದ ಅಂಶ ದೇಹದಲ್ಲಿ ಉಳಿದು ಬಿಡುತ್ತದೆ. ಜ್ವರಗಡ್ಡೆಯೂ ಆಗುತ್ತದೆ. ವರುಷಂಪ್ರತಿ ಹೊಸ ನೀರು ಹರಿದು ಬಂದಾಗ ಒಮ್ಮೆ ಬೀಳುವುದೇ ಸೈ! ಗೋಪಾಲರಾಯರಂತಹರ ಅವಸ್ಥೆಯೇ ಹಾಗಿರುವಾಗ ಮಿಕ್ಕವರ ಸ್ಥಿತಿಗತಿಯೇನು?

ಆದರೆ ಈ ಜ್ವರದಲ್ಲಿ ಇನ್ನೊಂದು ವೈಚಿತ್ರ್ಯವಿದೆ. ಬೆಳಿಗ್ಗೆ ಅದು ಆರಂಭವಾದರೆ ಮಧ್ಯಾಹ್ನ ಅಥವಾ ಸಂಜೆಯ ಹೊತ್ತಿಗೆ ಮೈ ಬೆವರಿ ಬಿಡುತ್ತದೆ. ಆದರೆ ಈ ಸಲ ಗೋಪಾಲರಾಯರು ಎರಡು ಮೂರು ದಿನಗಳವರೆಗೆ ಅದರಿಂದ ಬಳಲಿದರು. ಕೊಲ್ಲಿ ಭಟ್ಟರನ್ನು ಭೆಟ್ಟಿಯಾಗಲು ಹೋದವರು ಬರುವಾಗ ಗಾಳಿ ಮಳೆಗಳಿಗೆ ಸಿಲುಕಿದರು. "ಮೋಡವಾಗಿತ್ತು. ನೀವು ಹೋಗಲೇ ಬಾರದಿತ್ತು. ಅಷ್ಟು ಕೂಡ ನಿಮಗೆ ಗೊತ್ತಾಗುವುದಿಲ್ವಾ?" ಎಂದು ಜಲಜಮ್ಮ ಕಾಲು ಒತ್ತುತ್ತ ಕೇಳಿದರು.

"ಹೌದು. ಮೋಡ ನೋಡಿಯೇ ಹೋದೆ. ಜೋರು ಮಳೆ ಸುರು ಆಗುವದರೊಳಗೆ ದಿನ ನೋಡೋಣ ಎಂದು ಯೋಚಿಸಿ ಹೋದೆ. ಹೀಗಾಗುವುದೆಂದು ಯಾರಿಗೆ ಗೊತ್ತಿತ್ತು?"

"ಯಾರಿಗೆ ಗೊತ್ತಿತ್ತು! ಮಳೆ ಬಂದಾಗ ಅಲ್ಲೇ ನಿಲ್ಲಬಾರದಿತ್ತೇನು?"

ಅದು ನಿಜವೆಂದು ಅವರ ಮನಸ್ಸಿಗೆ ಖಚಿತವೆನಿಸಿತು. ಆದರೂ ತನ್ನ ಮೂಗೇ ಮೇಲೆಂದು ಸಮರ್ಥಿಸಿಕೊಳ್ಳುವ ಲವಲವಿಕೆಯಿಂದ ನುಡಿದರು: "ನಾನು ಅರ್ಧ ದಾರಿ ಬಂದುಬಿಟ್ಟಿದ್ದೆ. ಒಮ್ಮೆಯೇ ಸುರಿದುಬಿಟ್ಟಿತು!"

"ಅಲ್ಲಿ ಹತ್ತಿರ ಯಾರ ಮನೆಯೂ ಇರಲಿಲ್ಲವೇನು?"

"ಆ ಬೈದನ ಮನೆಯಿತ್ತು. ಹೋಗಲಿಲ್ಲ!"

"ಬೈದನೋ ಹೈದನೋ! ಸಂಕಟ ಬಂದಾಗ!"

ಆ ಮಾತಿಗೆ ಗೋಪಾಲರಾಯರು ಸೋತರು. ಬೇರೆ ವಿಷಯದ ಕಡೆ ಹೊರಳಿ "ನೆನೆದುಕೊಂಡು ಬಂದರೂ ಕೆಲಸವಾಗಲಿಲ್ಲವಲ್ಲ!" ಎಂದು ಅವರು ಮರುಗಿದರು. ಒಂದೆರಡು ದಿನಗಳಲ್ಲಿ ಪ್ರಸ್ಥಕ್ಕೆ ಮುಹೂರ್ತವಿರಲಿಲ್ಲ. ಒಂದು ವಾರದ ಮೇಲೆಯೇ. ಈಗಲೇ ಜಿಧಾವರ್ತಿ ಮಳೆ ಹಿಡಿ

ದಿದೆ. ಹೊಳೆ ಹಳ್ಳಗಳು ತುಂಬಿವೆ. ಕಿಲ್ಲೂರ್‌ಸಾರ್ ದಾಟಿ, ಬಂಗಾಡಿ ಪೇಟೆ ಮಾರ್ಗವಾಗಿ ಬೆಳ್ತಂಗಡಿಗೆ ತೆರಳುವುದು ಕಠಿನ. ಮುಂಡಾಜೆಗೆ ಮುಟ್ಟಬೇಕಾದರೆ ನೇತ್ರಾವತಿ ದಾಟಬೇಕಲ್ಲ. ಕೊಲ್ಲಿ ಮತ್ತು ಅದರ ಆಚೆ ಇನ್ನೂ ಕೆಲವು ಮೈಲು ತೆರಳಿ ನೇತ್ರಾವತಿ ದಾಟಿದೆವೆಂದೆನ್ನೋಣ. ಆ ಮೇಲೆ ಕಡಿರುದ್ಯಾವರ ಗ್ರಾಮದಲ್ಲಿ ಬಂಡಾಜೆ ಹೊಳೆಯೊಂದು ಇದೆ. ಕಡಿರುದ್ಯಾವರ ಹಳ್ಳಕ್ಕೆ ಸಂಕವಿಲ್ಲ. ಆನಡ್ಕದ ಒಳದಾರಿ ಸುತ್ತಿಹೋಗ ಬಹುದು. ಆದರೆ ಹೋಗುವವರು ಯಾರು? ಅವರಿಗೆ ಜ್ವರ. ರಾಮ ಗೌಡ ಊರಲ್ಲಿಲ್ಲ ಪುತ್ತೂರಿಗೆ ತೆರಳಿರುವ ಅರವಿಂದ ಬಂದಿಲ್ಲ. ಯಾವ ನಾದರೊಬ್ಬ ಬ್ಯಾರಿಯನ್ನು ಕರೆದು ಪತ್ರ ಬರೆದು ಆನಂದರಾಯನಿಗೆ ಕಳಿಸ ಬಹುದು. ನಿಜ. ಆದರೆ ಅವನಿಂದ ಇಷ್ಟೆಲ್ಲ ಕಷ್ಟಗಳನ್ನು ಸಹಿಸಿ ಬರಲು ಆದೀತೇ? ಒಂದು ವೇಳೆ ಅವನು ಹುಚ್ಚು ಹುಮ್ಮಸ್ಸಿನಿಂದ ಹೊರಟನೆಂ ದೆನ್ನೋಣ. ಆದರೆ ಹಾಗೆ ಕರೆಸಿಕೊಳ್ಳುವುದು ಒಳ್ಳೇದಲ್ಲ. ನಮ್ಮ ಗ್ರಹ ಚಾರ ನೆಟ್ಟಗಿಲ್ಲ. ಮೊದಲೇ ಶನಿ ಕಾಡುತ್ತಿದೆ. ದುರದೃಷ್ಟದಿಂದ ಕಾಲು ಜಾರಿ ಬಿದ್ದು, ಕಲ್ಲು ಮುಳ್ಳು ತಾಗಿ, ಅವಸ್ಥೆಪಡುವುದು ಬೇಡ. ನೀರು, ಗಾಳಿ, ಬೆಂಕಿಗಳೊಡನೆ ಸೆಣಸುವುದು ಸರಿಯಲ್ಲ ಎಂದವರು ಜ್ವರ ಬಂದಾಗ ಚಿಂತಿಸಿದರು.

ಜ್ವರ ಬಿಟ್ಟ ಮೇಲೆ "ಜೂನ್, ಜುಲಾಯಿ, ಆಗಸ್ಟ್ ಈ ಮೂರು ತಿಂಗಳು ಇನ್ನು ಕಳೆಯದೆ ಉಪಾಯವಿಲ್ಲ. ಶ್ರಾವಣ ಮಾಸದಲ್ಲಿ ನಿಷೇಕ ವಾಯಿತು. ಅಷ್ಟರ ವರೆಗೆ ಏನೇನು ಆಗುತ್ತದೋ? ಲಗ್ನದ ಮಾರನೆಯ ದಿನವೇ ನಾನು ಅದೊಂದನ್ನು ಮುಗಿಸಿ ಬಿಡಬೇಕಾಗಿತ್ತು. ರಗಳೆ ಇರುತ್ತಿ ರಲಿಲ್ಲ. ತನ್ನ ವಸ್ತುವನ್ನು ತಾನು ಕರೆದೊಯ್ಯುತ್ತಿದ್ದ. ಈಗ ತ್ರಿಶಂಕು ಸ್ವರ್ಗದ ಹಾಗಾಯಿತು. ಇನ್ನು ಅವನಿಗೆ ಯಾವ ದುರ್ಬುದ್ಧಿ ಬರುತ್ತದೋ! ಕೈಯಲ್ಲಿ ಅಲ್ಪ ಸ್ವಲ್ಪ ಹಣವನ್ನು ಉಳಿಸಿಕೊಂಡಿದ್ದಾನೊ! ಸಂಪೂರ್ಣ ಪಾಪ್ರಿಯಾದನೋ! ಇನ್ನೂ ಆ ಉಂಬುರು ಅಂಟಿಕೊಂಡಿದೆಯೋ! ಇದ್ದರೆ ಅವನನ್ನು ಇತಿಶ್ರೀ ಮಾಡಿಯೇ ಹೋಗುವಂತೆ ತೋರುತ್ತದೆ. ಹೋದರೆ ಅದೊಂದು ರೀತಿ ಮಾರಿ ಹೋದ ಹಾಗೆಯೇ. ಆದರೆ ಗಂಟೇ ಬಿದ್ದರೆ ಕಷ್ಟ. ಅವಳನ್ನು ಬಿಡುವುದಿಲ್ಲವೆಂದು ನಾರಾಯ ಗಟ್ಟಿಯಾಗಿ

ಹಿಡಿದುಕೊಂಡರೆ ನಮ್ಮ ಹುಡುಗಿಗೆ ಕೇಡು. ಅವಳು ಏಳು ಕೆರೆಯ ನೀರು ಕುಡಿಯಬೇಕಾದೀತು. ಅಂತೂ ಅವಳ ಅದೃಷ್ಟ ಸುಖರೂಪಿ ಇದ್ದಂತಿಲ್ಲ. ಕಷ್ಟವಿದೆ. ಬಹಳ ಕಣ್ಣೀರು ಸುರಿಸಬೇಕಾಗುತ್ತದೋ ಏನೋ ! ಹುಡುಕಿ ಹುಡುಕಿ ಕೊನೆಗೊಂದು ಹುಲಿಯ ಬಾಯಿಗೆ ಕೊಟ್ಟಂತಾಯಿತು ಹುಡುಗಿಯನ್ನು. ಬಹಳ ಹೆಡ್ಡು ಕೆಲಸವಾಯಿತು ಎಂದು ಗೋಪಾಲರಾಯರು ವ್ಯಥೆಪಟ್ಟರು.

ಮನುಷ್ಯ ದೈಹಿಕ ರೋಗರುಜಿನಗಳಿಂದ ಬಳಲಿದಾಗ ಅವನಿಗೆ ಮಾನಸಿಕ ವ್ಯಥೆಯೂ ಆಗುವುದು ಸಹಜ. ಆಗ ಹಿಂದಿನ ಹಿನ್ನೆಲೆಯೆಲ್ಲ ಅವನ ಕಣ್ಮುಂದೆ ನಲಿಯುತ್ತದೆ. ಮುಂದಿನ ಚಿಂತೆ ಕಾಡುತ್ತದೆ. ದಿನನಿತ್ಯದ ಸಂಸಾರ ತಾಪತ್ರಯದಲ್ಲಿ ಅನೇಕರಿಗೆ ಆತ್ಮ ನಿರೀಕ್ಷಣೆ ಮಾಡಲು ವೇಳೆಯೇ ಇರುವುದಿಲ್ಲ. ವಿಚಾರಕ್ಕೂ ಅವಕಾಶವಿರುವುದಿಲ್ಲ. ಹೊತ್ತು ಹೊತ್ತಿಗೆ ಒಂದಿಷ್ಟು ಗಬಗಬ ತಿಂದು ಹೊಟ್ಟೆಪಾಡಿನ ಹೋರಾಟ ನಡೆಸಬೇಕಾಗುತ್ತದೆ. ಅಂಥ ಜನರಿಗೆ ಜ್ವರಗಿರ ಬಂದಾಗಲೇ ಸಮಯಾವಕಾಶ. ಯಾವುದಕ್ಕೆ ಎಷ್ಟು ಹೆಚ್ಚು ವೆಚ್ಚವಾಯಿತು, ತನ್ನಿಂದ ಯಾವ ತಪ್ಪಾಯಿತು, ಎಂದು ಅವರು ಆಗಲೇ ಪರಿಭಾವಿಸುವರು. ಮುಂದಿನ ದಾರಿಯನ್ನು ನೋಡುವರು. ಆದರೆ ಜೀವನದ ಯಾತ್ರೆಯಲ್ಲಿ ಅನಂತ ಅವಗಡಗಳನ್ನಿದಿರಿಸಿದವರಿಗೆ ಈ ಆತ್ಮನಿರೀಕ್ಷಣೆಯಿಂದ ಬೇಸರವಾಗುತ್ತದೆ. ಭವಿಷ್ಯತ್ತು ಅದಕ್ಕಿಂತಲೂ ಘೋರವಾಗಿ ತೋರುವುದುಂಟು. ಹೊಲನೆಲ, ಮನೆಮಾರು, ಮಕ್ಕಳು ಒಕ್ಕಲುಗಳ ಚಿಂತೆಗಳೆಲ್ಲ ಸಂತೆಗಳಂತೆ ಮುತ್ತಿ ಮನಸ್ಸನ್ನು ಇನ್ನಷ್ಟು ಕ್ಷೋಭೆಗೆ ಗುರಿಪಡಿಸುತ್ತವೆ. ಹಾಗೆ ಗೋಪಾಲರಾಯರು ಈ ಸುಳಿಯಲ್ಲಿ ಮುಳುಗೇಳುತಿದ್ದಾರೆ.

ಈಗ ಗೋಪಾಲರಾಯರಿಗೆ ತಾಯಿ, ತಂದೆ, ತಮ್ಮಂದಿರು ಎಲ್ಲರ ನೆನಪಾಗುತ್ತದೆ. ಅವರ ತಂದೆ ವೆಂಕಟರಾಯರೆಂದರೆ ಮಲೆನಾಡಿನ ಒಂದು ಹುಲಿ. ಎತ್ತರ ಆಳು. ಕದಳೀ ಗರ್ಭ ಶ್ಯಾಮ ವರ್ಣ. ಪುಷ್ಟವಾದ ಕೈಕಾಲುಗಳು. ಕಿವಿಯಲ್ಲಿ ಜಗಜಗಿಸುವ ಹರಳಿನ ಒಂಟಿ. ತಲೆಯ ಮೇಲೆ ಜರಿ ರುಮಾಲು. ಕಾಲಿಗೆ ದಪ್ಪವಾದ ಬೂಟು. ಅವರು ಮನೆಯಿಂದ ಹೊರಟಾಗ ಹಿಂದೆ ನಾಲ್ಕು ಜನ. ಆ ಆಳುಗಳ ಕೈಗಳಲ್ಲೂ ನಾಗಬೆತ್ತ. ಸೊಂಟ

ವಲ್ಲಿ ನೇತಾಡುವ ಚೂರಿ. ಅವರು ಅಷ್ಟು ದೂರದಿಂದ ನಡೆದು ಬರುತ್ತಿದ್ದಾಗಲೇ ಜನರು ಪಾರಿ ತೊಲೆದು ನಿಂತು ಬಗ್ಗಿ "ನಮಸ್ಕಾರ ಅಯ್ಯಾ" ಎಂದನ್ನುತಿದ್ದರು. ಅವರ ಒಕ್ಕಲುಗಳ ಮಾತಂತಿರಲಿ ಬಂಗಾಡಿಯ ಸಮಸ್ತ ಜನರೂ ಗಡಗುಟ್ಟಿ ನಡುಗುತಿದ್ದರು. ಊರಿನಲ್ಲಿ ಒಂದು ನೇಮ ಹೋಮ. ದೈವ ದೇವರ ಕೆಲಸ, ಮದುವೆ ಮುಂಜಿ, ಅವರಿಲ್ಲದೆ ನಡೆಯುವಂತಿಲ್ಲ. ಗಂಡಹೆಂಡತಿ ಜಗಳದಿಂದ ಹಿಡಿದು ಆಸ್ತಿಪಾಸ್ತಿ ವ್ಯಾಜ್ಯದ ವರೆಗೆ ಬಗೆಹರಿಸುವವರು ಅವರೇ. ಪೋಲೀಸ, ಮಣೆಗಾರ, ತಹಶೀಲದಾರ ಕಲೆಕ್ಟರ್ ಯಾರು ಬಂಗಾಡಿಗೆ ಬಂದರೂ ಅವರ ಮನೆಯಲ್ಲಿಯೇ ಮೊಕ್ಕಾಂ. ಗೋಪಾಲರಾಯರ ಮಾತಿನ ಮೇಲೆ ಅಪೀಲಿಲ್ಲ. ಇದ್ದಷ್ಟು ಕಾಲ ಒಬ್ಬ ತುಂಡರಸರಂತೆ ಮೆರೆದರು.

ತುಂಡರಸರಂತೆ ದರ್ಬಾರ್ ಮನುಷ್ಯ ! ಒಳ್ಳೆ ತಿಂದುಂಡು ಮೆರೆವ ಮನೋವೃತ್ತಿ. ಸ್ವತಃ ತಾನು ತಿನಬೇಕು ಮಾತ್ರವಲ್ಲ ಜನರೂ ಹಾಗೆಯೇ ಉಣಬೇಕು. ಅವರ ಮನೆಯಲ್ಲಿ ಹಬ್ಬ ಹುಣ್ಣಿವೆಯಾದರೆ ಒಂದು ಮಠದಲ್ಲಿ ಸಮಾರಾಧನೆ ಆದ ಹಾಗೆ. ಊರಿನೆಲ್ಲ ಬ್ರಾಹ್ಮಣರು ಸಕುಟುಂಬ ಸಪರಿವಾರ ಬರಬೇಕು. ಅಲ್ಲೇ ಉಳಿಯಬೇಕು. ಅನಂತನ ವ್ರತ, ದೀಪಾವಳಿ, ಯುಗಾದಿಗಳಿಗೆ ಇನ್ನೊಂದು ತಿಂಗಳಿದೆಯೆಂದಾಗಲೇ ನೆಂಟರಿಷ್ಟರಿಗೆ ಪತ್ರಗಳು ಹೋಗುತ್ತಿದ್ದವು. ಬೆಳ್ತಂಗಡಿ, ಬಂಟ್ವಾಳ, ಪುತ್ತೂರುಗಳಿಗೆ ಅವರು ಹೋದಾಗ ಕಂಡವರನ್ನು ಕರೆದುಕೊಂಡು ಬರುವುದೂ ರೂಢಿ. ಇವಲ್ಲದೆ ದಿನನಿತ್ಯ ಅವರ ಮನೆಯಲ್ಲಿ ತಿಂದುಂಡು ಹೋದವರಿಗಂತೂ ಲೆಕ್ಕವಿಲ್ಲ. ದೇಶಾವರಿ ಬ್ರಾಹ್ಮಣರು ಬಂದರೆ ತಿಂಗಳುಗಟ್ಟಲೆ ಅವರನ್ನು ಬಿಡುತಿದ್ದಿಲ್ಲ. ಸರಕಾರೀ ಆಫೀಸರರಿಗೂ ಅವರ ಮನೆಯಲ್ಲೇ ಸರಬರಾಯಿ. ಅವರು ಮಧ್ಯಾಹ್ನದ ಉರಿಬಿಸಿಲಿಗೇ ಬರಲಿ, ಮಧ್ಯರಾತ್ರಿಗೇ ಬರಲಿ, ಬೇಡಿದ್ದು ಸಿಗುವಂತೆ ವ್ಯವಸ್ಥೆ ಮಾಡಿದ್ದರು. ಹೀಗಾಗಿ, "ವೆಂಕಟರಾಯರಲ್ಲಿ ಹುಲಿ ಹಾಲು ಬೇಕಾದರೂ ಸಿಗುತ್ತದೆ" ಎಂದು ಊರ ಪರವೂರ ಜನರು ಆಡಿಕೊಳ್ಳುತಿದ್ದರು.

ವೆಂಕಟರಾಯರಿಗೆ ಮನೆತುಂಬ ಮಕ್ಕಳು. ಪುತ್ತೂರಲ್ಲಿ ಅವರ ವಿದ್ಯಾಭ್ಯಾಸ. ಅದಕ್ಕಾಗಿ ಒಂದು ಮನೆ ಬಾಡಿಗೆ ಹಿಡಿದು 'ಅಡಿಗೆ ಭಟ್ಟನನ್ನಿರಿಸಿ

ದರು. ಒಬ್ಬಿಬ್ಬರು ಅರ್ಧಕ್ಕೆ ನಿಲ್ಲಿಸಿದರು. ಗೋಪಾಲರಾಯರು ಮಾತ್ರ ಮೆಟ್ರಿಕ್ ವರೆಗೆ ಕಲಿತರು. ಅವರು ಕಲಿಯುವಾಗಲೇ ಬಾದರಾಯಣ ಸಂಬಂಧ ನೆನಸಿಕೊಂಡು ಜಲಜಮ್ಮನ ತಂದೆ ವೆಂಕಟ್ರಾಯರಲ್ಲಿ ಪ್ರಸ್ತಾಪ ತೆಗೆದರು. ಇನ್ನಿತರ ಹುಡುಗರಂತೆ ಗೋಪಾಲರಾಯರಿಗೂ ತಂದೆ ಲಗ್ನ ಮಾಡಿದರು. ಕಾಲೇಜಿಗೆ ತೆರಳುವ ಆಶೆ ಅವರಿಗಿದ್ದರೂ ಆಗಲಿಲ್ಲ. ತಂದೆ ಜೀವಂತವಿರುವಾಗಲೇ ಶಹಾಜಹಾನನ ಮಕ್ಕಳಂತೆ ಎಲ್ಲರೂ ಪಾಲಿಗಾಗಿ ಬಡಿದಾಡತೊಡಗಿದರು. ಅವರ ತೀರ್ಮಾನಕ್ಕೆ ಕೋರ್ಟಿಗೆ ಹೋದರು. ಪಾಲಾದ ಮೇಲೂ ಸಮಾಧಾನವಿಲ್ಲ. ಕಲಹ ಕರಗಲಿಲ್ಲ. ಒಬ್ಬನನ್ನು ಕಂಡರೆ ಮತ್ತೊಬ್ಬನಿಗೆ ಸೇರಿಕೆ ಇಲ್ಲ. ಒಬ್ಬನ ದನ ಅಕಸ್ಮಾತ್ ಮತ್ತೊಬ್ಬನ ಗದ್ದೆಗೆ ಕಾಲಿಟ್ಟರೆ ದೊಡ್ಡಿಗೆ ಕಳಿಸಿದರೇ. ಒಕ್ಕಲುಗಳಿಂದ ಅದರ ಕಾಲುಗಳನ್ನು ಕಡಿಸಿದರೇ. ಅವನ ಒಕ್ಕಲನ್ನು ಇವನು ಓಡಿಸಿದ. ಅವನ ಗದ್ದೆಗೆ ಹರಿವ ನೀರನ್ನು ಇವನು ತನ್ನ ಗದ್ದೆಗೆ ಹರಿಸಿದ. ಅದರಿಂದ ಮಾರಾಮಾರಿಯೂ ಆಯಿತು. ಸಿವಿಲ್, ಕ್ರಿಮಿನಲ್ ಕೋರ್ಟು ಕಚೇರಿ ವ್ಯಾಜ್ಯ. ಯಾದವರಿಗಿಂತ ಕಡೆ. ವರುಷಂಪ್ರತಿ ಬರುವ ಗೇಣಿ ಅದಕ್ಕೇ ಸಂದಾಯವಾಯಿತು. ಆ ಗೇಣಿಯೂ ಪೂರ್ಣವಿಲ್ಲ. ಸುಗ್ಗಿ ಕಾಲಕ್ಕೆ ಇದ್ದ ಒಕ್ಕಲು ಕೊಳಕೆಗಿಲ್ಲ. ಗದ್ದೆಗಳಲ್ಲಿ ಬಹ್ವಂಶ ಪಡಿಲ್. ಅಕ್ಕಿಗೆ ಬೆಲೆಯೂ ಕಡಿಮೆ. ಬರುವ ಉತ್ಪನ್ನ ಖರ್ಚಿಗೆ ಸಾಲದು. ಖರ್ಚಿಗೆ ಮಿತಿಯೂ ಇಲ್ಲ. ಹಿಂದಿನಿಂದ ನಡೆದುಕೊಂಡ ಬಂದ ಹಬ್ಬ ಹುಣ್ಣಿಮೆಗಳೆಲ್ಲ ಸಂಭ್ರಮದಿಂದಲೇ ಆಗಬೇಕು. ಅಣ್ಣ ಹತ್ತು ಜನರಿಗೆ ಆದರಾತಿಥ್ಯ ಮಾಡಿದರೆ ತಮ್ಮ ನೂರು ಜನರಿಗೆ. ಒಬ್ಬಿಬ್ಬರಿಗೆ ಮತ್ತೆ ಪುತ್ತೂರು ಮಂಗಳೂರುಗಳಲ್ಲಿ ಅರಸಿಯರು ಬೇರೆ. ಊರಿನಲ್ಲಿಯೂ ಅಂತವರನ್ನು ಆಗಾಗ ದೊರಕಿಸಿಕೊಳ್ಳುತಿದ್ದರು. ಹೀಗಾಗಿ ಕೈಮೈ ಸಾಲ. ಅದನ್ನು ತೀರಿಸಲಾಗದೆ ಒಬ್ಬನ ಆಸ್ತಿಯ ಸ್ವಲ್ಪಾಂಶವು ಒಬ್ಬ ಜೈನನಿಗಾಯಿತು. ಇನ್ನೊಬ್ಬನ ಆಸ್ತಿ ಬಂಟ್ವಾಳದ ಬಾಳಿಗರಿಗೆ ಅಡವು. ನಂದನ ಬದುಕು ನರಿ ನಾಯಿ ತಿಂದು ಹೋದ ಹಾಗೆ !

ಗೋಪಾಲರಾಯರು ಯೌವನದಲ್ಲಿ ಆ ರೀತಿಯಾಗಿ ಸ್ವಲ್ಪ ಉರಿದವರೇ. ಆದರೆ ಕಾಲಕ್ರಮೇಣ ತಮ್ಮ ನಡತೆಯನ್ನು ತಿದ್ದಿಕೊಂಡರು.

ಜಲಜಮ್ಮನ ಪ್ರಭಾವವೇ ಅದಕ್ಕೆ ಕಾರಣವೆಂದು ಕೆಲವರ ಊಹೆ. ಹುಟ್ಟಿದ ಒಂದೆರಡು ಮಕ್ಕಳು ತೀರಿಕೊಂಡುದುದರಿಂದ ಅವರಿಗೆ ಜಿಗುಪ್ಸೆ ಬಂದುದೂ ನಿಜ. ತಂದೆಯ ಧನ, ಧರ್ಮ, ದರ್ಪ, ದೌಲತ್ತು ಇವರಿಂದ ಹೇಗೆ ನಡೆದೀತು? ಇದು ಕಾಲವೂ ಅಲ್ಲ. ಅಲ್ಲದೆ ಅವರ ಸ್ವಭಾವವೂ ಹಾಗಿಲ್ಲ. ಕೋರ್ಟು ಕಚೇರಿ, ಮನೆ ಮಾರುಗಳ ಸರ್ವಾಪಹಾರ ಮಾಡುತ್ತಿದೆಯೆಂಬ ಒಂದು ಭೀತಿ ಎದೆಯೊಳಗಿದೆ. ದೈವದೇವರ ಭಯವಿರುವುದರಿಂದ ಅನ್ಯಾಯಕ್ಕೂ ಹೇಸುವ ಮನೋವೃತ್ತಿ. ಹೀಗಾಗಿ ಚಾಣಾಕ್ಷತನದಿಂದ ಹಿರಿಯರ ಈ ಮನೆಯನ್ನೂ ಆಸ್ತಿಯ ಬಹುಭಾಗವನ್ನೂ ಕಾಪಾಡಿಕೊಂಡು ಬಂದಿರುವರು. ಮಲೆಯಲ್ಲಿರುವ, ಬೇಸಾಯವಾಗದ, ಮಾಡಿದರೂ ಹರಿಹರಿಣಗಳಿಂದ ಪೈರು ದೊರೆಯುದ ಗದ್ದೆಗಳನ್ನು ಕುಟ್ಟಿ ಮಾರಿರುವರು. ಸಾಲ ಸೋಲವನ್ನೆಲ್ಲ ತೀರಿಸಿ ಕೈತೊಳೆದುಕೊಂಡರು. ಆಸ್ತಿಯಿಂದ ಅಪಾರ ಸಂಪತ್ತು ಗಳಿಸದಿದ್ದರೂ ಅಲ್ಲಿಂದಲ್ಲಿಗಾಗುತ್ತದೆ. ಯುದ್ಧ ತಲೆದೋರಿ ಅಕ್ಕಿ ಬೆಲೆ ಏರಿದ ಕಾರಣದಿಂದ ಸ್ವಲ್ಪ ಉಳಿಸಲಿಕ್ಕೂ ಆಯಿತು. ಕಾವೇರಿ ಲಗ್ನ, ಅರವಿಂದನ ವಿದ್ಯಾಭ್ಯಾಸಕ್ಕೆಂದು ಆತ್ಮ ಸಂತೋಷದಿಂದಿದ್ದರು. ಕಾವೇರಿಯ ಮದುವೆಯೇನೋ ಆಯಿತು. ಆದರೆ ಅದು ಈಗ ದುಃಖಕ್ಕೆ ಕಾರಣವಾಯಿತಲ್ಲ!

ಗೋಪಾಲರಾಯರು ಈ ರೀತಿ ಬೇನೆ ಬೇಸರಗಳಿಂದ ಪರಿಭಾವಿಸಿ, ಪರಿತಪಿಸುತ್ತಿದ್ದಾಗ ಗೊರಬು ಹಾಕಿಕೊಂಡು ಆ ಮಳೆಗೇ ರಾಮಗೌಡ ಆಗಮಿಸಿದ. ದೂರದಿಂದ ಅವನಿಗೆ ಗೋಪಾಲರಾಯರ ಗುರುತೇ ಆಗಲಿಲ್ಲ. ಅವರು ತಂದೆಯಂತೆ ದೊಡ್ಡ ಆಳು; ನಸುಗಪ್ಪು ಬಣ್ಣ, ಎಲ್ಲ ನಿಜ. ಆದರೆ ಎರಡು ಮೂರು ದಿನಗಳಿಂದ ಮುಖಕ್ಷೌರ ಮಾಡಿಸಿಕೊಂಡಿಲ್ಲ. ಕಂಬಳಿಯನ್ನು ಹೊದ್ದು ಗೋಡೆಗೊರಗಿ ಕುಳಿತಿದ್ದರು. ಆದುದರಿಂದ ಚಾವಡಿಗೆ ಬಂದ ಮೇಲೆ "ರಾಮಗೌಡ!" ಎಂದು ಅವರು ಕರೆದಾಗಲೇ ಅವರ ಸಾನ್ನಿಧ್ಯವನ್ನರಿತು ಹೇಳಿದ: "ಅರೆ! ನಮಸ್ಕಾರ ಅಯ್ಯಾ! ಜ್ವರವಾ?"

"ಹುಂ. ಮೂರು ದಿನವಾಯಿತು."

"ಹೌದಯ್ಯ! ಏನು ಮಳೆ, ಏನು ಚಳಿ! ನಡುಗುತ್ತದೆ ನೋಡಿ!"

ಗೋಪಾಲರಾಯರು "ಕಾವೇರಿ! ಕಾವೇರಿ" ಎಂದು ಕರೆದರು.

ಕಾವೇರಿ ಹೊಸ್ತಿಲುದಾಟಿ ಬಂದೊಡನೆ "ಇಕೋ. ಒಳ್ಳೆ ಸ್ಟ್ರಾಂಗ್ ಕಾಫಿ ಮಾಡಿ ನಮಗೆ ತಾ, ಮಗಳೆ! ನಮ್ಮಗೌಡನೂ ನಡುಗುತಿದ್ದಾನೆ!" ಎಂದು ಹೇಳಿದರು. ಆ ಮೇಲೆ ಗೌಡನ ಕಡೆ ಹೊರಳಿ, "ಎಲ್ಲಿಗೆ ಹೋಗಿದ್ದಿ? ಬಹಳ ಅಪರೂಪ" ಎಂದು ಕೇಳಿದರು.

"ಕುದುರೆ ಮುಖ ಗಟ್ಟಕ್ಕೆ ಹೋಗಿದ್ದೆನಯ್ಯಾ.ಎತ್ತುಗಳನ್ನು ಮೇಯಿಸಲು ಮಲೆಕುಡಿಯರಲ್ಲಿ ಬಿಟ್ಟು ಬಂದೆ!"

ಆ ಮೇಲೆ ಗೋಪಾಲರಾಯರು ಗೌಡನೊಡನೆ ಅನೇಕ ಸುಖದುಃಖದ ಮಾತುಗಳನ್ನಾಡಿದರು. ಕಾವೇರಿ ಕಾಫಿಯನ್ನು ತಂದು ಅವರ ಮುಂದಿರಿಸಿದಳು: "ಯಾಕೆ, ಸಣ್ಣಯ್ಯ ಇಲ್ವಾ?'' ಎಂದು ರಾಮುಗೌಡ ಕೇಳಿದ. "ಇಲ್ಲ, ಪುತ್ತೂರಿಗೆ ಹೋಗಿದ್ದಾನೆ. ಇಷ್ಟರೊಳಗೆ ಬರಬೇಕಾಗಿತ್ತು ಮಳೆಂತ ನಿಂತಿರಬೇಕು..." ಎಂದವರು ಮಾತನ್ನು ಪೂರ್ಣ ನಿಲ್ಲಿಸಿರಲಿಲ್ಲ. ಆಗ ಅರವಿಂದ ಹೆಬ್ಬಾಗಿಲೊಳಗೆ ಪ್ರವೇಶಿಸಿದ. ''ಸಣ್ಣಯ್ಯ ಬಂದರು!" ಎಂದು ರಾಮುಗೌಡ ಹೇಳಿ ಎದ್ದ. ಗೋಪಾಲರಾಯರು ಎದ್ದು ಚಾವಡಿಯ ಅಂಚಿಗೆ ಬಂದರು. ಅವನ ಬಟ್ಟೆ ಬರೆ ತೊಯ್ದಿತ್ತು. ಕೊಡೆಯ ಒಂದೆರಡು ಕಡ್ಡಿಗಳೂ ಮುರಿದಿದ್ದುವು. ಚಪ್ಪಲಿಯನ್ನು ಎಡಗೈಯಲ್ಲಿ ಹಿಡಿದುಕೊಂಡಿದ್ದ. ಅವರನ್ನು ನೋಡಿದ ಕೂಡಲೇ ''ಪಾಸ್! ಪಾಸ್! ಪಾಸ್!" ಎಂದು ಹೇಳುತ್ತ ಚಾವಡಿಯನ್ನೇರಿದ. ಕಳೆಗುಂದಿದ್ದ ಗೋಪಾಲರಾಯರ ಮೋರೆ ಅರಳಿತು. ರಾಮುಗೌಡ ಆ ಕೊಡೆಯನ್ನು ತೆಗೆದುಕೊಂಡ. ಚಪ್ಪಲಿಯನ್ನು ಅಲ್ಲೇ ಎಸೆದು ಅರವಿಂದ ಕಾಲುಗಳನ್ನು ಕೊಡಹಿಕೊಂಡ. ಗೋಪಾಲರಾಯರು ಅಲ್ಲೇ ಇದ್ದ ಒಂದು ಬೈರಾಸನ್ನು ಎಳೆದು ಅವನ ಕೈಗಿತ್ತು ''ತಲೆ ಒರಸಿಕೋ. ಒರಸಿಕೋ. ನೀರು ಇಳಿಯುತ್ತದೆ. ಜ್ವರಗಿರ ಬಂದೀತು. ಬಟ್ಟೆ ತೆಗೆ. ಬೇರೆ ಹಾಕಿಕೋ" ಎಂದು ನುಡಿದರು. ಅವನು ಬಟ್ಟೆ ಬದಲಾಯಿಸಿ, ತಾಯಿ ತಂಗಿಗೆ ಹೇಳಿ ಹೊರಗೆ ಬಂದ ಮೇಲೆ ಅವರು ಹೇಳಿದರು:

''ಎಂಥ ಮಳೆ! ಎಷ್ಟು ನೆರೆ! ಈ ಮಳೆಗೆ ಯಾಕೆ ಬರಬೇಕಾಗಿತ್ತು? ಹೊಳೆ ಹೇಗೆ ದಾಟಿದೆ?"

"ಎಲ್ಲೆಲ್ಲೋ ಹೋಗಿ ಬಂದೆ. ಕೊಲ್ಲಿಯಲ್ಲಿ ಒಬ್ಬ ಬ್ಯಾರಿ ನೇತ್ರಾವತಿ

ದಾಟಿಸಿದ.''

"ಯಾಕೆ ಇಷ್ಟು ಅವಸರ ಮಗನೇ? ಎರಡು ದಿನ ತಡಮಾಡಿ ಬರುತಿದ್ದರೆ ಏನಾಗುತಿತ್ತು ? ನೆರೆ ನೀರು ನೋಡಿದಾಗ ಕಣ್ಣು ಹಾರುತ್ತದೆ. ! ಗ್ರಹಚಾರವಿದ್ದಾಗ ಉಗ್ಗಪ್ಪ ಇದಿರಾದನೆಂದ ಹಾಗೆ ಅಪಾಯಕ್ಕೆ ಸಿಲುಕಬೇಕು ಯಾಕೆ? ಯಾವಾಗಲೂ ಕಾಲ ಒಂದೇ ರೀತಿ ಇರುವುದಿಲ್ಲ. ನದಿ ನೀರು ಕೂಡ ಹಾಗೆಯೇ. ಒಮ್ಮೊಮ್ಮೆ ನೆರೆಗೆ ಮಣ್ಣು ಕೊಚ್ಚಿ ಹೋಗಿ ಬಿಡುತ್ತದೆ. ಹೋದ ವರುಷ ದಾಟುವಲ್ಲಿ ಈ ವರುಷ ನೆಲವೇ ಕಾಲಿಗೆ ಸಿಗುವುದಿಲ್ಲ. ಕಲ್ಲೂ ಜಾರುತ್ತದೆ. ಪೊಯಿಲೂ ಜಾಸ್ತಿಯಾಗಿರುತ್ತದೆ. ನಮಗೆ ಸುಮ್ಮನೇ ಒಂದು ಯೋಚನೆಗೀಡು ಮಾಡಬೇಡ. ಇನ್ನು ಮುಂದೆ ಹೀಗೆಲ್ಲ ದಾಟಲಿಕ್ಕೆ ಹೋಗಬೇಡ. ಹಾಗೆ ನೆರೆ ಇದ್ದರೆ ಅಲ್ಲೇ, ಯಾರ ಮನೆಯಲ್ಲಾದರೂ ಇದ್ದು ಬಿಡುವುದು ಒಳ್ಳೇದು."

"ಸಣ್ಣಯ್ಯ ! ಅದು ನಿಜ. ಫಕ್ಕನೇ ಕಾಲು ಜಾರಿದರೆ"! ಎಂದು ಗೌಡನೂ ಕೂಡಿಸಿದ.

"ಈಸಲಿಕ್ಕೆ ಬರುತ್ತದಲ್ಲ" ಎಂದ ಅರವಿಂದ ನಗುತ್ತ !

"ಏನು ಈಸುತ್ತಿರಯ್ಯ ? ಮಳೆನೀರಿನ ಮುಂದೆ ಏನು ಈಸುತ್ತೀರಿ ? ನೀವು ನೀರಿನಲ್ಲಿ ಕುಶಾಲ್ ಮಾಡಬೇಡ್ರಿ !'' ಎಂದು ಅವನು ಗಂಭೀರವಾಗಿ ಎಚ್ಚರಿಸಿದ.

ಗೋಪಾಲರಾಯರು ಮಗನೊಡನೆ ಮಾತನಾಡತೊಡಗಿದರು. ರಾಮು ಗೌಡ ಹೊರಟು "ಅಯ್ಯಾ ! ಎರಡು ಮಾತ್ರೆ ಇದ್ದರೆ ಕೊಡಿ. ಮನೆಯಲ್ಲಿ ಒಂದು ಹುಡುಗ ಮಲ್ಕೊಂಡಿದೆ" ಎಂದ. ಅರವಿಂದನೇ ಎದ್ದು ಹೋಗಿ ನಾಲ್ಕು "ಕ್ವಿನಿನ್" ಗುಳಿಗೆಗಳನ್ನು ತಂದು ಕೊಟ್ಟು "ಅರ್ಧರ್ಧ ಮಾತ್ರೆಯಂತೆ ಊಟವಾದ ಮೇಲೆ ಕೊಡು. ಮಾತ್ರೆ ನುಂಗಿ ಸ್ವಲ್ಪ ಬಿಸಿನೀರು ಕುಡಿಯಲಿ. ಬರೇ ಗಂಜೀ ಕೊಡು" ಎಂದು ಪಥ್ಯವನ್ನು ತಿಳಿಸಿದ.

"ನಾಳೆ ಬೆಳಿಗ್ಗೆ ಕ್ಷೌರಿಕನನ್ನು ಕಳಿಸಿಕೊಡು'' ಎಂದು ಗೋಪಾಲರಾಯರು ಸೂಚಿಸಿದರು.

ಅರವಿಂದ ಮರಳಿದುದರಿಂದ ಅವರ ಮೋರೆಯಲ್ಲಿ ಗೆಲುವಿನ ಲಹರಿ ಓಲಾಡಿತು. ಮನೆಯನ್ನು ಮುಸುಕಿದ ವ್ಯಸನದ ಕತ್ತಲೆ ಸ್ವಲ್ಪ ಸ್ವಲ್ಪ

ಕರಗಿತು. ಅವನು ಪಾಸಾದುದೊಂದು ಹೆಚ್ಚಿನ ಸಂತೋಷ! ಕಾಲೇಜಿಗೆ ತೆರಳುವ ಮಾತೇ ಸದಾಗಾಲ ನಡೆಯುತ್ತಿದೆ. ಯಾವ ಕಾಲೇಜಿಗೆ, ಎಲ್ಲಿರುತ್ತೀ, ಹೊಟೇಲಿನಲ್ಲಿಯೇ, ಹೋಸ್ಟೇಲಿನಲ್ಲಿಯೇ, ಖರ್ಚು ಎಷ್ಟು ಬರುತ್ತದೆ, ಪುಸ್ತಕಗಳಿಗೆಷ್ಟು ಬೇಕು, ಇತ್ಯಾದಿ ವಿಷಯಗಳ ಚರ್ಚೆಯಾಗುತ್ತದೆ. ಅಷ್ಟು ವೆಚ್ಚವನ್ನು ಲೆಕ್ಕಿಸಿದ ಗೋಪಾಲರಾಯರಿಗೆ ಈ ಕಾಲೇಜ್ ಶಿಕ್ಷಣ ಯಾಕೆ ಎಂದು ಒಮ್ಮೊಮ್ಮೆ ಅನ್ನಿಸುತ್ತದೆ. ಹೊಟ್ಟೆಬಟ್ಟೆಗೆ ಸಾಲುವಷ್ಟು ದೇವರು ಕೊಟ್ಟಿದ್ದಾನೆ. ಇಲ್ಲೇ ಇದ್ದು ಇದನ್ನು ಊರ್ಜಿತ ಮಾಡಿದರೆ ಒಳ್ಳೇದು. ಅವನು ಮನೆಯಲ್ಲಿದ್ದರೂ ನಮಗೊಂದು ಧೈರ್ಯ. ಕಾವೇರಿ ಗಂಡನ ಮನೆಗೆ ತೆರಳಿದರೆ, ಇವನೂ ಕಾಲೇಜಿಗೆ ಹೋದರೆ ನಮಗೆ ಬೇಸರವಾದೀತು ಎಂದವರು ಯೋಚಿಸಿದುದೂ ಇದೆ. "ಹೆಂ. ನಾನು ಅಷ್ಟು ಮುದುಕನಾಗಿಲ್ಲ. ಇನ್ನೂ ಕೆಲವು ವರುಷ ಈ ಬೇಸಾಯ ಸಾಗಿಸಬಲ್ಲೆ. ಕಲಿಯಲಿ. ಈ ನಮ್ಮ ಕುಟುಂಬದಲ್ಲಿ ಬಿ. ಎ. ವರೆಗೆ ವಿದ್ಯಾ ವ್ಯಾಸಂಗ ಮಾಡಿದವರೂ ಕಡಿಮೆ" ಎಂದು ಮತ್ತೆ ತಮ್ಮ ಮನಸ್ಸನ್ನು ಸಂತೈಸಿಕೊಳ್ಳುವರು. ಕಾಲೇಜ್ ಕಲಿತು ಮಗ ಆಫೀಸರನೋ ವಕೀಲನೋ ಆಗುತ್ತಾನೆಂದು ಜಲಜಮ್ಮ ಮನದೊಳಗೆ ಹಿಗ್ಗಿದರು.

ಹೀಗಿರಲು ಒಂದು ದಿನ ಸಾಯಂಕಾಲ ಅರವಿಂದ ತಾಯಿಯಿದ್ದಲ್ಲಿ ಬಂದು "ಅಮ್ಮಾ! ಬಾಯಿ ಕಹಿ ಕಹಿ ಆಗುತ್ತದೆ'' ಎಂದು ಹೇಳಿ ಉಪ್ಪಿನಕಾಯಿ ಭರಣಿ ತೆಗೆದು ಒಂದು ಮಾವಿನ ಮಿಡಿಯನ್ನು ಬಾಯಿಯೊಳಗೆ ಹಾಕಿಕೊಂಡು ಚಪ್ಪರಿಸಿದ. "ಕಾವೇರಿ! ನಾನು ಹಾಲು ಕರೆದು ಬರುತ್ತೇನೆ. ನೀನು ನಾಲ್ಕು ಹಪ್ಪಳ ಸುಟ್ಟು ಅವನಿಗೆ ಕೊಡು!" ಎಂದು ಜಲಜಮ್ಮ ಹೇಳಿದರು. ಅವಳು ಕೆಂಡವನ್ನೆಳೆದು ಖಾರದ ಉದ್ದಿನ ಹಪ್ಪಳಗಳನ್ನು ಸುಡಲಾರಂಭಿಸಿದಳು. ಅರವಿಂದ ಅಲ್ಲೇ ಕುಳಿತು ಒಂದೊಂದನ್ನೇ ನುಂಗಿದ. ಆಗ ಕಾವೇರಿ "ಅಣ್ಣಾ! ಕಾಲೇಜಿಗೆ ಹೋದ ಮೇಲೆ ನಮ್ಮನ್ನೆಲ್ಲ ಮರೆಯಬೇಡ" ಎಂದಳು.

ಅವನು ಆಶ್ಚರ್ಯಭರಿತನಾಗಿ "ಯಾಕೆ? ಕಾಲೇಜಿಗೆ ಹೋದ ಕೂಡಲೇ ನಾನು ದೊಡ್ಡ ಮನುಷ್ಯನಾಗುತ್ತೇನೇನು?" ಎಂದ.

"ಯಾರಿಗೆ ಗೊತ್ತು? ವಕೀಲನೋ ಆಫೀಸರನೋ ಆದರೆ ಮತ್ತೆ

ಮಾತನಾಡಿಸುವದು ಕಷ್ಟ!"

"ಛೀ, ಛೀ ! ಹಾಗಿಲ್ಲ. ನನಗೆ ಆಫೀಸರನ ಕೆಲಸವೂ ಬೇಡ. ವಕೀಲನಂತೂ ಆಗುವುದೇ ಇಲ್ಲ. ವಕೀಲನಾಗಿ ಪೇಟೆಯಲ್ಲಿ ಇರಬೇಕು. ಥೂ! ಅಲ್ಲಿ ಹೊಟ್ಟೆತುಂಬ ಅನ್ನವಿಲ್ಲ. ಆ ಪಡಿಯಕ್ಕಿ ನಮ್ಮ ಮನೆಯ ಬೆಕ್ಕಿಗೆ ಸಾಲದು. ಈ ಊರಿನ ಸುಖ ಅಲ್ಲಿಲ್ಲ. ಈ ಊರನ್ನು ಬಿಡಲೂ ನನಗೆ ಮನಸ್ಸಿಲ್ಲ.''

"ಹಾಗಾದರೆ ನೀನು ಕಾಲೇಜಿಗೆ ಹೋಗುವುದಿಲ್ಲ ?''

"ಹೋಗುತ್ತೇನೆ. ಕಲಿತು ಡಾಕ್ಟರನಾಗಬೇಕೆಂದು ನನ್ನಾಶೆ."

"ಓಹೋಹೋ!"

"ಹುಂ ! ಮತ್ತೆ ನಿನ್ನ ಗಂಡನಂತ ಡಾಕ್ಟರನಲ್ಲ !"

ವಿನೋದಕ್ಕಾಡಿದ ಈ ಮಾತು ಕಾವೇರಿಯನ್ನು ಇರಿಯಿತು. ಒಂದು ಕ್ಷಣ ಅವಳಿಗೆ ಅರವು ಮರವಾಯಿತು. ಹಪ್ಪಳ ಸುಡುವ ಕೈಗೆ ಕೆಂಡಗಳು ತಾಗಿದುವು. ಅವಳು ಕೈ ಕೊಡಹಿಕೊಂಡಳು. ಕಣ್ಣುಗಳಿಂದ ಹನಿಗಳು ತೊಟ್ಟಿಕ್ಕಿದುವು. ಬೆಂಕಿ ತಾಗಿತೆಂದೇ ಅವನು ಭಾವಿಸಿಕೊಂಡ. ಅದು ತಾಗಿದ್ದುದೇನೋ ನಿಜ. ಆದರೆ ಅದು ಅವಳ ಹೃದಯಕ್ಕೆಂದು ಅವನು ಅರಿಯಲಿಲ್ಲ.

"ಕೈಗೆ ಸ್ವಲ್ಪ ಜೇನು ತುಪ್ಪ ಹಚ್ಚು" ಎಂದವನು ಹೇಳಿದ.

"ಸಾಕು, ನಿನ್ನ ಡಾಕ್ಟರಿಕೆ! ಈಗಲೇ ಸುರುಮಾಡಿದಿ, ಮದ್ದು ಮಾಯಕ್ಕೆ! ನನಗೆ ಗೊತ್ತಿಲ್ಲೇನು ? ನಡಿ ಹೊರಗೆ!" ಎಂದವಳು ಹೇಳಿದಳು.

ಅರವಿಂದ ಎದ್ದ. ಕಾಲೇಜ್ ತೆರೆವ ಒಂದು ವಾರದ ಮೊದಲು ಅವನು ಮಂಗಳೂರಿಗೆ ಹೊರಟು ಹೋದ.

# ೧೩ ನೇಯ ಅಧ್ಯಾಯ

ಚಂದ್ರಾವತಿ ಮಂಗಳೂರಿಗೆ ತೆರಳಬೇಕೆಂದು ಬಯಸಿದ್ದಳು. ಮಗಳನ್ನು ಕಾಣಲು ಅವಳ ಆತುರ. ವಾಸಂತಿ ಮನೆಗೆ ಬಾರದೆ ಸ್ವಲ್ಪಕಾಲವಾಯಿತು. ಇತ್ತೀಚೆಗೆ ಅವಳು ಹಣವನ್ನೂ ಕಳಿಸಿಲ್ಲ. ಪ್ರತಿತಿಂಗಳು ಹತ್ತು, ಇಪ್ಪತ್ತು ರೂಪಾಯಿಗಳನ್ನು ಮನಿಯಾರ್ಡರ್ ಮಾಡುತಿದ್ದಳು! ಈಗ ಒಮ್ಮಿಂದೊಮ್ಮೆಯೇ ನಿಲ್ಲಿಸಿಬಿಡಲು ಕಾರಣವೇನು? ಹಣ ಕಳಿಸದಿದ್ದರೆ ಬಿಡಲಿ.ಅವಳನ್ನು ನಂಬಿ ಚಂದ್ರಾವತಿ ಬಾಳುವುದಿಲ್ಲ!ಉಂಟು ಮಾಡಿದವನು ಊಟ ಕೊಡಲಾರದೆ ಇರುತ್ತಾನೆಯೇ? ಆದರೆ ಒಂದು ಪತ್ರವನ್ನು ಹಾಕಬಾರದೇಕೆ? "ನಾನು ಕ್ಷೇಮ. ನಾರಾಯಣನೂ ಚೆನ್ನಾಗಿದ್ದಾನೆ. ನೀನು ಹೇಗಿದ್ದೀ? ಅಕ್ಕಂದಿರ ವರ್ತಮಾನ ತಿಳಿಸು" ಎಂದಿಷ್ಟು ಒಂದು ಕಾರ್ಡಿನಲ್ಲಿ ಗೀಚಿ ಹಾಕಬಹುದು. ಇನ್ನೂ ಇದ್ದೇನಲ್ಲ, ಮುದಿಜೀವ! ಸಾಕಿ ಸಲಹಿದ್ದಕ್ಕೆ ಅಷ್ಟನ್ನಾದರೂ ಮಾಡಬಾರದೇನು ಎಂದು ಅವಳು ವ್ಯಸನಪಟ್ಟಳು. ಹಾಗೆ ಚಿಂತಿಸುತ್ತ ಹೋದಂತೆ ಅವಳಿಗೆ ಅನ್ಯ ವಿಚಾರಗಳೂ ಹೊಳೆದುವು. ಮತ್ತೆ ಮಂಗಳೂರಿನಲ್ಲೇ ಇದ್ದಾಳೋ ಇಲ್ಲವೋ! ಪ್ರಕೃತಿ ಸರಿಯಾಗಿದೆಯೋ ಇಲ್ಲವೋ? ಒಮ್ಮೆ ನೋಡಿ ಬರಬೇಕಾಯಿತಪ್ಪ! ಬೆಳಿಗ್ಗೆ ಮೋಟಾರಿನಲ್ಲಿ ಕೂತು ಸಂಜೆಗೆ ಬಂದುಬಿಡುತ್ತೇನೆ. ಇಲ್ಲದಿದ್ದರೆ ಈ ಮನೆಯಲ್ಲಿ ಯಾರಿದ್ದಾರೆ ಬೇರೆ ಭೂತ? ಆಚೆ ಮನೆಯವರಿಗೆ ಹೇಳಿ ಹೋದರಾಯಿತು ಎಂದು ಅವಳು ಯೋಚಿಸಿ ಈ ಹೊತ್ತು, ನಾಳೆ ಎಂದು ಕೆಲವು ದಿನಗಳನ್ನು ಕಳೆದಳು. ಏಕೆಂದರೆ ತಟ್ಟನೆ ಮಗಳ ಮನೆಗೆ ಹೋಗಲಿಕ್ಕಾಗುತ್ತದೆಯೇ? ಹೋಗುವಾಗ ಸ್ವಲ್ಪ ಉಪ್ಪಿನಕಾಯಿ, ಹಪ್ಪಳ. ಸಂಡಿಗೆಗಳನ್ನು ಒಯ್ಯಲು ಅವಳ ಆಸೆ. ಹಾಗೆ ಸಿದ್ಧತೆ ಮಾಡುತಿದ್ದಾಗಲೇ ನಾರಾಯಣನ ಪತ್ರ ಬಂದಿತು. ಅದನ್ನು ಓದಿಸಿ ನೋಡಿ ಅವಳ ಕಾಲುಗಳು ತಣ್ಣಗಾದುವು. ಆಶ್ಚರ್ಯ, ಚಿಂತೆ, ದುಃಖ, ಕೋಪಗಳಿಂದ ಅವಳು ಕುದಿದಳು. ಆನಂದರಾಯ ಬಂದಾಗ ಕೂಡ ಅವಳ ಸಿಟ್ಟು ಇಳಿದಿರಲಿಲ್ಲ. ಆದುದರಿಂದಲೇ ಅವಳು ಅವನನ್ನು ಪ್ರೀತ್ಯಾದರದಿಂದ ಸ್ವಾಗತಿಸಲಿಲ್ಲ.

ಆ ಮೇಲೆ ಒಂದು ದಿನ ಬೆಳಿಗ್ಗೆ ಅವಳು ಮಂಗಳೂರಿಗೆ ಹೋದಳು.

ಹಿಂದೆ ಒಂದೆರಡು ಸಲ ಅವಳು ತೆರಳಿದವಳಾಗಿದ್ದುದರಿಂದ ಮನೆ ಹುಡುಕುವ ಅಗತ್ಯವಿರಲಿಲ್ಲ. ಸಿಟಿ ಬಸ್ಸಿಗೆ ಎರಡಾಣೆ ಕೊಟ್ಟರೆ ಉರ್ವದ ವರೆಗೆ ಸುಲಭದಲ್ಲಿ ಬರಬಹುದಿತ್ತು. ಆದರೆ ರೂಢಿಯಿಲ್ಲದ ಚಂದ್ರಾವತಿ ಜಟ್ಕಾ ಮಾಡಿಕೊಂಡೇ ಬಂದಳು. ಕೈಯಲ್ಲಿ ಒಂದೆರಡು ಡಬ್ಬಿ, ಭರಣಿಗಳು ಇದ್ದುದರಿಂದ ಅದಕ್ಕೆ ಜಟ್ಕವೇ ಅನುಕೂಲ. ಜಟ್ಕಾ ಮನೆಯ ಆಚೆ ಬಂದು ನಿಂತುದುದನ್ನು ಅಕಸ್ಮಾತ್ ನೋಡಿದ ವಾಸಂತಿ ಮನೆಯಿಂದ ಅಲ್ಲಿಗೆ ಓಡಿ ಬಂದಳು. "ಅರರೆ, ಯಾವಾಗ ಬಂದಿಯಮ್ಮಾ! ಒಂದು ಪತ್ರ ಹಾಕುತಿದ್ದರೆ ನಾನು ಮೋಟಾರ ನಿಲ್ದಾಣಕ್ಕೆ ಬರುತಿದ್ದೆನಲ್ಲ!" ಎಂದು ಹೇಳಿ ಒಂದು ಡಬ್ಬಿಯನ್ನು ಎತ್ತಿಕೊಂಡಳು. ಜಟ್ಕಾದ ಪಬ್ಬು ಇನ್ನೊಂದು ಡಬ್ಬಿಯನ್ನು ಹೊತ್ತು ತಂದ. ಉಪ್ಪಿನಕಾಯಿ ಭರಣಿಯನ್ನು ಚಂದ್ರಾವತಿಯೇ ಹಿಡಿದುಕೊಂಡಳು. ಪಬ್ಬುವಿಗೆ ವಾಸಂತಿಯೇ ಬಾಡಿಗೆ ಕೊಟ್ಟು ಕಳಿಸಿದಳು. ಕಾಫಿ ಮಾಡಲೆಂದು ವಾಸಂತಿ ಅಡಿಗೆ ಕೋಣೆಗೆ ಬಂದಳು. ತಾಯಿಯೂ ಅಲ್ಲೇ ಬಂದು ಕುಳಿತಳು.

"ಅಬ್ಬಬ್ಬ! ಈ ಬಸ್ ಪ್ರಯಾಣ ಸಾಕಾಯಿತಪ್ಪ, ದೇವರೇ! ಏನು ರಸ್ತೆ! ಒಂದೊಂದು ಕಡೆ ಗದ್ದೆಗಿಂತ ಹೆಚ್ಚು ಕೆಸರು. ಅಲ್ಲಲ್ಲಿ ದೊಡ್ಡ ದೊಡ್ಡ ಹೊಂಡಗಳು! ಈ ಬಸ್ ಹೋಗುವಾಗ ಹಾರಿ ಹಾರಿ ಬೀಳುತಿತ್ತು. ಗಡಬಡ, ಗಡಬಡ ಎತ್ತಿನ ಗಾಡಿಗಿಂತ ಕಡೆ. ಬೆನ್ನೆಲುಬೇ ಇಲ್ಲ, ನೋಡು! ಕೈ ಮೈ ಅದುರಿ ಹೋಯ್ತು. ಈ ಹೊತ್ತು ಜ್ವರ ಬಾರದಿದ್ದರೆ ಪುಣ್ಯ!" ಎಂದು ಚಂದ್ರಾವತಿ ನಿಟ್ಟುಸಿರಿಟ್ಟಳು. ಆ ಮೇಲೆ ಮಗಳ ಕಡೆ ಹೊರಳಿ "ಯಾಕೆ, ನಿನಗೂ ಜ್ವರಗಿರ ಬಂತೇನು? ಬಹಳ ಇಳಿದಿದ್ದೀಯಾ?'' ಎಂದು ಪ್ರಶ್ನಿಸಿದಳು.

"ಏನೂ ಇಲ್ಲ!" ಎಂದು ವಾಸಂತಿ ಬೇಸರದ ದನಿ ತೆಗೆದಳು.

"ಏನೂ ಇಲ್ಲ ಅಂದರೆ! ನೀನು ತಿನ್ನುವುದಿಲ್ವಾ, ಉಣ್ಣುವುದಿಲ್ವಾ? ನಿನಗೆ ಏನಾದರೂ ಕಡಿಮೆ ಮಾಡಿದ್ದಾನೇನು? ಹಾಗಿದ್ದೂ ಯಾಕೆ ಕ್ಷೀಣವಾಗಿದ್ದೀ? ಬರಿ ಗಂಜಿ, ಉಪ್ಪಿನಕಾಯಿ ನಾನು ಹಾಕಿದಾಗಲೂ ಉಡುಪಿಯಲ್ಲಿ ಇದಕ್ಕಿಂತ ಚೆನ್ನಾಗಿದ್ದಿ! ಈಗ ಮೋರೆಯಲ್ಲಿ ಕಳೆಯೇ ಇಲ್ಲ. ಏನು, ದೇಹಕ್ಕೆ ಸುಖವಿಲ್ವಾ? ಹಾಗಿದ್ದರೆ ಅದನ್ನು ಮುಚ್ಚಿಕೊಳ್ಳಬಾರದು

ತಾಯಿ ಮುಂದೆ ಹೇಳದ ಗುಟ್ಟು ಯಾವುದು, ಅಂಥಾದ್ದು ? ಹೇಳಿದರೆ ಹಾಗೆ ಮಾಡು, ಹೀಗೆ ಮಾಡು ಎಂದು ನಮಗೆ ಸೂಚಿಸಲು ಬರುತ್ತದೆ."

"ನನ್ನ ಮನಸ್ಸಿಗೆ ಸುಖವಿಲ್ಲ"

"ಯಾಕೆ ? ಏನಾಯಿತು ?"

ವಾಸಂತಿ ಸೆರಗನ್ನು ಕಣ್ಣಿಗೆ ತಂದುಕೊಂಡಳು. ಚಂದ್ರಾವತಿಯೇ ಕೇಳಿದಳು : "ಯಾಕೆ ? ಸರಿಯಾಗಿ ನೋಡುವುದಿಲ್ವೇನು ನಿನ್ನನ್ನು ? ಅಥವಾ ಹೊಡೆದು ಬಡೆದು ಹಿಂಸೆ ಕೊಡುತ್ತಾನೇನು ?"

"ಅದೊಂದೇ ಬಾಕಿ !"

"ಅಂದರೆ ?"

"ನಿನಗೆ ಗೊತ್ತೇ ಇಲ್ಲೇನು ?"

"ಏನು ?"

"ನಮ್ಮ ಯಜಮಾನರು ಲಗ್ನವಾದ ಸುದ್ದಿ"

"ಅಬ್ಬಬ್ಬ ! ಅಮ್ಮಯ್ಯ! ನನಗೆ ಗೊತ್ತೇ ಇಲ್ಲ. ನೀನೂ ಒಂದು ಪತ್ರ ಬರೆಯಲಿಲ್ಲ. ನನಗೆ ಯಾರು ಹೇಳಬೇಕು ? ಯಾವಾಗನೇ ? ಯಾಕೆ ಲಗ್ನವಾದ ? ಯಾರನ್ನು ? ಎಲ್ಲಿ ?" ಎಂದು ಏನೂ ತಿಳಿಯದವಳಂತೆ ಚಂದ್ರಾವತಿ ಏಕಕಾಲದಲ್ಲಿ ಅನೇಕ ಪ್ರಶ್ನೆಗಳನ್ನು ಕೇಳಿದಳು. ವಾಸಂತಿ ತಾನರಿತ, ನಾರಾಯಣ ಹೇಳಿದ ಸುದ್ದಿ ಸಮಾಚಾರಗಳನ್ನೆಲ್ಲ ತಿಳಿಸಿದಳು. ತನ್ಮಧ್ಯೆ ನಾರಾಯಣನ ಕಥೆಯೂ ಬಂತು. ಕಾಫಿ, ತಿಂಡಿ, ಸ್ನಾನ, ಊಟ, ಮನೆಗೆಲಸಗಳ ಮಧ್ಯೆ ತಾಯಿ ಮಗಳು ಸುಖದುಃಖದ ಮಾತುಗಳಲ್ಲಿ ಮಗ್ನರಾದರು. "ಇಂಥ ಮನುಷ್ಯನೆಂದು ನನಗೆ ಗೊತ್ತಾಗಲಿಲ್ಲ, ಬಿಡು. ನಾನು ಒಳ್ಳೆಯವನೆಂದು ತಿಳಿದಿದ್ದೆ. ಹೆಂಡತಿಯಂತೆ ನೋಡುತ್ತೇನೆ. ಜೀವಂತವಿರುವ ವರೆಗೆ ಬೇರೆ ಲಗ್ನ ಮಾಡಿಕೊಳ್ಳುವುದಿಲ್ಲ" ಎಂದು ನನ್ನ ಮುಂದೆ ನುಡಿದಿದ್ದ. ನಾನು ಸತ್ಯವೆಂದೇ ನಂಬಿ ಈಗ ಮೋಸಹೋದೆ ನಲ್ಲಾ ! ನನ್ನೊಡನೆ ಒಂದು ಮಾತನ್ನು ಕೇಳಲಿಲ್ಲವಲ್ಲ ಅವ ?" ಎಂದು ಚಂದ್ರಾವತಿಯು ಕಣ್ಣೀರ್ಗರೆದಳು.

"ಲಗ್ನವಾಗುವ ವಿಚಾರವನ್ನು ನನಗೂ ಹೇಳಲಿಲ್ಲ !" ಎಂದು ವಾಸಂತಿ ಕೂಡಿಸಿದಳು.

"ಆ ಮೇಲೆ ಬಂದಿದ್ದನೇನು?"

"ಹೌದು"

"ಏನು ಹೇಳಿದ?"

"ನಿನ್ನ ಮೇಲೆ ನನಗೆ ಪ್ರೇಮವಿದೆ ಎಂದರು."

"ಥೂ! ಎಲ್ಲ ಢೋಂಗಿ! ಪ್ರೇಮವಿದ್ದರೆ ನಿನ್ನನ್ನೇ ಲಗ್ನದ ಹೆಂಡತಿಯಂತೆ ಕಾಣಬೇಕಾಗಿತ್ತು. ನಿಜವಾಗಿ ನೋಡಿದರೆ ನಾನೇ ತಪ್ಪಿದ್ದೆ. ಲಗ್ನ ಮಾಡಿಕೊಂಡರೇ ಹುಡುಗಿಯನ್ನು ಕೊಡುತ್ತೇನೆಂದು ಆಗ ಹಟ ಹಿಡಿಯಬೇಕಾಗಿತ್ತು. ಈಗ ನಮ್ಮ ಜಾತಿಯ ಎಷ್ಟೋ ಹುಡುಗಿಯರನ್ನು ಮುಂಬಯಿ, ಬೆಂಗಳೂರು ಕಡೆಯವರು ಬಂದು ಮದುವೆ ಮಾಡಿಕೊಂಡು ಹೋಗಿದ್ದಾರೆ. ಹಾಗೆ ಮಾಡುತಿದ್ದರೆ ಒಂದು ರೀತಿ ಚಂದವಾಗುತಿತ್ತು. ಕಟ್ಟಿಕೊಂಡವನು ಹೊಟ್ಟೆಗಾದರೂ ಹಾಕುತಿದ್ದನಲ್ಲ! ನಾನೂ ಅವನ ಮಾತಿಗೆ ಮರುಳಾದೆ! ಸುಮ್ಮನೆ ನಮ್ಮ ಕಣ್ಣಿಗೆ ಮಣ್ಣು ಹಾಕಲು ಹೆಸರಿಗೆ ಮನೆಯಲ್ಲಿ ಕರಿಮಣಿ ಕಟ್ಟಿದ! ಅದನ್ನು ಯಾರು ನೋಡಿದವರು? ಅವನೇ ಕಟ್ಟಿದ್ದನೆಂದು ನಾವು ಹೇಳಿದರೆ ಕೇಳುವವರು ಯಾರು? ಇನ್ನು ನಿನ್ನ ಗತಿಯೇನೋ ನನಗೆ ಗೊತ್ತಾಗುವುದಿಲ್ಲ!"

"ನೀನು ಇರು. ನಿನ್ನನ್ನು ಬಿಡುವುದಿಲ್ಲ ಎಂದು ಹೇಳುತ್ತಾರೆ"

"ಆ ಮಾತಿಗೆ ಏನು ಅರ್ಥ? ಇಬ್ಬರನ್ನು ಹೇಗೆ ನೋಡುತ್ತಾನೆ? ಇವನೇನು ದೊಡ್ಡ ಗುತ್ತಿನ ಹೆಗ್ಗಡೆ ಏನು? ಮೊದಲೇ ಲೋಭಿ. ಕೈಎತ್ತಿ ಕೊಡಲು ಹಿಂದೆ ಮುಂದೆ ನೋಡುತ್ತಾನೆ. ನೀನು ಒಬ್ಬಳಿರುವಾಗಲೇ ಕೊಟ್ಟದ್ದು ಇಷ್ಟೇ ಎಂದು ನನಗೆ ಗೊತ್ತಾಗುತ್ತದೆ. ನಿನ್ನ ಕೈ, ಕುತ್ತಿಗೆಗಳನ್ನು ನೋಡಿದರೆ ಗೊತ್ತಾಗುವುದಿಲ್ವಾ? ಎರಡೆರಡು ಬಳೆ, ಸರಗಳಿಗೂ ಗತಿಯಿಲ್ಲ! ಮನೆಯಲ್ಲಿ ಇರುವ ಭಾಗ್ಯ ನೋಡಿದರೆ ಬೇಡ. ನಾಲ್ಕು ಜನರು ಒಮ್ಮೆ ಊಟಕ್ಕೆ ಬಂದರೆ ಅಡಿಗೆ ಆತಿಥ್ಯ ನೀಡುವಷ್ಟು ಪಾತ್ರೆ ಪರಡಿಗಳಿಲ್ಲ. ಸಾಕು ಬಿಡು, ಅವನ ವೈಭವ ಸುಟ್ಟಿತು. ಒಂದಕ್ಕೇ ಹೀಗಾದರೆ ಇನ್ನೊಂದು ಬಂದ ಮೇಲೆ ಇದಕ್ಕಿಂತ ಕಡೆ."

ಆ ಮೇಲೆ ಅವಳು ಸ್ವಲ್ಪ ವಿಚಾರಿಸಿದಳು: "ಹೆಂಡತಿಗೆ ಬೇರೆ ಮನೆ ಮಾಡಿಕೊಡುತ್ತಾನೇನು?"

"ಏನೋ ನನ್ಮುಂದೆ ಹೇಳಿಲ್ಲ"

"ಮಾಡಿಕೊಟ್ಟ್ಯಾನು. ಮತ್ತೆ ಅವಳು ನಿನ್ನೊಟ್ಟಿಗೆ ಹೇಗಿರುತ್ತಾಳೆ? ನೀನು ಮಾಡಿದ ಅನ್ನ ಊಟ ಮಾಡಲಿಕ್ಕೂ ಇಲ್ಲ. ಅಲ್ಲೊಂದು ಬಿಡಾರ, ಇಲ್ಲೊಂದು ಬಿಡಾರ ಹೇಗೆ ನಡೆಸುತ್ತಾನೆ? ಇಬ್ಬರನ್ನು ಹೇಗೆ ಸಾಕುತ್ತಾನೆ? ಎರಡು ಬಿಡಾರ ಮಾಡಿದನೆಂದೆನ್ನೋಣ! ಅದು ಎಷ್ಟು ಕಾಲದ ವರೆಗೆ ನಡೆಯುತ್ತದೆ?"

ವಾಸಂತಿಯೂ ಯೋಚನೆಗೀಡಾದಳು.

ಚಂದ್ರಾವತಿಯೇ ಮಾತು ಮುಂದುವರಿಸಿದಳು: "ನಿನ್ನ ಮೇಲೆ ಅವನಿಗೆ ಇಷ್ಟವಿದೆಯೆಂದೇ ತಿಳಿಯೋಣ. ನಾಳೆ ಹೆಂಡತಿ ಮನೆಗೆ ಬಂದ ಮೇಲೆ ಹೇಗಿರುತ್ತದೆ? ಎಷ್ಟಾದರೂ ಅವಳು ಹೆಂಡತಿ! ಹೊಸ ಹುಡುಗಿ! ಚೆಲುವೆ ಬೇರೆ ಎಂದು ನೀನೇ ಹೇಳುತ್ತೀ. ಅವಳ ಕಡೆಗೇ ಅವನು ಆಕರ್ಷಿಸಲ್ಪಡುತ್ತಾನೆ. ನಿನ್ನ ಹತ್ತಿರ ಎಲ್ಲಾದರೂ ಆಗೊಮ್ಮೆ ಈಗೊಮ್ಮೆ ಕದ್ದು ಮುಚ್ಚಿ ಬಂದಾನು! ಅದೂ ಹೆಂಡತಿಗೆ ಗೊತ್ತಾದಾಗ ಅವಳು ಬಿಡಲಿಕ್ಕಿಲ್ಲ! ಆಗ ಅವನು ಇಬ್ಬರಲ್ಲಿ ಒಬ್ಬರನ್ನು ಬಿಡಬೇಕಾದ ಪ್ರಸಂಗ ಬರಬಹುದು! ಹೆಂಡತಿಯನ್ನು ಬಿಡುತ್ತಾನೇನು? ಹಾಗೆ ಮಾಡಿದರೆ ಅವಳ ತಂದೆ ತಾಯಿ, ಬಂಧು ಬಳಗದವರು ಬಿಡಲಿಕ್ಕಿಲ್ಲ. ನಮ್ಮ ಮೇಲೆ ಲೋಕಾಪವಾದ ಬೇರೆ. ಹಾಗೆ ಬಿಡುವ ಪ್ರವೃತ್ತಿ ಇರಲಿಕ್ಕಿಲ್ಲ. ಹಾಗಿದ್ದರೆ ಮದುವೆ ಯಾಕೆ ಮಾಡಿಕೊಳ್ಳುತ್ತಾನೆ? ನೀನೇ ಸಾಕಾಗುತಿದ್ದಿಲ್ಲವೇನು? ಮುಖ್ಯ ನಿನ್ನ ಮೇಲೆ ಅವನ ಹೃದಯಾಂತರಾಳದಲ್ಲಿ ಪ್ರೇಮವಿಲ್ಲವೆಂದು ಇದರಿಂದ ಅರ್ಥವಾಗುತ್ತದೆ. ಸುಮ್ಮಗೆ "ಇರು, ಇರು" ಎಂದು ಹೇಳಿದ್ದಾನೆ. ಅಷ್ಟೆ! ನಾಳೆ ಬಿಡುವ ಸಂದರ್ಭ ಬಂದಾಗ ಬಿಡುವುದು ನಿನ್ನನ್ನು ಹೊರತು ಅವಳನ್ನಲ್ಲ!"

ವಾಸಂತಿಯ ಕಣ್ಣುಗಳು ತೊಯ್ದುವು.

ಚಂದ್ರಾವತಿ ಪುನಃ ಹೇಳಿದಳು: "ನಾಳೆ ಅವಳಿಗೆ ಮಕ್ಕಳಾದುವೆಂದು ತಿಳಿ. ಆ ಮೇಲೆ ನಿನ್ನನ್ನು ನೋಡುತ್ತಾನೇನು? ಮೋಹ ಆ ಕಡೆಯೇ ಎಳೆಯುವುದು ಸಹಜ. ಇಷ್ಟು ವರುಷವಾಯಿತು, ನಿನಗೊಂದು ಮಗುವೂ ಆಗಲಿಲ್ಲವಲ್ಲ"

"ಮಕ್ಕಳು ಬೇಡವಂತೆ! ಅದಕ್ಕೆ ಯಾವಾಗಲೂ ಔಷಧ ಕೊಡುತಿ

ದ್ದಾರೆ."

"ಅಕೋ! ಅಕೋ! ಇದನ್ನು ನೀನು ನನಗೆ ಇಷ್ಟರ ವರೆಗೂ ಹೇಳಲಿಲ್ಲ" ಎಂದ ಚಂದ್ರಾವತಿ ಯಾವ ಔಷಧ, ಏನು, ಎಂದಿನಿಂದ ತೆಗೆದುಕೊಳ್ಳುತ್ತೀ ಎಂದು ಕೇಳಿಕೊಂಡಳು. ಅದನ್ನು ಅರಿತ ಮೇಲೆ ಅವಳಿಗೆ ಇನ್ನಷ್ಟು ಸಂಕಟವಾಯಿತು. ಹಳೇ ಸಂಪ್ರದಾಯದಲ್ಲಿ ಬೆಳೆದ ಅವಳಿಗೆ ಈ ಔಷಧ ಸಾಧನಗಳೆಲ್ಲ ಅತಿ ವಿಚಿತ್ರವಾಗಿ ಕಂಡುವು. ಮತ್ತು ಆನಂದರಾಯನ ಮೇಲೆ ತುಂಬ ತಾತ್ಸಾರವುಂಟಾಯಿತು.

"ನಿನ್ನ ಹಣೆಬರಹ! ನಾನು ಏನು ಮಾಡಲಿ ಹೇಳು!" ಎಂದು ಚಂದ್ರಾವತಿ ಹೇಳುತ್ತ ಮತ್ತಿಂತೆಂದಳು: "ಸಣ್ಣವಳಿದ್ದಾಗ ನಾನು ಹೇಳಿದ ಮಾತುಗಳನ್ನು ನೀನು ಕೇಳಲಿಲ್ಲ. ಪುನಃ ಶಾಲೆಗೆ ಹೋಗಲು ನಾಚಿ ಮನೆಯಲ್ಲೇ ಕುಳಿತುಬಿಟ್ಟೆ. ಆ ಶಾಲೆಯಲ್ಲದಿದ್ದರೆ ಮತ್ತೊಂದು. ಬೇರೆ ಶಾಲೆಗಳೇ ಇರಲಿಲ್ಲವೇನು? ಕಲಿತು ಒಂದು ಟೀಚರ್ ಕೆಲಸವನ್ನಾದರೂ ಮಾಡಬಹುದಾಗಿತ್ತು. ಕಲಿಯುವುದರಲ್ಲಿ ಜಾಣೆ ಎಂದು ತಿಳಿದಿದ್ದೆ. ಮತ್ತು ಹಾಗೆಂದೇ ಹಿರಿಯಡ್ಕ, ಪೆರ್ಡೂರು, ಮುಂಬಯಿಗಳಿಂದ ಜಾತಿಯವರು ಬಂದು ಕೇಳಿದಾಗ ಮದುವೆ ಮಾಡಿಕೊಡಲಿಲ್ಲ. ಈಗ ನೋಡಿದರೆ, ಆಗಲೇ ನಿನ್ನನ್ನು ಯಾರ ಕೈಗಾದರೂ ಹಾಕಿದ್ದರೆ ಉತ್ತಮವಾಗುತಿತ್ತೆಂದು ಅನ್ನಿಸುತ್ತದೆ. ಸುಖವಾಗಿ ಇರುತಿದ್ದಿರಿ! ಲಗ್ನವಾಗದಿದ್ದರೂ ಲಗ್ನವಾದ ಹೆಂಡತಿಗಿಂತ ಹೆಚ್ಚಾಗಿ ನಿನ್ನನ್ನು ಮೆರೆಸುವವರೂ ಇದ್ದರು. ಆ ಬಲ್ಲಾಳರ ಮಗ ಯಾವಾಗಲೂ ಬರುತಿದ್ದ. ಆ ಬಲ್ಲಾಳರ ಮಗನ ಕೊರಳ ಸರ, ಬೆರಳ ಉಂಗುರ, ಶೋಕಿ ನೋಡಿದರೆ ಯಾರಾದರೂ ಮರುಳಾಗುತಿದ್ದರು. ಅವರ ತಂದೆ ಮದ್ರಾಸಿನಲ್ಲೊಂದು ಹೋಟೇಲನ್ನಿಟ್ಟದ್ದಾರೆ. ಮದ್ರಾಸಿನ ರಾಜ! ನಿನ್ನಂತಹ ನೂರು ಅರಸಿಯರನ್ನು ಆದರಿಸುವ ಹಣವಿದೆ! ಆ ಗುತ್ತಿನ ಹೆಗ್ಗಡೆಯವರಂತೂ ಪ್ರತಿಸಲ ಮನೆಗೆ ಬಂದಾಗ ಸೀರೆ ತರುತಿದ್ದರು. ವರುಷಂಪ್ರತಿ ಸಾವಿರಾರು ಮುಡಿ ಅಕ್ಕಿ ಅವರ ಮನೆ ಬಾಗಿಲಿಗೆ ಬಂದು ಬೀಳುತ್ತದೆ. ಈಗಂತೂ ಅಕ್ಕಿಯೆಂದರೆ ಬಂಗಾರ! ಒಂದು ಮನೆ ಕಟ್ಟಿಸಿದ್ದಾರೆ. ತೇಟ್ ಅರಮನೆ! ಈಗಲೂ ಒಮ್ಮೊಮ್ಮೆ ನಿನ್ನನ್ನು ನೆನೆಸುತ್ತಾರೆ. ಕುಲಗೆಟ್ಟರೂ ಸುಖಪಡೆಯಬೇಕೆಂಬ ಒಂದು ಗಾದೆಯಿದೆ. ಅಂಥ ಜನ

ರನ್ನು ಗಟ್ಟಿಯಾಗಿ ಹಿಡಿದುಕೊಂಡರೆ ಸರಿ. ನೀನು ಕೇಳಲಿಲ್ಲ. "ನನ್ನ ಮಾತನ್ನು ನನ್ನ ಮಗಳು ಆಲಿಸುವದಿಲ್ಲ" ವೆಂದು ಹೇಳಿ ಅವರನ್ನು ಕಳಿಸಬೇಕಾದರೆ ಪ್ರಾಣಕ್ಕೆ ಬಂತು. ಅವರಿಗೇನು? ನೀನಲ್ಲದಿದ್ದರೆ ಇನ್ನೊಬ್ಬಳು? ಊರಿನಲ್ಲಿ ಸೂಳೆಯರಿಗೆ ಬರಗಾಲ ಬಂದಿಲ್ಲ. ಆದರೆ ಭಾಗ್ಯವನ್ನು ಕಳೆದುಕೊಂಡವರು ಯಾರು? ಈ ಜೀವರ್ಸಿ ಎಲ್ಲಿಂದಲೋ ಗಂಟುಬಿದ್ದ. ನೀನು ಹುಚ್ಚು ಕಟ್ಟಿ ಹೊರಟುಬಿಟ್ಟೆ. ಅವನನ್ನು ಗಟ್ಟಿಯಾದರೂ ಹಿಡಿದುಕೊಂಡೆಯಾ? ಅದೂ ಇಲ್ಲ. ಸುಖ ಸಂತೋಷದಿಂದ ಮೆರೆದೆಯಾ? ಅದೂ ಇಲ್ಲ. ಜೈಲಿನಲ್ಲಿಟ್ಟ ಹಾಗೆ ನಿನ್ನನ್ನು ಇಲ್ಲಿ ತಂದಿಟ್ಟಿದ್ದಾನೆ. ವರುಷಕ್ಕೊಮ್ಮೆ ತಾಯಿ ಮುಖ ಕಂಡಿಲ್ಲ. ಸಿರಿಸಂಪತ್ತು ಮನೆಮಾರು ಗಳಿಸಿದೆಯಾ? ಅದೂ ಊಹುಂ! ಮತ್ತೆ ಏನು ನಿನಗೆ ಅವನ ಮೇಲೆ ಅಷ್ಟು, ಮೂರುಕಾಸಿನವಳಿಗೆ!"

ವಾಸಂತಿ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಸಿಟ್ಟಿನಿಂದಲೇ ಚಂದ್ರಾವತಿ ಜರೆದಳು: "ಉಡುಸಿಗೆ ಬಾ ನನ್ನ ಹಿಂದೆ. ತೋರಿಸುತ್ತೇನೆ ನಿನಗೆ ಕೆಲವರನ್ನು! ದೊಡ್ಡ ದೊಡ್ಡವರನ್ನು ಹಿಡಿದು [illegible] ಮಕ್ಕಳು ಕಾಲೇಜಿಗ ತೆರಳುತಿದ್ದಾರೆ. ಮುಂಬಯಿಯಲ್ಲಿ ಕೆಲವರು ನೌಕರಿ ಮಾಡುತಿದ್ದಾರೆ. ವ್ಯಾಪಾರದ ಕಂಪೆನಿ ತೆಗೆದಿದ್ದಾರೆ. ಮಕ್ಕಳಿಗೆ ಮದುವೆ ಮಾಡಿದರೆ ಮಠದಲ್ಲಿ ನಡೆದ ಹಾಗೆ ವೈಭವ! ಅವರ ಮೇಲೆ ಚಿನ್ನಾಭರಣವೆಷ್ಟು! ಅಷ್ಟು ದೂರದಿಂದ ಬರುವಾಗ ಗುಂ ಗುಂ ಸೆಂಟಿನ ಪರಿಮಳ!"

ಈ ರೀತಿ ಹಂಗಿಸಿದ ಚಂದ್ರಾವತಿ ಕೊನೆಗೆ ಉಪದೇಶ ಮಾಡಿದಳು: "ಇಕೋ, ಇನ್ನಾದರೂ ನನ್ನ ಮಾತು ಕೇಳು. ಇನ್ನು ಅವನ ಸಂಸರ್ಗ ಸಾಕು. ಮನಸನ್ನು ಕಡಿದುಕೊಂಡು ಬಿಡು. ಸೂಳೆ ಗರತಿಯಾಗುವುದೇ ತಪ್ಪು. ವಸ್ತ್ರ ಬದಲಾಯಿಸಿದಂತೆ ಅವರನ್ನು ಬದಲಾಯಿಸಬೇಕು. ಒಬ್ಬನನ್ನೇ ನಂಬಿರಬಾರದು. ಕರೆವ ದನವನ್ನೇ ಆಗಾಗ ಬದಲಾಯಿಸುತ್ತಾರೆ. ಗೊಡ್ಡು, ಬಚ್ಚಿದ ದನವನ್ನು ಹಿಂಡುತ್ತಾರೇನು? ಹೀಗೆಯೇ ಎಷ್ಟು ದಿನ ಇರುತ್ತೀ? ಯೌವನ ಕರಗಿದ ಮೇಲೆ ಅವನು ನಿನ್ನನ್ನು ಹೊರಗೆ ಹಾಕುತ್ತಾನೆ. ಅಂಥ ದುರ್ಗತಿ ಬಾರದಂತೆ ಈಗಲಾದರೂ ಜಾಗ್ರತೆ ವಹಿಸಬೇಕು.

ಸಂಪಾದಿಸುವ ಕಾಲಕ್ಕೆ ತುಂಬ ಸಂಪಾದಿಸಬೇಕು. ಆಗ ಮಕ್ಕಳಾಗಲೂ ಬಾರದು. ನಿಜ. ಅವರಿಂದ ಸಂಪಾದನೆಗೆ ತೊಂದರೆಯಾಗುತ್ತದೆ. ಮಕ್ಕಳಾದರೆ ರೂಪ, ಸೌಂದರ್ಯ, ಯೌವನವೂ ಉಳಿಯುವದಿಲ್ಲ. ಆದರೆ ಕೊನೆಯವರೆಗೆ ಮಕ್ಕಳಾಗದಂತೆ ಔಷಧ, ಸಾಧನಗಳನ್ನು ಉಪಯೋಗಿಸುವುದೂ ಸರಿಯಲ್ಲ. ಮುಪ್ಪಿನ ಕಾಲಕ್ಕೆ ಸಾಕಲು ಒಬ್ಬಿಬ್ಬರು ಬೇಕು. ಇಲ್ಲದಿದ್ದರೆ ದಾರಿಯಲ್ಲಿ ಬೀಳುವುದೇ ಸೈ! ಆಗ ನಿನ್ನನ್ನು ಮಕ್ಕಳು ವಿನಾ ಬೇರೆ ಯಾರೂ ಕಣ್ಣೆತ್ತಿ ನೋಡುವುದಿಲ್ಲ ನಿನ್ನಿಂದ ಭೋಗಿಸಲ್ಪಟ್ಟವರೂ ದೂರ ತೆರಳುತ್ತಾರೆ. ನಿನ್ನನ್ನು ಕಂಡು ಉಗುಳುತ್ತಾರೆ. ಮರ್ಯಾದೆ ಮುಚ್ಚಿಕೊಳ್ಳಲು ಒಂದು ತುಂಡು ಅರಿವೆ ದೊರೆಯುವುದೂ ಕಠಿನ. ಅನನ್ಯಗತಿಕರಾಗಬೇಕಾಗುತ್ತದೆ. ಈ ಪ್ರಪಂಚದ ಕಷ್ಟಗಳೆಲ್ಲ ನಿನಗೆ ತಿಳಿದಿಲ್ಲ. ಈ ಹೆಣ್ಣು ಜನ್ಮಕ್ಕೆ ಮತ್ತೆ ಕಷ್ಟಗಳು ಜಾಸ್ತಿ. ಹೆಣ್ಣು ಜನ್ಮವೇ ಕೆಟ್ಟದು. ಅದರಲ್ಲೂ ಹೆಣ್ಣಾಗಿ ಹುಟ್ಟಿದ ನೀನು ಮತ್ತೆ ನನ್ನಂತಹ ಪಾಪಿಯ ಉದರದಲ್ಲೇ ಜನಿಸಿದ್ದೀಯಾ! ಇದೊಂದು ಚಕ್ರವ್ಯೂಹ. ನಾವು ಅದರೊಳಗೆ ಸಿಲುಕಿದ್ದೇವೆ ಹೊರಗೆ ಬರುವ ದಾರಿ ಅರಿತಿಲ್ಲ. ಬರಲೆತ್ನಿಸಿದರೂ ಜನ ಬಿಡುವುದಿಲ್ಲ. ಪುನಃ ಪುನಃ ನೂಕುತ್ತಾರೆ. ನಿನಗೆ ಈ ಎಚ್ಚರವೇ ಇಲ್ಲವಲ್ಲ!".

ಚಂದ್ರಾವತಿ ಹೀಗೆ ಜರೆದ, ಒರೆದ, ಕಣ್ಣೀರ್ಗರೆದು ಹಲುಬಿದ ಹಿತನುಡಿಗಳಿಂದ ವಾಸಂತಿ ಜರ್ಜರಿತಳಾದಳು. ಹಾವನ್ನು ಕಂಡ ಕಪ್ಪೆಯಂತೆ ಅವಳು ನಿಶ್ಚೇಷ್ಟಿತಳಾದಳು. ಯಾವುದೋ ಅವ್ಯಕ್ತ ಭೀತಿಯಿಂದ ಕಾಲುಗಳು ಕಂಪಿಸಿದುವು. ಅವಳು ಮರೆಯಲೆತ್ನಿಸಿದ್ದ ಕುಲದ ಮುದ್ರೆ ಈಗ ಎದ್ದು ಕಾಣಿಸತೊಡಗಿದೆ. ನೀನು ಸೂಳೆಯೇ ಎಂದು ಕೊನೆಗೆ ತಾಯಿಯೂ ನೆನಪುಮಾಡಿ ಕೊಟ್ಟಿರುವಳು. ಮದುವೆ, ಮರ್ಯಾದೆಯ ಜೀವನದ ಮಾತುಗಳೇ ತಾಯಿಯ ಬಾಯಿಂದ ಹೊರಡಲೊಲ್ಲವು. ಯಾವ ಜೀವನ ಅಸತ್ಯವೆಂದು ಅವಳು ತ್ಯಜಿಸಿ ಬಂದಿರುವಳೋ ಅದೇ ಉತ್ತಮವೆಂದು ತಾಯಿ ಆಶೆ ಆಮಿಷಗಳನ್ನು ತೋರುತಿದ್ದಾಳೆ. ಆ ಊರಿನಲ್ಲಿ ಇರಲು ಹೇಸಿ ಅವಳು ಇಲ್ಲಿಗೆ ಬಂದಿದ್ದಳು. ಈಗ ಪುನಃ ಬಂದ ದಾರಿಗೆ ಸುಂಕವಿಲ್ಲವೆಂದು ಹಿಂತಿರುಗಬೇಕು! ಅದರಿಂದ ಮತ್ತೆ ಜನರ ನಿಂದಾಪವಾದಗಳಿಗೆ ಗುರಿಯಾಗಬೇಕು. "ಯಾರ ಹಿಂದೆಯೋ ಓಡಿ ಹೋಗಿದ್ದಳು!

ಈಗ ಬಂದಿದ್ದಾಳೆ ಊರಲ್ಲಿ, ಮೆರೆಯಲಿಕ್ಕೆ!" ಎಂದು ಹಿಂದೊಮ್ಮೆ ಉಡುಪಿಗೆ ತೆರಳಿದಾಗ ಅನೇಕರು ಆಡಿಕೊಂಡಿದ್ದರು. "ನಮ್ಮ ಹುಡುಗನನ್ನು ಗತಿ ಕಾಣಿಸಿದಳೆಂದು ತೋರುತ್ತದೆ! ಇನ್ನು ಯಾರ್‍ಯಾರ ಮನೆ ಉರುಳಿಸಲಿಕ್ಕಿದೆಯೋ?'' ಎಂದು ಆನಂದರಾಯನ ಮನೆಯವರು ದೂಷಿಸಿದುದು ಅವಳ ಕಿವಿಗೆ ಬಿದ್ದಿದೆ. ಥೂ! ಉಡುಪಿಗೆ ಹಿಂತೆರಳಲು ಅವಳಿಗೆ ಇಷ್ಟವಿಲ್ಲ. ಈ ಒಂದೊಂದೇ ಯೋಚನೆಗಳು ಶಾಂತವಾಗಿದ್ದ ಅವಳ ಮಾನಸ ಸರೋವರದಲ್ಲಿ ಮಹತ್ತಾದ ತೆರೆಗಳನ್ನು ಎಬ್ಬಿಸಿವೆ. ದಡವೇ ಕಾಣುವುದಿಲ್ಲ. ಹುಟ್ಟೂ ಕೈಜಾರಿ ಬಿದ್ದಿದೆ. ತೆರೆಗಳು ದೋಣಿಗೆ ಬಡೆಯುತ್ತವೆ. ಅಲೆಗಳೊಂದಿಗೆ ದೋಣಿ ಅತ್ತಿತ್ತ ಹೊರಳುತ್ತದೆ. ಬಿರುಗಾಳಿ ಬೇರೆ. ಅಂಥ ಹತಾಶೆಯ ಭೀಕರ ವಿಚಾರ ಕೋಲಾಹಲದಲ್ಲಿ ವಾಸಂತಿ ಸಿಲುಕಿದ್ದಾಳೆ.

ರಾತ್ರಿ ಚಂದ್ರಾವತಿ ಪುನಃ ಕೆದರಿದಳು: "ಏನು ನಿಶ್ಚಯ ಮಾಡಿದೆ?"

"ಅಂದರೆ?"

"ನನ್ನೊಟ್ಟಿಗೆ ಬಾ. ಕರೆದುಕೊಂಡು ಹೋಗುತ್ತೇನೆ."

ವಾಸಂತಿ ಅಚ್ಚರಿಪಟ್ಟಳು: "ಮನೆಗೆ ಬೀಗಹಾಕಿ ಬರಲೇ?" ಎಂದು ಕೇಳಿದಳು.

"ಹಾಕು! ಯಾರ ಮನೆಯ ಮೇಲೆ ಯಾರಿಗೆ ಕನಿಕರ?''

"ಸಾಮಾನು?''

"ಏನಿದೆ ನಿನ್ನ ಮನೆಯಲ್ಲಿ ಮಹಾ? ಬಸ್ಸಿನ ಮೇಲೆ ಹಾಕಿದರಾಯಿತು. ನೀನು ಅಷ್ಟು, ನಾನು ಅಷ್ಟು ಒಯ್ದರಾಯಿತು!''

"ಅವರಿಗೆ ಹೇಳುವುದು ಬೇಡವೇನು? ಕೇಳಿದರೆ ಏನಂದಾರು?"

"ಆ ಮೂರುಕಾಸಿನವನು ನಿನಗೇನಾಗಬೇಕು? ಸಂಬಂಧವೆಲ್ಲ ಮುರಿದು ಹೋಯಿತೆಂದು ತಿಳಿ. ಅದು ಇದ್ದಿದ್ದರೆ ನಿನ್ನನ್ನು ತೊರೆದು ಬೇರೆ ಲಗ್ನವಾಗುತ್ತಾನೇನು? ಬೇವರ್ಸಿ, ನನ್ನ ಮಗಳನ್ನು ತಂದು ಹಾಳು ಮಾಡಿದ!"

"ಅವರಿನ್ನೂ ತೊರೆದಿಲ್ಲವಲ್ಲ!"

"ಅಂದರೆ ನಿನ್ನ ಮಾತಿಗೇನರ್ಥ? ನಿನಗಷ್ಟು ಗೊತ್ತಾಗುವದಿಲ್ಲ

ವೇನು! ಪೆದ್ದೀ! ನಿನ್ನ ಕುತ್ತಿಗೆಗೆ ಕೈಹಾಕಿ ನೂಕಬೇಕೇನು? ಟ್ರಂಕು ಹಾಸಿಗೆ ಹೊರಗಿಟ್ಟಾಗಲೇ ನಿನಗೆ ಬುದ್ಧಿ ಬರುತ್ತದೆಂತ ತೋರುತ್ತದೆ! ನಾಲ್ಕು ಜನರ ಮುಂದೆ ಮಾನ ಕಳೆದುಕೋ! ಅದೊಂದು ಬಾಕಿ! ಅದೂ ಆಗಲಿ. ನಿನಗೆ ಇಷ್ಟು ವರುಷವಾದುದು ದಂಡ! ಏನೇನು ಸಾರಾಸಾರ ವಿಚಾರವಿಲ್ಲ. ಪುರುಷರನ್ನು ಕಂಡೊಡನೆ ಅವರ ಗುಣಶೀಲಗಳನ್ನು ಅರಿಯಬೇಕು. ಅವರ ನಡೆನುಡಿ ಹಾವಭಾವಗಳಿಂದ ಮನದಾಸೆ, ಅಭೀಷ್ಟಗಳನ್ನು ತಿಳಿವ ಜ್ಞಾನವಿರಬೇಕು. ನಿನ್ನೆ ಮೊನ್ನೆ ಹುಟ್ಟಿದ ಹೆಣ್ಣಿಗೆ ಇದು ಗೊತ್ತಿದೆ. ನಿನಗರ್ಥವಾಗುವದಿಲ್ಲವೆಂದರೆ ಚೋದ್ಯ! ತಲೆಗೆ ಸರಿ ಮಂಕು ಬೂದಿ ತಿಕ್ಕಿದ್ದಾನೆಂತ ತೋರುತ್ತದೆ. ನಿಜವಾಗಿ ನೋಡಿದರೆ ನೀನು ಅದನ್ನು ಸಾಧಿಸಬೇಕಾಗಿತ್ತು. ನೀನೇ ಅವನಿಗೆ ಬಲಿ ಬಿದ್ದಿರುತ್ತೀ. ಅವನನ್ನು ಬಿಟ್ಟರೆ, ಬೇರೆ ರೂಪ ಗುಣ ಹಣಗಳಿರುವ ಗಂಡಸರೇ ನಮ್ಮ ಉಡುಪಿಯಲ್ಲಿಲ್ಲವೆಂತ ಮಾಡಿದೆಯೇನು?''

"ಇಷ್ಟು ವರುಷ ಇದ್ದು ಇದ್ದು........"

ವಾಸಂತಿ ಆ ವಾಕ್ಯ ಮುಗಿಸಿರಲಿಲ್ಲ. ತಾಯಿ ರೊಚ್ಚಿನಿಂದ ಕಚ್ಚಿ ಕಾರಿದಳು: "ಇಷ್ಟು ವರುಷ! ಇಷ್ಟು ವರುಷ ತೊಲೆಭಾರದಿಂದ ತೂಗಿದ್ದಾನೆ ನಿನ್ನನ್ನು! ನಿನ್ನ ಮಾತು ಕೇಳುವಾಗ ನನಗೆ ಕಾಲಿನಿಂದ ತಲೆಗೇರುತ್ತದೆ. ಕೊಂದುಬಿಡಬೇಕೆಂದನ್ನಿಸುತ್ತದೆ ನಿನ್ನನ್ನು!"

"ಹಾಗೆ ಮಾಡುತಿದ್ದರೆ ಸುಖವಿರುತಿತ್ತು. ಹುಟ್ಟಿದಾಗಲೇ ನೀನು ಕುತ್ತಿಗೆ ಹಿಚುಕುತಿದ್ದರೆ ಈ ಕಷ್ಟಗಳನ್ನೆಲ್ಲ ಅನುಭವಿಸಲಿಕ್ಕಿದ್ದಿಲ್ಲ. ಇನ್ನಾದರೂ ಹಾಗೆ ಮಾಡು. ಒಂದಿಷ್ಟು ವಿಷವನ್ನಾದರೂ ಕೊಟ್ಟುಬಿಡು'' ಎಂದು ವಾಸಂತಿ ಅಳತೊಡಗಿದಳು.

ಆ ಆರ್ತನಾದ ಆಲಿಸಿ ಚಂದ್ರಾವತಿ ತೆಪ್ಪಗಾದಳು. ಮಗಳನ್ನು ನಿಂದಿಸುವುದನ್ನು ಬಿಟ್ಟು ತನ್ನನ್ನೇ ಹಳಿದುಕೊಳ್ಳಲಾರಂಭಿಸಿದಳು. "ಎಲ್ಲ ನನ್ನದೇ ಕರ್ಮ! ನನ್ನದೇ ತಪ್ಪು. ನಿನ್ನನ್ನು ದೂರಿ ಏನು ಫಲ? ಮೊದಲೇ ನಾನು ಹೀಗಾಗಬಹುದೆಂದು ವಿಚಾರ ಮಾಡಲಿಲ್ಲ. ನಾನು ಹುಟ್ಟಿದಾಗ ಬೆಳಗಾಗಿತ್ತೆ. ಯಾರು ಯಾರು ಪುಣ್ಯಾತ್ಮರು ಸಾಯುತ್ತಾರೆ; ನನಗೆ ಸಾವೇ ಬರುವುದಿಲ್ಲ. ಬ್ರಹ್ಮ ಇನ್ನೂ ಆಯುಷ್ಯ ಗಟ್ಟಿಯಾಗಿ ಬರೆದಿದ್ದಾನೆ.

ಸಾವ ಮೊದಲು ಈ ಕಣ್ಣಿನಿಂದ ಏನೇನು ಕಾಣಬೇಕೆಂದು ಬರೆದಿದ್ದಾನೋ! ಅವನ ಕಣ್ಣಿಗೆ ಮಣ್ಣು ಹಾಕ!" ಎಂದು ಅವಳೂ ಅಳಲಾರಂಭಿಸಿದಳು. ಹಾಗೆ ಅವರಿಬ್ಬರೂ ಕೊನೆಗೆ ನಿದ್ದೆ ಹೋದರು.

ಬೆಳಿಗ್ಗೆ ಚಂದ್ರಾವತಿ ಹೊರಡುವ ಸಿದ್ಧತೆ ನಡೆಸಿದಳು. "ಇನ್ನೂ ಎರಡು ದಿನ ಇದ್ದು ಹೋಗು'' ಎಂದು ಎಷ್ಟು ಪರಿಯಾಗಿ ವಾಸಂತಿ ಬೇಡಿಕೊಂಡರೂ ಅವಳು ಕೇಳಲಿಲ್ಲ. "ನನ್ನ ಮಾತನ್ನು ನೀನು ಕೇಳುವುದಿಲ್ಲವೆಂದ ಬಳಿಕ ನಿನ್ನ ಮನೆಯಲ್ಲಿ ನಾನು ಯಾಕಿರಲಿ? ನೀನು ಬೇಕಾದ್ದು ಮಾಡಿಕೋ. ನಿನಗೆ ಇನ್ನುಮುಂದೆ ನಾನು ಏನೇನೂ ಹೇಳಲಾರೆ. ನಿನ್ನ ಸ್ವಬುದ್ಧಿಗೇ ತೋಚಲಿ'' ಎಂದು ಹಂಗಿಸಿದಳು. ಜಟ್ಕಾ ಕೂಡ ಬೇಡವೆಂದು ಹಟಮಾಡಿದಳು. ಆದರೂ ವಾಸಂತಿ ಬಿಡಲಿಲ್ಲ. ತಾಯಿಯೊಂದಿಗೆ ನಿಲ್ದಾಣದ ವರೆಗೆ ತೆರಳಿ ಬಿಟ್ಟುಬರಲು ಅವಳು ಬಯಸಿದಳು. ಆದರೆ ಚಂದ್ರಾವತಿ ಬೇಡವೆಂದಳು. "ಉಡುಪಿಯಿಂದ ಒಬ್ಬಳೇ ಇಲ್ಲಿಗೆ ಬಂದಿರುವೆನಂತೆ! ವಾಪಾಸು ಹೋಗಲು ಗೊತ್ತಾಗುವುದಿಲ್ವಾ ನನಗೆ? ಹನುಮಂತನ ಹಿಂದೆ ಒಂದು ಬಾಲದಂತೆ ಮತ್ತೆ ನೀನು ಯಾಕೆ ಬರಬೇಕು? ಸುಮ್ಮನೆ ತೊಂದರೆ!'' ಎಂದು ತಾನೊಬ್ಬಳೇ ಹೋದಳು. ಚಂದ್ರಾವತಿಯ ಆ ಗಂಟು ಮೋರೆ ನೋಡಿ, ಅವಳು ತನ್ನ ಕರುಳನ್ನು ಕಡಿದುಕೊಂಡೇ ಹೋದಳೆಂದು ವಾಸಂತಿ ಅರಿತುಕೊಂಡಳು. ವರುಷಕ್ಕೊಂದು ಸಲವಾದರೂ ಉಡುಪಿಗೆ ತೆರಳಿ ಬಾಯಿ ಬೇಡಿದ್ದುಂಡು ಬರುವ ಆಶೆ ಇತ್ತು ಅವಳಿಗೆ. ಆ ಮನೆಯ ಬಾಗಿಲು ಇನ್ನು ತೆರೆಯಲಾರದೆಂದು ಅವಳಿಗನ್ನಿಸಿತು. ಕೊರಳಲ್ಲಿ ಸಿಕ್ಕ ಕೂದಲೆಳೆಯಂತೆ ಅವಳು ಅಳು ಬಂದರೂ ಅಳಲಾರದೆ ಸಂಕಟಪಟ್ಟಳು.

ಚಂದ್ರಾವತಿ ಮಗಳನ್ನು ಕರೆದುಕೊಂಡು ಹೋಗಲಿಲ್ಲ ನಿಜ. ಆದರೆ ಮಗಳು ನಿಂತಿದ್ದ ನೆಲದಡಿ ಮಣ್ಣನ್ನೇ ಕೊರೆದಳು. ಆನಂದರಾಯನ ಮೇಲಿನ ನಂಬಿಗೆ ಬಹುಮಟ್ಟಿಗೆ ಕರಗಿತು. ಅವಳೆದೆಯಲ್ಲಿ ಹುದುಗಿದ್ದ ಕೋಪತಾಪಗಳು ಕೆರಳಿದುವು. ಮುಂದೇನು ಎಂಬ ಅನಿಶ್ಚಿತತೆಯನ್ನುಂಟು ಮಾಡಿತು.

# ೧೪ ನೇಯ ಅಧ್ಯಾಯ

ಆನಂದರಾಯನಿಗೆ ಬೆಳ್ತಂಗಡಿ ಬಾಳುವೆ ಬೇಸರವಾಗಿದೆ. ಮಳೆಗಾಲದಲ್ಲಿ ತಲೆ ಹೊರಗೆ ಹಾಕುವಂತಿಲ್ಲ. ಸದಾಗಾಲ ಆಸ್ಪತ್ರೆಯಲ್ಲೇ ಇರಬೇಕು. ಆಸ್ಪತ್ರೆ ಒಂದು ಗವಿಯ ಹಾಗಾಗಿದೆ. ಕಾಫಿ, ಊಟಗಳಿಗೆ ಹೋಟೇಲಿಗೆ ಹೋಗಿ ತಿಂದುಂಡು ಬರುತ್ತಾನೆ. ನಿಜ. ೪ ಮೇಲೆ ಎಲ್ಲಿಯೂ ಹೋಗಲಾರ. ಹಗಲಿರುಳು ಈ ಗೋಡೆಯ ಗೂಡಿನೊಳಗೇ ಇರುತ್ತಾನೆ. ಹಾಗಿದ್ದರೂ ಕೆಲಸವಿಲ್ಲ. ಜಡಿಮಳೆಗೆ ನೆರೆಹೊರೆಯ ಹಳ್ಳಿಗಳಿಂದ ರೋಗಿಗಳು ಬರುವುದು ವಿರಳ. ಅಲ್ಲಲ್ಲಿ ನದಿಗಳಿರುವುದರಿಂದ ಅವರು ಬರಲಾರರು. ವಿಸಿಟಿಗೆ ತೆರಳುವುದೂ ಕಠಿನ. ನಿಜವಾಗಿ ನೋಡಿದರೆ ಹಳ್ಳಿಯವರು ಔಷಧಕ್ಕಾಗಿ ಕರೆಯಲು ಬಂದರೆ ಹಣ ಹೆಚ್ಚಾಗಿ ದೊರೆಯುತ್ತದೆ. ಮತ್ತೆ ಊರಲ್ಲಿ ಎಷ್ಟು ದೊರೆತೀತು? ಶೀತ, ನೆಗಡಿ, ಜ್ವರವೆಂದು ಊರವರು ತಾವೇ ಬಂದು ಔಷಧ ಒಯ್ಯುತ್ತಾರೆ. ಅಂಥ 'ಸೀರಿಯಸ್' ಕಾಯಿಲೆಯೆಂದು ಖಚಿತವಾದಾಗ ಮಾತ್ರ ಕರೆಯಲು ಬರುವರು. ಹೋದರೂ ಹಳ್ಳಿಗೆ ಹೋದಷ್ಟು ಇಲ್ಲಿ ಫೀ ಸಿಗುವುದಿಲ್ಲ. ನಗದಿ ಹಣ ಕೊಡುವವರು ಕಡಿಮೆಯೇ. ತಿಂಗಳು, ವರುಷಗಳ ವರೆಗೆ ಬಾಕಿ ಮಾಡುವವರೂ ಉಂಟು. ಒಮ್ಮೆ ಕೇಳಿದರೆ ಅವರಿಗೆ ಕೇಳಿಸುವುದೇ ಇಲ್ಲ. ಎರಡು ಸಲ ಕೇಳಿದಾಗ "ಕೊಡುತ್ತೇವೆ. ಸಂಬಳ ಬರಲಿ" ಎಂದು ನುಡಿಯುತ್ತಾರೆ. ಸಂಸಾರ ತಾಪತ್ರಯಗಳ ನೆವವೊಡ್ಡಿ ದಿನ ದೂಡುತ್ತಾರೆ. ಮೂರನೇ ಸಲ ಕೇಳಿತೋ ನಿಮ್ಮರ! "ತಿಂದು ಹೋಗುತ್ತೇವೆಂತ ಮಾಡಿದಿರೇನು? ನಿಮ್ಮ ಗಂಟು ಮುಳುಗಿಸುವುದಿಲ್ಲ, ಸ್ವಾಮಿ" ಎಂದು ನಂಜಿನ ನುಡಿಗಳನ್ನಾಡುವರು. ಮತ್ತೆ ಆ ದಾರಿಯಿಂದ ಹಾಯ್ದರೆ ದೇವರಾಣೆ!

ಈಗ ಜನರು ಅವನ ಆಸ್ಪತ್ರೆಗೆ ಬರುವುದೂ ಕಡಿಮೆಯಾಗಿದೆ. ಅವನ ಮೇಲಿನ ಲೋಕಾಪವಾದವೂ ಅದಕ್ಕೆ ಇನ್ನೊಂದು ಸಬಲ ಕಾರಣ. ಸಣ್ಣ ಸಣ್ಣ ಊರುಗಳಲ್ಲಿ ಅದು ತುಂಬ ಪರಿಣಾಮಕಾರಕವಾಗಿದೆ. ಕೀರ್ತಿಗಿಂತ ಅಪಖ್ಯಾತಿ ಕಾಡ್ಗಿಚ್ಚಿನಂತೆ ಬೇಗನೆ ಹಬ್ಬುತ್ತದೆ. ಕಾಡ್ಗಿಚ್ಚು ಎಂದು ಹೇಳಲು ಕಾರಣವಿಷ್ಟೆ! ಬೇಸಿಗೆಯ ಬೇಗೆಯಂತೆ ಆ ಉರಿಜ್ವಾಲೆ ಇದಿರಿಗೆ

ಕಾಣುವುದಿಲ್ಲ- ಒಳಗಿಂದೊಳಗೆ ಅದು ಹಬ್ಬುತ್ತದೆ. ಇಲ್ಲಿಂದ ಇಲ್ಲಿಗೆ ಅದು ನೆಗೆಯುತ್ತದೆ. ಹೊತ್ತಿ ಹೊಗೆಯಲು ಅಲ್ಲಲ್ಲಿ ಅದಕ್ಕೆ ತರಗೆಲೆಯ ರಾಶಿಯೇ ಸಿಗುತ್ತದೆ. ಹಳ್ಳಿ ಸಣ್ಣ ಪೇಟೆ ಪಟ್ಟಣಗಳಲ್ಲಿ ಕೂಡ ಸುಡಲು ಅದಕ್ಕೆ ಅನೇಕ ಪಕ್ಷಗಳಿವೆ. ಜಾತಿ, ಉದ್ಯೋಗಗಳನ್ನು ಅವು ಅವಲಂಬಿಸಿರುವುದುಂಟು. ದ್ವೇಷ, ಅಸೂಯೆ, ಸ್ವಾರ್ಥ, ಪರರ ಮೇಲಿನ ಅಸಹಿಷ್ಣುತೆಗಳು ಅವುಗಳ ಆಧಾರಗಳಾಗಿರುವುಂಟು. ಒಂದೊಂದು ಪ್ರಬಲ ವ್ಯಕ್ತಿಯ ಹಿಂದೆ ಬಾಲ ಅಲ್ಲಾಡಿಸುವವರಿದ್ದಾರೆ. ಕಚೇರಿಯಲ್ಲಿ, ಕ್ಲಬ್ಬಿನಲ್ಲಿ, ಹೋಟೇಲಿನಲ್ಲಿ, ಶಾಲೆಯಲ್ಲಿ, ಬೀಡಿ ಅಂಗಡಿಗಳಲ್ಲಿ, ಪಂಚ್ಯಾತ್ ಬೋರ್ಡು ಆಫೀಸಿನಲ್ಲಿ ಕೂತಾಗ ನಿಂತಾಗ ನಿಂದಾಪಮಾನಗಳ ಸುರಿಮಳೆ ಆಗುತ್ತದೆ. ಕೆಲಸವಿಲ್ಲದೆ ಅಲೆದಾಡುವವರು ಅಲ್ಲಲ್ಲಿ ಕುಳಿತು ತಮ್ಮ "ಕಟ್ಟೆ ಪುರಾಣ" ಬಿಚ್ಚುತ್ತಾರೆ. ಚಿತ್ರಗುಪ್ತರಿಗೆ ತಿಳಿಯದ ರಹಸ್ಯವನ್ನೂ ಅವರು ಬಲ್ಲರು. ಪ್ರಾಯಶಃ ಚಿತ್ರಗುಪ್ತರು ಇವರಂತೆ ಅತಿರಂಜಿತ ವರ್ಣನೆಗಳಲ್ಲಿ ಆಸಕ್ತರಾಗಲಿಕ್ಕಿಲ್ಲ! ಹೀಗಾಗಿ ಊರಿನ ಅನೇಕ ಜನರಿಗೆ ಆನಂದರಾಯನ ಮೇಲಿನ ಪ್ರೀತಿ ಬತ್ತಿದೆ; ವಿಶ್ವಾಸ ಹಾರಿ ಹೋಗಿದೆ. ಅವನಲ್ಲಿ ಔಷಧೋಪಚಾರಕ್ಕಾಗಿ ಬರುತ್ತಿದ್ದವರು ಬೇರೆ ಆಸ್ಪತ್ರೆಗಳಿಗೆ ತೆರಳಲಾರಂಭಿಸಿದ್ದಾರೆ.

ಆನಂದರಾಯನ ಅಸ್ಥಿರ ಮನಸ್ಸು ಅತ್ತಿತ್ತ ಅಲೆಯಿತು. ಬೇರೆ ಯಾವ ಊರಿಗಾದರೂ ಹೋಗಿ ಬಿಡೋಣವೆಂದನ್ನಿಸಿತು. ಮನಸ್ಸು ಅಂಥ ದುರ್ಬಲ ಸ್ಥಿತಿಯಲ್ಲಿದ್ದಾಗ ಅವನು ಹಿಂದೊಮ್ಮೆ ಕರಾವಳಿ ಮಾರ್ಗವಾಗಿ ಮಂಗಳೂರಿನಿಂದ ಉಡುಪಿಗೆ ಪ್ರಯಾಣ ಮಾಡಿದ್ದಾಗ ಕಂಡ ಊರುಗಳು ಕಣ್ಣ ಮುಂದೆ ಕಟ್ಟಿದುವು. ಉಡುಪಿ-ಕಾರ್ಕಳ ಲೈನಿನಲ್ಲಿ ಕೂಡ ಹಣಕಿ ಹಣಕಿ ಅವನು ಅನೇಕ ಸಣ್ಣ ಪೇಟೆಗಳನ್ನು ನೋಡಿದ್ದ. ಬೇರೆ ಡಾಕ್ಟರರಿಲ್ಲದ ಯಾವ ಪಟ್ಟಣವಾದರೂ ಇದ್ದರೆ ತೆರಳುವುದು ಲೇಸೆಂದು ಅವನ ಮನ ನುಡಿಯುತಿತ್ತು. ಹೋದ ಕೂಡಲೆ ಅವನಿಗೆ ವಿಶೇಷ ಸಂಪಾದನೆ ಆಗಲಿಕ್ಕಿಲ್ಲ. ನಿಜ. ಕಾಲಾನುಭಾಗವಲ್ಲಿ ಜನರ ಗುರುತು ಪರಿಚಯವಾಗುತ್ತದೆ. ಅಷ್ಟರವರೆಗೆ ದಿನನಿತ್ಯದ ಕಾಲಕ್ಷೇಪ ಹೋದರೆ ಸಾಕು. ಒಂದು ವೇಳೆ ಆಗದಿದ್ದರೂ ಚಿಂತೆಯಿಲ್ಲ. ಅವನಿಗಷ್ಟು ಕೈಕಟ್ಟುವ ಸ್ಥಿತಿಯಿಲ್ಲ. ಏನೂ ಇಲ್ಲದಾಗಲೇ ಅವನು ಉಡುಪಿಯಿಂದ ಬೆಳ್ತಂಗಡಿಗೆ ಬಂದು ಆಸ್ಪತ್ರೆ

ತೆರೆದಿದ್ದನಂತೆ! ಈಗ ಹಾಗೇನೂ ಇಲ್ಲವಲ್ಲ! ಕುರ್ಚಿ, ಮೇಜು, ಕಪಾಟು ಗಳನ್ನು ಸ್ಥಳಾಂತರಿಸುವುದೂ ದೊಡ್ಡ ಪ್ರಶ್ನೆಯಲ್ಲ. ಒಂದು ಲಾರಿ ಮೇಲೆ ಹಾಕಿದರೆ ಹೋಗುತ್ತದೆ ಸಲೀಸಾಗಿ. ಈ ಊರು ಹಾಳಾಗಿ ಹೋಗಲಿ!

ಆನಂದರಾಯ ಈ ಸಾವಿರ ವಿಚಾರಗಳನ್ನು ಮಾಡುತ್ತ ತಲೆ ಕೆರೆದು ಕೊಳ್ಳುತಿದ್ದಾಗಲೇ ಒಂದು ದಿನ ಗೋಪಾಲರಾಯರು ರಾಮುಗೌಡನೊಡನೆ ಆಗಮಿಸಿದರು. ಅವರನ್ನು ಕಂಡೊಡನೆಯೇ ಅವನು ತಬ್ಬಿಬ್ಬಾದ. ಮೇಜುಗಳ ಮೇಲೆ ಕಾಲುಗಳನ್ನೆಸೆದು ಕುಳಿತಿದ್ದ ಅವನು ಸರಕ್ಕನೆ ಎಳೆದು ಕೊಂಡು ಎದ್ದ. ಅವರ ಮೋರೆ ನೋಡುವ ಧೈರ್ಯ ಸಾಲದೆ "ಬನ್ನಿ! ಬನ್ನಿ! ಕುಳಿತುಕೊಳ್ಳಿ!'' ಎಂದು ಕರಜೋಡಿಸಿದ.

ಆನಂದರಾಯನ ಕೂದಲು ಕೆದರಿದ್ದುವು. ಹಣೆ, ಕಣ್ಣು, ಮೂಗಿನ ಮೇಲೆ ಅವು ಹಾರಾಡುತಿದ್ದುವು. ಮೋರೆ ನಿಸ್ತೇಜ. ಹಿಂದಿನ ಉತ್ಸಾಹ ವಿರಲಿಲ್ಲ. ಅದನ್ನು ಕಂಡುಕೊಂಡ ಮಾವ "ಬಹಳ ಇಳಿದಿದ್ದೀರಿ ದೇಹ ದಲ್ಲಿ. ಏನು ಮೈ ಚೆನ್ನಾಗಿಲ್ಲವೇ?" ಎಂದು ಕೇಳಿದರು.

"ಏನಿಲ್ಲ, ವಿಶೇಷವೇನಿಲ್ಲ! ಮಳೆಯ ದೆಸೆಯಿಂದ ಸ್ವಲ್ಪ ತಲೆನೋವು, ಅಷ್ಟೆ. ನಿಮ್ಮಲ್ಲೆಲ್ಲ ಮಳೆಜೆಳೆ ಹೇಗಿದೆ?" ಎಂದವನು ಕೇಳುತ್ತ ರಾಮು ಗೌಡನ ಕಡೆ ಸರಿದು ಹೋಟೇಲಿಗೆ ಅವನನ್ನು ಕಳಿಸಿದ.

"ನಮ್ಮಲ್ಲಿ ಕೂಡಾ ಭಾರಿ ಮಳೆ. ಹೊಳೆಯಲ್ಲಿ ಇನ್ನೂ ನೀರಿದೆ".

"ಮತ್ತೆ ಹೇಗೆ ಬಂದಿರಿ?"

"ನಾನೂ ಗೌಡ ಕೂಡಿ ಹೇಗೋ ದಾಟಿ ಮುಂಡಾಜೆಗೆ ಬಂದೆವು. ಅಲ್ಲಿ ಬಸ್ ಹತ್ತಿದೆವು".

"ನಾನೂ ಒಮ್ಮೆ ಬರಬೇಕೆಂದಿದ್ದೆ. ಆದರೆ ಎಲ್ಲಿ ದಾಟುವುದೆಂದು ನನಗೆ ಗೊತ್ತಿಲ್ಲ. ನನಗೆ ಅಭ್ಯಾಸವೂ ಇಲ್ಲ. ಪೇಟೆಯಲ್ಲಿ ಹುಟ್ಟಿಬೆಳೆದ ವನು".

"ಅದು ನಿಜ. ನಾವು ಅದಕ್ಕೇ ಕರೆಸಿಕೊಳ್ಳಲಿಲ್ಲ. ಈ ಮೊದಲೇ ಪ್ರಸ್ತಕ್ಕೆ ಒಂದು ದಿನವಿತ್ತು. ಆದರೆ ನಿಮಗೆ ಬರಲು ತೊಂದರೆಯಾದೀ ತೆಂದೇ ಬಿಟ್ಟುಗೊಟ್ಟೆವು. ಈಗ ಅಷ್ಟು ತೊಂದರೆಯಿಲ್ಲ. ನಾಳದು ಭಾನು ವಾರ ದಿನ ಗೊತ್ತುಮಾಡಿದ್ದೇವೆ. ಈ ನಾವೂರು, ಬಂಗಾಡಿ ಪೇಟೆ

ಮಾರ್ಗವಾಗಿ ಬರಬೇಡಿ ಮತ್ತೆ. ಸೈಕಲ್, ಗಾಡಿ ಒಂದೂ ಪ್ರಯೋಜನ ವಿಲ್ಲ. ಗಾಲಿಗಳು ಕೆಸರಲ್ಲಿ ಹೂತುಹೋಗುವುದೇ ಸೈ. ಮುಂಡಾಜೆ ಮಾರ್ಗವಾಗಿ ಬನ್ನಿ.''

"ಆದರೂ ನೇತ್ರಾವತಿ ದಾಟಬೇಕಲ್ಲ!"

"ಹೌದು! ನಾವು ದಾಟಿಸುತ್ತೇವೆ'' ಎಂದರವರು.

ರಾಮುಗೌಡ ಫಲಾಹಾರ ತಂದ. ಎಲ್ಲರೂ ತಿಂದು ಕಾಫಿ ಕುಡಿದ ಬಳಿಕ ಅವನು ಅದನ್ನು ತೆಗೆದುಕೊಂಡು ಹೋದ. ಗೋಪಾಲರಾಯರು ಅತ್ತಿತ್ತ ಕತ್ತುಚಾಚಿ "ಏನು, ಕಂಪೌಂಡರನ ಶಬ್ದವೇ ಕೇಳಿಸುವುದಿಲ್ಲ?" ಎಂದು ಕೇಳಿದರು. ಆ ಪ್ರಶ್ನೆಯಿಂದ ಆನಂದರಾಯನಿಗೆ ತಿವಿದ ಹಾಗಾಯಿತು. ಇನ್ನೇನು ಕೇಳುತ್ತಾರೋ ಎಂದು ಸ್ವಲ್ಪ ಅಳುಕಿದ. ಆದರೆ ತನ್ನ ಭೀತಿಯನ್ನು ತೋರ್ಪಡಿಸದೆ "ಈಗಿನ ಹುಡುಗರು ಯಾರ ಮಾತು ಕೇಳುತ್ತಾರೆ? ಯಾರೋ ಸ್ವಲ್ಪ ಹೆಚ್ಚು ಸಂಬಳ ಕೊಡುತ್ತೇನೆಂದು ಕಿವಿ ಊದಿದರು. ಹೇಳದೆ ಕೇಳದೆ ಓಡಿದ" ಎಂದ.

"ಹಂ! ಹಂ!" ಎಂದು ಗೋಪಾಲರಾಯರು ನುಡಿದು "ಹೋಗಲಿ ಬಿಡಿ. ಸುಸೂತ್ರವಾಯಿತು. ಅವನಿದ್ದರೂ ಒಂದು ರಗಳೆಯೇ. ಅದೊಂದು ಖರ್ಚು ಯಾಕೆ ನಿಮಗೆ?'' ಎಂದಷ್ಟೇ ನುಡಿದರು. ಆ ಮೇಲೆ "ಈ ಮನೆ ದೊಡ್ಡದಿದೆ. ಅಡಿಗೆಗೆ ಒಲೆಯೂ ಇದ್ದಂತೆ ತೋರುತ್ತದೆ. ಕಳೆದ ಸಲ ನೋಡಿದ ನೆನಪು. ನಿಮ್ಮಿಬ್ಬರಿಗೆ ಸಾಕೇ ಸಾಕು. ನೀವು ಬೇರೆ ಮನೆ ಮಾಡುವ ಅವಶ್ಯಕತೆಯೇ ಇಲ್ಲ'' ಎಂದು ಹೇಳಿದರು.

ಆನಂದರಾಯ ಮೆಲ್ಲಗೆ ತತ್ತರಿಸಿದ: "ಛೇ! ಆಸ್ಪತ್ರೆಯೊತ್ತಿಗೆ ಮನೆ ಇರಬಾರದು. ನಾಲ್ಕು ಜನ ಬರುವವರು ಹೋಗುವವರು! ಯಾವಾಗಲೂ ರಗಳೆ".

"ಮತ್ತೆ, ಬೇರೆ ಮನೆ ನೋಡಿದ್ದೀರೇನು?"

"ಈಗ ಮನೆ ಸಿಗುವುದೇ ದುರ್ಲಭ!"

"ಅದಕ್ಕೆಂದೇ ನಾನು ಹೇಳಿದುದು-ಇದೇ ಮನೆ ಆದೀತೆಂತ. ನಾಳದು ಹುಡುಗಿಯನ್ನ ಕರಕೊಂಡು ಬಂದಾಗ ಹೊಗಿಸಲು ಒಂದು ಮನೆ ಬೇಕಲ್ಲ. ಅಷ್ಟರೊಳಗೆ ಬೇರೆ ಮನೆ ಎಲ್ಲಿ ಸಿಗಬೇಕು? ಇದೇ ಸಾಕು. ಈಗ, ತತ್ಕಾ

ಲಕ್ಕೆ ಇಲ್ಲೇ ಇರಿ. ಬೇರೆ ಮನೆ ಹುಡುಕಿರಿ. ಅದು ದೊರೆತ ಮೇಲೆ ಬಿಡಾರ ಬದಲಾಯಿಸಿದ. ಅದಕ್ಕೆ ಆನೆ ಕುದುರೆ ಆಗಬೇಕೇನು ?"

ಆನಂದರಾಯನ ಕಾಲುಗಳು ತಣ್ಣಗಾದುವು. ನಾಳದು ತನ್ನೊಂದಿಗೆ ಹುಡುಗಿಯನ್ನು ಕಳಿಸುತ್ತಾರೆಂದು ಅವನು ಇಷ್ಟರ ವರೆಗೆ ಯೋಚಿಸಿಯೇ ಇರಲಿಲ್ಲ. ಅದನ್ನರಿತು ಸ್ವಲ್ಪ ಗೊಂದಲಕ್ಕೀಡಾದ. ಏನು ಉತ್ತರ ಕೊಡ ಬೇಕೆಂದು ಅವನಿಗೆ ಹೊಳೆಯಲಿಲ್ಲ. ಒಂದು ಕ್ಷಣ ಅವನು ಆಲೋಚಿಸಿ ಹೇಳಿದ. "ಸ್ವಲ್ಪ ಸಮಯದ ವರೆಗೆ ಅವಳು ನಿಮ್ಮಲ್ಲೇ ಇರಲಿ. ನಾನು ಎಲ್ಲ ವ್ಯವಸ್ಥೆ ಮಾಡಿದ ಮೇಲೆ ಕರೆದುಕೊಂಡು ಬರುತ್ತೇನೆ. ಸಂಸಾರವೆಂದರೆ ಹೀಗೆಯೇ ಸಾಗುವುದಿಲ್ಲ. ಲೋಟಗಳಿಂದ ಹಿಡಿದು ಪಾತ್ರೆ ಪರಡಿಯ ವರೆಗೆ ಎಲ್ಲ ಹೊಸದಾಗಿ ತೆಗೆದುಕೊಳ್ಳಬೇಕು.''

"ಹೋ, ಆಗಲಿ, ಆಗಲಿ !" ಎಂದವರು ಒಪ್ಪಿಕೊಂಡರು.

ಪೇಟೆಯಲ್ಲಿ ಕೆಲವು ಸಾಮಾನುಗಳನ್ನು ಅವರು ಕೊಂಡುಕೊಂಡರು. ರಾಮುಗೌಡ ಆ ಗಂಟನ್ನು ತಲೆಯ ಮೇಲೆ ಹೊತ್ತು ಬಸ್ ನಿಲ್ದಾಣಕ್ಕೆ ಬಂದ. ಅವರನ್ನು ಬೀಳ್ಕೊಳ್ಳಲು ಆನಂದರಾಯನೂ ಅನುಸರಿಸಿದ. ಬೇಡ ಬೇಡವೆಂದರೂ ಅವನೇ ಟೀಕೇಟು ತೆಗೆಸಿದ. "ಅರರೆ! ಎರಡು ಟಿಕೇಟು ತೆಗೆಸಿದಿರೇನು ? ಒಂದೇ ಸಾಕು. ಹೋಗುವವನು ನಾನೊಬ್ಬನೇ. ರಾಮು ಗೌಡ ಇಲ್ಲೇ ಇರುತ್ತಾನೆ. ನಾಳದು ನಿಮ್ಮನ್ನು ಕರೆದುಕೊಂಡು ಬರು ತ್ತಾನೆ" ಎಂದವರು ಹೇಳಿ "ಇದನ್ನು ವಾಪಸು ಕೊಟ್ಟು ಬಿಡಿ'' ಎಂದು ಒಂದನ್ನು ಅವನ ಕೈಗಿತ್ತರು. ಆನಂದರಾಯ ಆಶ್ಚರ್ಯದಿಂದ ಬಾಯಿಬಿಟ್ಟ. ಬಸ್ ಹೊರಟು ಹೋಯಿತು. ಸ್ವಲ್ಪ ದೂರ ತೆರಳಿ ಆನಂದರಾಯ ಹಿಂದೆ ನೋಡಿದ. ರಾಮುಗೌಡ ಹಿಂಬಾಲಿಸುತ್ತಿದ್ದ. "ಈ ಕಾವಲು ನಾಯಿಯನ್ನು ಬಿಟ್ಟು ಹೋಗಿದ್ದಾರೆ'' ಎಂದಂದುಕೊಂಡ.

ಆದರೆ ರಾಮುಗೌಡನಿಂದ ಅವನಿಗೆ ಸ್ವಲ್ಪ ಉಪಕಾರವೂ ಆಯಿತು. ಅವನು ಆಸ್ಪತ್ರೆಗೆ ಬಂದವನು ಸ್ವಲ್ಪ ಹೊತ್ತು ಕುಳಿತು ಬೀಡಿ ಹಚ್ಚಿ "ಅಯ್ಯಾ! ಏನಾದರೂ ಕೆಲಸವಿದ್ದರೆ ಹೇಳಿ. ನಾನು ಮಾಡುತ್ತೇನೆ. ನಮ್ಮ ಯ್ಯನ ಅಳಿಯ ಎಂದಾದ ಮೇಲೆ ನನಗೆ ನೀವೂ ಅಯ್ಯನೇ ! ಅವರು ಬೇರೆಯಲ್ಲ, ನೀವು ಬೇರೆಯಲ್ಲ'' ಎಂದು ಹೇಳಿದ.

"ಏನು ಕೆಲಸ? ಕಂಪೌಂಡರನ ಕೆಲಸ ಮಾಡುತ್ತೀಯಾ ? ಸಂಬಳ ಎಷ್ಟು ಕೊಡಬೇಕು, ಹೇಳು" ಎಂದ ಡಾಕ್ಟರ್ ನಗುತ್ತ.

ಗೌಡನಿಗೂ ನಗು ಉಕ್ಕೇರಿತು. ಅವನು ಹೇಳಿದ : "ಅಯ್ಯಾ! ಬರ ಬಿಲ್ಲ. ಬರವು ಇದ್ದರೆ ಪುಡಿ ಹಾರಿಸುತಿದ್ದೆ. ಈ ಗಾಡಿ ಲಗಾಡಿ ಕೆಲಸ ಏನು ಕರ್ಮದ್ದು? ಗಾಡಿಯ ಕತ್ತರಿಯಲ್ಲಿ ಕುಳಿತು ಕುಳಿತು ಈ ಸೊಂಟ ಸೋಬಾನೆ ಯಾಯ್ತು!"

ಆ "ಸೊಂಟ ಸೋಬಾನೆಯ" ಗೂಡಾರ್ಥ ನೆನಸಿ ಡಾಕ್ಟರನಿಗೆ ಇನ್ನಷ್ಟು ನಗೆ ಬಂದಿತು.

ರಾಮುಗೌಡನ ಬೀಡಿ ನೊಂದಿತು. ಅವನು ಬೆಂಕಿ ಪೆಟ್ಟಿಗೆ ಕೊರೆದು ಹಚ್ಚಿ ಆ ಕಡ್ಡಿಯನ್ನು ಒಗೆದ. ಆಗ ಅವನ ದೃಷ್ಟಿ ಕಡ್ಡಿ ಬಿದ್ದ ಕಡೆ ಹೊರ ಳಿತು. ನೆಲದಲ್ಲಿ ಅಂಥ ಅನೇಕ ಕಸಕಡ್ಡಿಗಳು ಬಿದ್ದಿದ್ದುವು. ಕಸಬರಿಗೆ ಹುಡುಕಿ, ಗುಡಿಸಿ, ಆಸ್ಪತ್ರೆಯನ್ನು ಸ್ವಚ್ಛಗೊಳಿಸಿದ ರಾಮುಗೌಡನ ಮೇಲೆ ಡಾಕ್ಟರ್ ಪ್ರಸನ್ನನಾದ. ರಾತ್ರಿ ಊಟವಾದ ಮೇಲೆ ಕೂಡ ಬಹಳ ಹೊತ್ತಿನ ವರೆಗೆ ಹರಟೆ ಸಾಗಿತು. ರಾಮುಗೌಡನ ಆದಿ ಪುರಾಣವೂ ಬಹಳ ಸ್ವಾರಸ್ಯವಾದುದು. ಅವನ ತಂದೆ ಹೆಸರಾದ ಬೇಟೆಗಾರ. ಬೇಟೆ ಆಟವಲ್ಲ ನೆಂದು ಅವನು ವರ್ಣಿಸಿದ. ಅರಣ್ಯದಲ್ಲಿ ಯಾವ ಯಾವ ಪಶುಪಕ್ಷಿ ಉರಗ ಗಳಿವೆ, ಅವುಗಳ ವಾಸಸ್ಥಳ, ಆಹಾರಗುಣ, ಬೇಟೆಯಾಡುವ ಕಾಲ, ಕೋರೆ ಹಂದಿಗೆಲ್ಲಿ ಗುಂಡು ಹೊಡೆಯಬೇಕು, ಕಣೆ ಹಂದಿಗೆಲ್ಲಿ ಗುಂಡು ತಾಗಿದರೆ ಸಾಯುತ್ತದೆ, ಎಂದು ತಿಳಿಸಿದ. "ಗಂಡು ಹೆಣ್ಣು ಜೊತೆ ಹುಲಿ ಇದ್ದಾಗ ಒಬ್ಬನೇ ಇದ್ದರೆ ಗುಂಡು ಹಾಕಬಾರದು. ಬಹಳ ಜನರಿದ್ದರೆ ಅಂಥ ಸಾಹಸಕ್ಕೆ ಕೈಹಾಕಬೇಕು. ಆಗ ಕೂಡ ಹೆಣ್ಣು ಹುಲಿಯನ್ನು ಮೊದಲು ಕೊಲಬೇಕು. ಇಲ್ಲದಿದ್ದರೆ ಗಂಡು ಸತ್ತ ಕೋಪದಿಂದ ಅದು ಹಾರಿ ಮನುಷ್ಯನನ್ನು ಸೀಳಿ ಬಿಡುತ್ತದೆ. ಅಬ್ಬಬ್ಬ! ಹೆಣ್ಣಿಗೆ ರೌದ್ರ ಬಹಳ. !"

ಆನಂದರಾಯನಿಗೆ ನಗುವನ್ನು ತಡೆಯಲಾಗಲಿಲ್ಲ. "ನಮ್ಮ ಹೆಂಗ ಸರ ಹಾಗೆ !"–ಎಂದ.

"ಹೆಂ, ನಮ್ಮ ಹೆಂಗಸರು ಯಾಕಾದಾರಯ್ಯ ? ಒಬ್ಬ ದಷ್ಟಪುಷ್ಟ

ಆಳನ್ನು ಕಂಡೊಡನೆ ನಡುಗುತ್ತವೆ. ಅವರ ರೌದ್ರವೆಲ್ಲ ತಮ್ಮ ಗಂಡಂದಿರ ಮುಂದೆ ಅಷ್ಟೆ !''

"ಹೊ, ಹೊ ! ಹೊ ! ನಿಜ, ನಿಜ" ಎಂದು ಡಾಕ್ಟರ್ ಗಹಗಹಿಸಿದ.

ರಾಮುಗೌಡ ಆನಂದರಾಯನನ್ನು ದಿಟ್ಟಿಸಿ "ಒಳ್ಳೆ ಅನುಭವ ಇದ್ದವರಂತೆ ಹೇಳುತ್ತೀರಲ್ಲಯ್ಯಾ !'' ಎಂದು ಕೇಳಿದ.

ಬೇಟೆಗೆ ಹೋದಾಗ ಕಾಡಿನಲ್ಲಿ ಕಣೆ ನೆಟ್ಟಂತಾಯಿತು ಅವನಿಗೆ. ಅವನು ಕಣ್ಮುಚ್ಚಿ ಆ ನೋವನ್ನು ನುಂಗಿಕೊಂಡು "ನಿಮ್ಮಂಥ ಜನರನ್ನು ನೋಡುತಿದ್ದೇನಲ್ಲ. ನಾನೂ ಈ ಪ್ರಪಂಚ ಬಿಟ್ಟು ನಿಂತಿದ್ದೇನೇನು? ಇನ್ನು ಸ್ವಲ್ಪ ಸಮಯದೊಳಗೆ ನನಗೂ ಅನುಭವವಾಗುತ್ತದಲ್ಲ !'' ಎಂದು ನಕ್ಕು ನುಡಿದು ಕೇಳಿದ: "ಮತ್ತೆ ನಮ್ಮ ಕೈಹಿಡಿದವಳು ಹೇಗೆ? ನೀನು ಈಗ ವರ್ಣಿಸಿದ ಸ್ತ್ರೀ ಜಾತಿಯೇ, ಮತ್ತೆ?"

"ಛೇ, ಛೇ, ಛೇ !'' ರಾಮುಗೌಡ ಗಲ್ಲ ಬಡೆದುಕೊಂಡು ನುಡಿದ. "ಸಾಕ್ಷಾತ್ ಲಚ್ಮಿದೇವಿ ! ನಾನು ಬಹಳ ಊರು ಕಂಡಿದ್ದೇನೆ, ಬಹಳ ಹೆಂಗಸರನ್ನು ನೋಡಿದ್ದೇನೆ. ಆದರೆ ಈ ಅಮ್ಮನ ರೂಪ, ಗುಣ, ಎಲ್ಲೆಲ್ಲಿಯೂ ಕಂಡಿಲ್ಲ. ಕೈ ತೊಳೆದು ಮುಟ್ಟ ಬೇಕರಿ ನೀವು. ಏನು ಪುಣ್ಯ ಮಾಡಿದ್ದಿರೋ, ದೇವರೆ !" ಎಂದು ದಂಗು ಬಡಿದಂತೆ ಹೇಳಿದ. ಅದೊಂದೇ ಸಲವಲ್ಲ. ಭಾನುವಾರ ಬೆಳಿಗ್ಗೆ ಅವರು ಮುಂಡಾಜೆಯಿಂದ ಬಂಗಾಡಿಗೆ ನಡೆದುಕೊಂಡು ಹೋದಾಗಲೂ ಈ ಲಕ್ಷ್ಮಿದೇವಿಯ ವರ್ಣನೆ ಮಾಡಿದ. ದಾರಿಯಲ್ಲಿ ಒಂದೆಡೆ ನಿಂತು, "ಅಯ್ಯಾ ! ಇಲ್ಲಿ ಬನ್ನಿ, ಇಲ್ಲಿ ಬನ್ನಿ ! ಇಕೊಳ್ಳಿ, ಇದು ಹುಲಿಹೆಜ್ಜೆಯ ಗುರುತು. ರಾತ್ರಿ ಈ ರಸ್ತೆ ಅಡ್ಡ ಹಾಯ್ದು ಅಕೊಳ್ಳಿ, ಆ ಮಲೆಗೆ ಹೋಗಿದೆ. ಇನ್ನು ಎಷ್ಟು ದನಕರುಗಳ ಗೋಣು ಮುರಿಯಲಿಕ್ಕಿದೆಯೋ, ಮಾರಿ !'' ಎಂದು ಸಿಟ್ಟುಸಿರುಗರೆದ. ಈ ಮಾತಿನ ಮಲ್ಲನೊಡನೆ ನಡೆದಾಗ ದೇಹಾಯಾಸವೇ ಆಗಲಿಲ್ಲ. ಆನಂದರಾಯನ ತಲೆಯಲ್ಲಿದ್ದ ಬೇರೆ ಚಿಂತೆಗಳೂ ಮರೆತು ಹೋದುವು. ನದಿಯ ದಂಡೆಗೆ ಬಂದು ನಿಂತಾಗ ಮಾತ್ರ ಆ ಪ್ರವಾಹ ಮತ್ತು ನೀರಿನ ಕಲಕಲಾರವ ಕೇಳಿ ಅವನ ಮೈ ಜುಮ್ಮೆಂದಿತು. "ಅರೇ! ಇದನ್ನು ದಾಟುವ ಬಗೆ ಹೇಗೆ ?'' ಎಂಬ ಸಂದೇಹವೂ ತಲೆದೋರಿತು. ಆದರೆ ರಾಮುಗೌಡ ಅವನ ಸಣ್ಣ

ಟ್ರಂಕು, ಕೋಟು, ಅಂಗಿ ಮೊದಲಾದವುಗಳನ್ನು ತನ್ನ ತಲೆಯ ಮೇಲಿಟ್ಟು ಕೊಂಡು ದಾಟಿ ಆಚೆ ದಂಡೆಯಲ್ಲಿಟ್ಟು ಮತ್ತೆ ಬಂದು ಅವನ ಅಂಜಿಕೆಯನ್ನು ಪರಿಹರಿಸಿದ. ಆದರೂ ಅವನು ಆನಂದರಾಯನ ಕೈ ಹಿಡಿದು ದಾಟಿಸಬೇಕಾಯಿತು. ಗುಡ್ಡಗಾಡು ತೊರೆ ತೋಡು ಹಳ್ಳ ಹಳ್ಳಗಳಿಂದ ಹರಿದು ಬಂದ ಈ ನೇತ್ರಾವತಿ ನೀರು ಹಿಮಶೀತಲವಿದ್ದುದರಿಂದ ಆಚೆ ದಂಡೆ ಏರಿದಾಗ ಆನಂದರಾಯ ನಡುಗಿದ. ಕೈ ಮೈ ಒರಸಿಕೊಂಡು ಧೋತರ ಅಂಗಿ ಕೋಟು ಧರಿಸಿದ ಬಳಿಕ ಸ್ವಲ್ಪ ಬೆಚ್ಚಗೆನಿಸಿತು. ಭರದಿಂದ ನಡೆದ ಮೇಲೆ ಕೈ ಮೈ ಸಡಿಲವೆನಿಸಿದರೂ ಮಾವನ ಮನೆ ಹತ್ತಿರವಾದಂತೆ ಅವನ ಹೃದಯ ಕಂಪಿಸಲಾರಂಭಿಸಿತು.

ಗೋಪಾಲರಾಯರು ಅಳಿಯದೇವರ ದಾರಿ ಕಾಯುತಿದ್ದರು. ಅವನು ಪ್ರತ್ಯಕ್ಷನಾದುದನ್ನು ಕಂಡು ಚಾವಡಿಯಿಂದ ನಾಲ್ಕು ಹೆಜ್ಜೆ ಇಳಿದು ಬಂದು ಇದಿರ್ಗೊಂಡರು. ರಾಮಗೌಡನನ್ನು ಮಾತನಾಡಿಸಿ "ನೀನು ಮನೆಗೆ ಹೋಗಬೇಡ. ಇಲ್ಲೇ ಇರು" ಎಂದರು. ಆನಂದರಾಯ ಚಾವಡಿಗೆ ಬಂದಾಗ ಅಲ್ಲಿ ಕುಳಿತಿದ್ದವರು ಅವನಿಗೆ ಕೈ ಜೋಡಿಸಿದರು. ಒಳ ಹೊರಗೆ ಏಳೆಂಟು ಅನ್ಯ ಸ್ತ್ರೀ ಪುರುಷರಿಗಿಂತ ಹೆಚ್ಚಾಗಿರಲಿಲ್ಲ. ಹೊಳೆ ಈಚೆಗಿರುವ ಆಸುಪಾಸಿನವರು ಮಾತ್ರ ಬಂದಿದ್ದರು. ಹಾಗಾಗಿ ಮನೆಯಲ್ಲಿ ವಿಶೇಷ ಗೌಜಿ ಗದ್ದಲವಿರಲಿಲ್ಲ. ಅರವಿಂದನಿಲ್ಲದಿದ್ದುದರಿಂದ ಎಲ್ಲ ಕೆಲಸಕ್ಕೂ ಗೋಪಾಲರಾಯರೇ ಓಡಾಡುತಿದ್ದರು. "ಹಾಗೆ ಮಾಡಿ. ಹೀಗೆ ಮಾಡಿ" ಎಂದು ಒಳಗೆ ಪುರೋಹಿತರಿಗೆ, ಹೆಂಡತಿಗೆ ಆಜ್ಞಾಪಿಸುವವರೂ ಅವರೇ. "ರಾಮಗೌಡ! ಹಂಡೆಯಲ್ಲಿ ಹಾಕಿದ ಕಾಯಿ ತೆಗೆ. ಸಿಪ್ಪೆ ಹೆರೆ" ಎಂದು ವಿಧಿಸುವವರೂ ಅವರೇ. ಆದರೆ ಹೋಮ, ಊಟ, ಉಪಚಾರಗಳಾದ ಮೇಲೆ ಅವರು ಮಾಡುವ ಕೆಲಸ ಮುಗಿಯಿತು. ಮುಂದಿನದೆಲ್ಲ ಸ್ತ್ರೀಯರ ಕೆಲಸ. ದಂಪತಿಗಳ ಪೂಜೆ, ಆರತಿ, ಗುರುಹಿರಿಯರು ದೇವರಿಗೆ ನಮಸ್ಕಾರ, ಬಾಗಿಲು ತಡೆಯುವುದು, ಗಂಡ ಹೆಂಡತಿ ಕಡೆಯಿಂದ ಹೆಸರು ಹೇಳಿಸುವುದು ಎಲ್ಲ ಸ್ತ್ರೀಯರ ವಿನೋದ ವಿಲಾಸಗಳು! ಅವರ ಕೈಯಿಂದ ಪಾರಾಗಿ ದಂಪತಿಗಳು ಕೋಣೆ ಸೇರಿದರು.

ಕೋಣೆಯಲ್ಲಿ ಒಂದು ಸಣ್ಣ ಮೇಜವೆ. ಅದರ ಮೇಲೆ ಲಾಟಾನು,

ಹಾಲು, ವೀಳೆಯದೆಲೆ ತಟ್ಟೆಗಳನ್ನು ಇರಿಸಿರುವರು. ಒತ್ತಟ್ಟಿಗೆ ಒಂದು ಮಂಚ. ಸೊಳ್ಳೆ ಪರದೆಯಿಲ್ಲ. ಶಯ್ಯೆಯ ಮೇಲೆ ಹಾಸಿದ ಬಿಳಿ ಮಗ್ಗುಲ ರಿವೆಯ ಗೀಟುಗಳು ಕರಿಕಡ್ಡಿಗಳಂತೆ ಕಾಣುತ್ತವೆ. ಒಂದು ಬದಿಯಲ್ಲಿ ತಲೆದಿಂಬುಗಳು. ಇನ್ನೊಂದು ತುದಿಯಲ್ಲಿ ನಯ ಕಂಬಳಿ! ಕೋಣೆಯಲ್ಲಿ ಸುವಾಸನೆ ತುಂಬಿದೆ. ಆನಂದರಾಯ ಅದನ್ನು ಆಘ್ರಾಣಿಸುತ್ತ ಮಂಚದ ಅಂಚಿನಲ್ಲಿ ಬಂದು ಕುಳಿತ. ದೀಪದ ಪ್ರಕಾಶ ವಿಶೇಷವಿರಲಿಲ್ಲ. ಆ ಮೂಲೆ ಈ ಮೂಲೆಗಳಲ್ಲಿ ಕತ್ತಲೆಯೇ ಮುಸುಕಿದೆ. ಕತ್ತಲೆಯಲ್ಲಿ ಚಂದ್ರಬಿಂಬ ಕಂಡಂತೆ ಕಾವೇರಿಯ ಮುಖದರ್ಶನವಾಯಿತು ಅವನಿಗೆ. ಬೆಳದಿಂಗಳಿಗೆ ತೆರೆಗಳಂತೆ ಅವನ ಹೃದಯವಾರಿಧಿ ಉಕ್ಕಿತು.

ಕಾವೇರಿ ಮುಗ್ಧೆ. ಪ್ರೇಮ ಕಾಮಗಳ ಸುಖ ಸೌಖ್ಯಗಳನ್ನನುಭವಿಸಿದವಳಲ್ಲ. ಕದ್ದು ಕೇಳಿದ ಕೆಲವು ಮಾತುಗಳು ಅವಳ ಸ್ಮೃತಿಯಲ್ಲಿವೆ. ಕೊಲ್ಲಿ ದೇವಸ್ಥಾನಕ್ಕೆ ಒಮ್ಮೆ ಹೋದಾಗ ಮದನಕೈ ಮೇಲೆ ಕುಳಿತ ಪಾರಿವಾಳ ಗುಳು ಗುಳು ಗುಟು ಗುಟು ಗುರು ಗುರು ಎಂದು ಗೂರುಳು ಹಾಕಿದವನ್ನು ಕಂಡಿದ್ದಳು. ಮನೆಯಂಗಳದಲ್ಲಿ ಗಂಡು ಗುಬ್ಬಿ ಹೆಣ್ಣಿನೊಂದಿಗೆ ಲಿಯುತ್ತಿರುವುದು ಅವಳ ದೃಷ್ಟಿಗೆ ಬಿದ್ದಿತ್ತು. ಮನೆಯ ದನ ಹೋರಿಗಾಗಿ ಕೂಗುವುದನ್ನು ಅವಳು ಕೇಳಿದ್ದಳು. ಅರವಿಂದ ಬೆಳ್ತಂಗಡಿ, ಪುತ್ತೂರು ಶಾಲೆಗಳಿಂದ ರಜೆಯಲ್ಲಿ ಬಂದಾಗ ತಂದ ಅನೇಕ ಕಥೆ ಕಾದಂಬರಿಗಳನ್ನು ಅವಳು ಓದಿರುವಳು. ಅವುಗಳಿಂದ ಯಾವುದೋ ಒಂದು ರೀತಿಯ ಅಸ್ಪಷ್ಟ ಕಲ್ಪನೆ ಅವಳ ತಲೆಯಲ್ಲಿದೆ. ಲಗ್ನವಾದ ಮೇಲೆ ಅವಳು ಕುತೂಹಲಭರಿತಳಾಗಿದ್ದಳು. ಲಗ್ನದ ವೇಳೆ ಮತ್ತು ಗುಡ್ಡದ ತಪ್ಪಲಲ್ಲಿ ಗಂಡನ ಕೈ ಸ್ಪರ್ಶವಾದಾಗ ಮೈ ರೋಮಾಂಚನಗೊಳ್ಳುತಿತ್ತು. ಅವನನ್ನು ನೆನಸಿಕೊಂಡರೇ ಏನೋ ಒಂದು ಆಸೆಯಾಗುತಿತ್ತು. ಹಗಲಿಗೆ ಅದು ಮನದಾಸೆಯಾಗಿದ್ದರೆ ನಿದ್ದೆ ಬಾರದ ರಾತ್ರಿ ಅದು ಮೈಯಾಸೆಯಾಗಿ ಟಿಸಳು ಹೊಡೆದುದ್ದುಂಟು. ಪ್ರಸ್ಥದ ದಿನ ಹತ್ತಿರವಾದಂತೆ ಅವಳು ಬೆದರಿದ್ದಳು. ಈಗ ಕೋಣೆಗೆ ಬಂದ ಮೇಲೆ ಅವಳ ಕಾಲುಗಳು ನಡುಗಿದವು.

ಪ್ರೇಮ ಕಾಮಗಳ ಜಲಕೇಳಿಯಲ್ಲಿ ಆನಂದರಾಯ ಬರಿ ನಿರೀಕ್ಷಕನಲ್ಲ. ರಿಯ ದಂಡೆಯ ಮೇಲೆ ಕುಳಿತು ನೀರ ಮೇಲೆ ಕಾಲುಗಳನ್ನು ಅಲ್ಲಾ

ಡಿಸುವ ಬಾಲಕನಲ್ಲ. ಕೆರೆಯ ಒಂದೊಂದೇ ಪಾವ 'ಟಿಗೆಗಳನ್ನಿಳಿದು ಈಸು ವವನೂ ಅಲ್ಲ. ಆ ನಿರೀಕ್ಷೆ ಪರೀಕ್ಷೆಗಳು ಎಂದೋ ಮುಗಿದು ಹೋಗಿವೆ. ಹೊಸ ಹೆಣ್ಣನ್ನು ಕಂಪಾಗ ಕೆರಳುವ ಕುತೂಹಲ ಈಗ ' ಕುಗ್ಗಿದೆ. ನೋಟ, ನಲವು, ನಗೆ ನುಡಿ ಬಗೆ ಭಾವ ಮೋಹ ಮಾತೂ ಅವ 'ಗೆ ಬೇಸರವೇ. ವಾಸಂತಿಯೊಡನೆ ಅನೇಕ ವರುಷಗಳ ವರೆಗೆ ಅವನು ಅದೇ ,ವನ್ನೂ ಅನು ಭವಿಸಿರುವನು. ಈಗ ಅವನಿಗೆ ಬೇಕಾಗಿರುವುದು ಹೆಣ್ಣು ಒ ಂದೇ! ತನ್ನ ಕಾಮನೆಯನ್ನು ಪರಿಹರಿಸಿಕೊಳ್ಳಲು ಅದೊಂದು ಭೋಗ್ಯವಸ್ತು ! ಅದರ ಆ ನಿಲುವು, ಒ ಣ್ಣ, ಯೌವನಗಳೆಲ್ಲ ಆ ಅಪೇಕ್ಷೆಯನ್ನೇ ಅವನಲ್ಲಿ ತಕ್ಷಣ ಕೆರ ಳಿಸಿ ಬಿಡುತ್ತವೆ. ಅಂಗಿ ಲುಂಗಿ ದಡದ ಮೇಲಿಸೆದು ಒಮ್ಮೆಯೇ ಕೆರೆಯ ನಡುನೀರಿಗೆ ಧುಮುಕುವವನಂತೆ ಈ ಆನಂದರಾಯನ ಅಭಿಲಾಷೆ! . ಒಂದು ಕ್ಷಣ ಕೂಡ ಸೈರಿಸಿಕೊಳ್ಳಲಾರ! ಆದುದರಿಂದ ಫಕ್ಕನೇ ಬಂದು ಒ ಡವ ಬಂಗಾರದ ರಾಶಿಯನ್ನು ದೋಚಿಕೊಳ್ಳುವಂತೆ ಕಾವೇರಿಯನ್ನು ತಬ್ಬಿ ಕೊಂಡು ಅವಳ ಕಣ್ಣು, ಕೆನ್ನೆ ತುಟಿಗಳಿಂದು ನೋಡದೆ ಚುಂಬಿಸಿ, ಆ ಕಾಮ ಭರದಲ್ಲಿ "ವಾಸಂತಿ ! ವಾಸಂತಿ !'' ಎಂದು ಪಿಸುಗುಟ್ಟಿದ.

ಪಾರಿವಾಳದ ಮೇಲೆರಗುವ ಡೇಗೆಯಂತೆ ಅವನು ಅಪ್ಪಿಕೊಂಡು ರಿಂದ ಅವಳು ಅಚ್ಚರಿ ಪಟ್ಟಳು. ಡೇಗೆಯ ಹಿಡಿತದಂತೆ ಅವನ ಬಾ ಪಾಶ ಬಿಗಿಯಾಗಿದೆ. ನಖಗಳು ಈ ಪಾರಿವಾಳದ ಮೃದು ಮೈಯನ ಚುಚ್ಚಿವೆ. ಅವನೆದೆ ಅವಳೆದೆಯನ್ನೊತ್ತಿದ ರಭಸಕ್ಕೆ ಕುಚಗಳೆರಡ ನೋವಾದುವು. ಡೇಗೆ ಕೊಕ್ಕಿನಿಂದ ಕುಕ್ಕುವಂತೆ ಅವನು ಅವಳ ತುಟಿ ಗಳನ್ನೂ ಕಚ್ಚಿದ. ಇವೆಲ್ಲ ವೇದನೆಗಳನ್ನು ಸಹಿಸಿಕೊಂಡಾಳು! ಕೋಣೆಗ ಕಳಿಸುವ ಮೊದಲು ತಾಯಿ ಅವಳನ್ನು ಏಕಾಂತಕ್ಕೆ ಕರೆದು, "ಬೇರೆ ಹಾಸಿಗೆ ಯಲ್ಲಿ ಮಲಗಬೇಡ. ಅವನು ಕೈ ಮೈ ಮುಟ್ಟಿದರೆ ಬೆದರಬೇಡ. ಅವನ ಏನು ಹೇಳುವನೋ ಅದನ್ನು ಕೇಳು'' ಎಂದು ಪಿಸುಗುಟ್ಟಿದ್ದಳು. ಆದ ಅವನು "ವಾಸಂತಿ! ವಾಸಂತಿ!'' ಎಂದಾಗ ಅವಳ ಪ್ರಾಣವನ್ನೇ ಹಿಚು ದಂತಾಯಿತು. ಆಗ ತನ್ನೆಲ್ಲ ಶಕ್ತಿಯನ್ನು ಒಮ್ಮೆ ಉಪಯೋಗಿಸಿ ಡೇಗೆಯ ಕಾಲುಗ ಂದ ತಪ್ಪಿಸಿಕೊಳ್ಳಲು ಯತ್ನಿಸುವಂತೆ ಕಾವೇರಿಯೂ ತೊಳಲಾ ದಳು. ಕಲ್ಲಿನೇಟು ತಿಂದ ಪಕ್ಕಿಯಂತೆ ಸ್ವತಃ ಅವನು

ಏಕೆಂದರೆ "ವಾಸಂತಿ!" ಎಂದು ಉಚ್ಚರಿಸಿದ ತಕ್ಷಣ ಅವನಿಗೆ ತನ್ನ ಅಪರಾಧದ ಅರಿವಾಯಿತು. ರೂಢಿಬದ್ಧವಾದ ನಾಲಿಗೆ ಅದೇ ಹೆಸರನ್ನು ಉಸುರಿತಲ್ಲ ಎಂದವನ ಗಾಬರಿ. ಈ ಮೊದಲೇ ಚಾಡಿ ಮಾತುಗಳನ್ನು ಅವಳು ಕೇಳಿರಲು ಸಾಕು. ಈಗ ತನ್ನ ಅಜಾಗರೂಕತೆಯಿಂದ ಅದು ಬಹಿರಂಗವಾಯಿತೆಂದು ನೊಂದ. ಅವಳನ್ನು ಹಿತನುಡಿಗಳಿಂದ ಸಂತೈಸದೆ ಮಂಚಕ್ಕೆ ಬಂದು ಸುಮ್ಮನೆ ಕುಳಿತುಬಿಟ್ಟ.

ಕಾವೇರಿಗೆ ಕೋಪವೇನೋ ಬಂದಿದೆ. ತನ್ನ ಪ್ರಿಯತಮನು ಹೆರಹೆಣ್ಣಿನ ಹೆಸರನ್ನು ಉಸುರಿದರೆ ಯಾರಿಗೆ ಸಿಟ್ಟು ಬರಲಿಕ್ಕಿಲ್ಲ? ಆದರೆ ಆ ಕೋಪವನ್ನು ನಡೆಸುವ ವಿಧಾನವನ್ನು ಮಾತ್ರ ಅವಳು ಅರಿತಿಲ್ಲ. ಆದುದರಿಂದ ಸ್ವಲ್ಪ ದೂರ ಸರಿದು ನಿಂತುಕೊಂಡಳು. ಅವಳ ಮನಸ್ಸಿನ ಉದ್ವೇಗ ಅಭಿಮಾನವನ್ನೂ ಕೆರಳಿಸಿತು.

"ಕಾವೇರಿ!"

ಆನಂದರಾಯ ಕರೆದ. ಪಶ್ಚಾತ್ತಾಪ ಅಥವಾ ಅನುನಯದ ಧ್ವನಿಯಲ್ಲ. ಅವಳು ಪ್ರೇಮ ವ್ಯಾಪಾರವನ್ನರಿಯದ • ಮುಗ್ಧೆ ಎಂದವನು ಯೋಚಿಸಲಿಲ್ಲ. ನವವಧುವೆಂದು ಅರಿತಿರುವನೋ ಇಲ್ಲವೋ! ಪ್ರಥಮ ಸಮಾಗಮದ ಸನ್ನಿವೇಶದಲ್ಲಿ ವಧೂವಿಶ್ವಾಸವನ್ನು ಗಳಿಸುವ ವಿಚಾರವೂ ಇಲ್ಲ. ಇದು ಅಭಿಮಾನದ ಕೂಸೆಂದೂ ಅವನು ಮನಗಾಣದೆ ಹೋದ. ತಾನು ಗಂಡನೆಂಬ ದುರಹಂಕಾರದಿಂದ ಅಧಿಕಾರ ನಡೆಸಲು ಬಯಸಿ ಕರೆದ: "ಕಾವೇರಿ!"

ಅವಳು ಸೆರಗಿನಿಂದ ಕಣ್ಣುಗಳನ್ನೊರಸಿ ಅವನ ಕಡೆ ಹೊರಳಿದಳು. ಬಲಗಣ್ಣು ಅದುರತೊಡಗಿತು.

"ಬಾ ಇಲ್ಲಿ!"

ಗಂಡಸಿನ ಗಡುಸುವಾಣಿ! ಅವಳು ಕ್ಷಣಾರ್ಧದಲ್ಲಿ ನಡುಗಿದಳು. ಹೋಗಬೇಕೋ ಬೇಡವೋ ಎಂದು ಮನಸಿನೊಳಗೆ ಹೊಯ್ದಾಟವೆದ್ದಿದೆ. ಇನ್ನೂ ನಿರ್ಣಯವಾಗಿಲ್ಲ. ಅಷ್ಟರಲ್ಲಿ ಅವನೇ ಮಂಚದಿಂದ ಧಿಗ್ಗನೆದ್ದು ಅವಳ ಕಡೆಗೆ ಬರಲಾರಂಭಿಸಿದ. ಅವನು ಮುಂದೆ ಬಂದಂತೆ ಕಾವೇರಿ ಹಿಂದೆ ಹಿಂದೆ ಹೋದಳು. ಆದರೆ ಎಷ್ಟು ದೂರ ಹೋದಾಳು? ಗೋಡೆಗೆ

ತಲೆ ತಾಗಿದಾಗ ಅವಳು ನಿಲ್ಲಬೇಕಾಯಿತು! ಅವನು ಅವಳ ಇದಿರು ಸ್ತಂಭದಂತೆ ನಿಂತ.

ಕಾವೇರಿ ತಲೆತಗ್ಗಿಸಿದಳು. ಲಜ್ಜಾವತಿಯಾದ ನವವಧು ಹಾಗೆ ವರ್ತಿಸುವುದು ಸಹಜವೇ. ಆದರೆ ಅದೇ ಅವಿಧೇಯತೆಯೆಂದು ಅವನ ಭ್ರಮೆ. ಕೋಪಕ್ಕೆ ಸಿಲುಕಿದ ಮೇಲೆ ಅದರ ಅನುತಾಪವನ್ನು ಅನುಭವಿಸಬೇಕಲ್ಲ!

ಅವನು ಬಲಗೈಯಿಂದ ಅವಳ ಗಲ್ಲವನ್ನು ಬಲವಾಗಿ ಎತ್ತಿ ಕೇಳಿದ : "ನಾನು ಕರೆದೆನಲ್ಲವೇ ?"

ಅವಳ ಅಭಿಮಾನ, ಕೋಪಗಳು ಈಗ ತಿರಸ್ಕಾರ ರೂಪವನ್ನು ತಾಳಿದುವು. ಅಲ್ಲಿ ಧೈರ್ಯವೂ ಕುಸಿದು ಹೋಗಿರಲಿಲ್ಲ!

"ನನ್ನನ್ನು ಕರೆದಿರಾ ?'' ಎಂದು ಅವಳು ಪ್ರಶ್ನಿಸಿದಳು.

"ಹೌದು. ಮತ್ತೆ ಯಾರನ್ನು?"

"ವಾಸಂತಿ ಎಂದು ನನಗೆ ಕೇಳಿಸಿತು.''

ಆನಂದರಾಯನ ಕಾಲುಗಳೇ ಕುಸಿದು ಹೋದುವು. ಅವನ ನಾಲಿಗೆ ತತ್ತರಿಸಿತು. ತಾನು ನಿಜವಾಗಿಯೂ ಪುನಃ "ವಾಸಂತಿ'' ಎಂದು ಕರೆದೆನೋ ಏನೋ ಎಂಬ ಒಂದು ಸಂದೇಹವು ತಲೆದೋರಿತು. ಅವನು ಈ ವಿಚಾರ ಗೊಂದಲದಲ್ಲಿದ್ದಾಗಲೇ ಅವಳು ಒಂದು ವಾಗ್ಬಾಣವನ್ನೆಸೆದಳು :

"ವಾಸಂತಿ ಯಾರು ?"

ಅವನ ಸಿಟ್ಟು ಪ್ರಜ್ವಲಿಸಿತು. "ನೀನು ಯಾರು ಕೇಳಲಿಕ್ಕೆ ಅದನ್ನು? ಅವಳ ಒಂದು ರೋಮದ ಗುಣ ನಡತೆ ನಿನ್ನಲ್ಲಿಲ್ಲ!"

ಕಾವೇರಿಯ ಎದೆ ಬಿರಿಯಿತು. ಅದರೊಂದಿಗೆ ಕಣ್ಣೀರಿನ ಕಟ್ಟೆಯೂ ಒಡೆದು ಹರಿಯಿತು. ಅವಳು ನಿಂತಲ್ಲೇ ಕೆಳಗೆ ಕುಸಿದು ಬಿಸುಸುಯ್ಯತೊಡಗಿದಳು. ತಾನಿರುವ ಸ್ಥಳ, ಸನ್ನಿವೇಶದ ಪ್ರಜ್ಞೆಯಿಂದ ಆನಂದರಾಯ ಮಂಚಕ್ಕೆ ಹಿಂತಿರುಗಿದ. ಅವಳನ್ನು ಪುನಃ ಕರೆವ ಧೈರ್ಯವಾಗಲಿಲ್ಲ. ಅವಳೂ ಅವನ ಹತ್ತರ ಬರಲಿಲ್ಲ. ಒಬ್ಬೊಬ್ಬರ ತಲೆಯಲ್ಲಿ ಒಂದೊಂದು ವಿಚಾರ! ರಾತ್ರಿ ಹೆಚ್ಚಾದಂತೆ ಅವನ ಕಣ್ಣೆವೆಗಳು ಮುಚ್ಚಿಕೊಂಡುವು. ಅವನು ಮೋರೆಗೆ ಮುಸುಕನ್ನು ಎಳೆದುಕೊಂಡ. ದೇಹ ಮನಸ್ಸುಗಳೆರಡೂ ಬಳಲಿದ್ದುದರಿಂದ ಬೇಗನೇ ನಿದ್ದೆಯು ಬಂದಿತು.

ಬೆಳಗಿನ ಜಾವಕ್ಕೆ ತಂಗಾಳಿ ಬೀಸಿತು. ಗರಿ ಮುದುಡಿ ತೂಕಡಿಸು ತ್ತಿದ್ದ ಹಕ್ಕಿಪಕ್ಕಿಗಳ ಕಿವಿಯೊಳಗೆ ಅದು ಉದಯರಾಗ ಹಾಡಿಸಿತು. ಕೋಳಿ ಗಳು ಕೆಲೆಯುತೊಡಗಿದುವು. ಹಕ್ಕಿಗಳು ಚಿಲಿಪಿಲಿಗುಟ್ಟಿದುವು. ಅದೇ ಹೊತ್ತಿಗೆ ಏಳುವ ರೂಢಿ ಕಾವೇರಿಗೆ. ಅದರಂತೆ ಇಂದು ಕೂಡ ಅವಳು ಅಂಗಾಂಗಗಳನ್ನು ನೀಡಿದಳು. ಅವಳ ಸರ್ವಾಂಗವನ್ನೂ ಸುತ್ತಿಕೊಂಡಿದ್ದ ನಿದ್ದೆಯ ಕಟ್ಟು ಸಡಿಲವಾಯಿತು ಎದ್ದು ಕುಳಿತವಳಿಗೆ ತಾನು ನೆಲದಲ್ಲೇ ಮಲಗಿದ್ದೆನೆಂಬ ಅರಿವಾಯಿತು. ಮೆಲ್ಲಗೆ ಮಂಚದ ಬಳಿ ಬಂದಳು. ಅವನು ಆಚೆ ಮೊಗ ಮಾಡಿ ಮಲಗಿರುವನು. ಅವಳು ಅಗಳಿಯನ್ನು ತೆಗೆದು ಕೋಣೆಯಿಂದ ಹೊರಬಿದ್ದಳು. ಅವಳು ಬಂದೊಡನೆಯೇ ಜಲಜಮ್ಮ ಒಂದು ಕ್ಷಣ ದಿಟ್ಟಿಸಿದರು. ಆ ಬಳಲಿದ ಕಣ್ಣು, ಮುದ್ದೆಯಾದ ತುರುಬಿನ ಹೂ, ಅಸ್ತವ್ಯಸ್ತವಾಗಿದ್ದ ತಲೆಗೂದಲು, ಅಳಿಸಿದ ತಿಲಕಗಳನ್ನು ಕಂಡ ಅವರು ಮನದೊಳಗೆ ಹರ್ಷಿಸಿದರು.

ಆನಂದರಾಯನಿಗೆ ಗಾಢ ನಿದ್ದೆ ಬಂದುದರಿಂದ ಉಲ್ಲಾಸದಿಂದಲೇ ಎದ್ದ. ಆ ಮೇಲೆ ಅವನಿಗೆ ಬೇಸರವಾಯಿತು. ಅದನ್ನು ಅವನು ಹೊರಗೆ ತೋರ್ಪಡಿಸಿಕೊಳ್ಳಲಿಲ್ಲ. ಆದರೆ ಇಲ್ಲಿ ಅವನಿಗೆ ಇರಲು ಇಷ್ಟವೆನಿಸಲಿಲ್ಲ. ಆದುದರಿಂದ ಕಾಫಿ, ಟಿಫಿನ್ ಮುಗಿದ ಬಳಿಕ ಅವನು ಹೊರಡಲನುವಾದ. "ಈ ದಿನ ಇದ್ದು ನಾಳೆ ಹೋಗಿರಿ'' ಎಂದು ಗೋಪಾಲರಾಯರು ತಮ್ಮ ಆಸೆಯನ್ನು ತಿಳಿಸಿದರು. ಆದರೆ ಅವನು ನಾನಾ ಕಾರಣಗಳನ್ನು ಕೊಟ್ಟು ಅವರ ಆಕ್ಷೇಪಗಳನ್ನೆಲ್ಲ ಮೂಲೆಗೆ ಸರಿಸಿದ. ಗೋಪಾಲರಾಯರು ಒಳಗೆ ಹೋಗಿ ಈ ಸುದ್ದಿಯನ್ನು ಹೆಂಡತಿಯ ಮುಂದೆ ನುಡಿದರು. ಅವರು ಕಣ್ಸನ್ನೆ ಮಾಡಿದುದರಿಂದ ಅಲ್ಲೇ ಕೆಲಸದಲ್ಲಿ ನಿರತಳಾಗಿದ್ದ ಕಾವೇರಿಯ ಕಡೆ ಹೊರಳಿ, "ನೀನೊಮ್ಮೆ ಹೇಳಿ ನೋಡಮ್ಮಾ!'' ಎಂದು ನುಡಿದರು. ಆ ಮೇಲೆ ಚಾವಡಿಗೆ ಹಿಂತಿರುಗಿ "ನಿಮ್ಮ ಯಜಮಾನತಿ ಕರೆಯುತ್ತಾಳೆ. ಅವಳು ಪರ್ಮಿಶನ್ ಕೊಟ್ಟರೆ ಹೋಗಿ. ಇನ್ನು ನಮ್ಮ ಅಧಿಕಾರ ನಮ್ಮ ಮಗಳ ಮೇಲೆ ನಡೆಯುವುದಿಲ್ಲ'' ಎಂದು ಹೇಳಿ ನಕ್ಕರು.

"ಅವಳನ್ನೇನು ಕೇಳುವುದು? ನನ್ನ ಮೇಲೆ ಅವಳದೇನು ಅಧಿ ಕಾರ?'' ಎಂದು ಅವನು ಮಾನಸ್ಸಿನಲ್ಲಿ ಅಂದುಕೊಂಡರೂ ಯಾಂತ್ರಿಕವಾಗಿ

ಒಳಗೆ ಹೋದ. ಕಾವೇರಿ ಆ ಶಯ್ಯಾಗೃಹದ ಬಾಗಿಲಲ್ಲಿ ನಿಂತಿದ್ದಳು. ಅವನು ಬಂದೊಡನೆಯೇ ಕೋಣೆಗೆ ನುಸುಳಿದಳು. ಆನಂದರಾಯ ಹೊಸ್ತಿಲು ದಾಟಿ ಒಳಗೆ ಕಾಲಿಟ್ಟ. "ಈಗಲೇ ಹೋಗುತ್ತೀರೇನು? ಏನು ಇಷ್ಟು ಅವಸರ?'' ಎಂದು ಅವಳು ಪ್ರಶ್ನಿಸಲಿಲ್ಲ. ನಗೆ ನೋಟದಿಂದ ಅವನನ್ನು ಒಲಿಸಲಿಲ್ಲ. ತನ್ನ ನಳಿದೋಳುಗಳಿಂದ ಸುತ್ತಿ ಅವನನ್ನು ಬಂಧಿಸಲಿಲ್ಲ. ಕಾಲಿನ ಬೆರಳಿನಿಂದ ನೆಲವನ್ನು ತೀಡುತ್ತ ನಿಂತಳು. ತನ್ನ ಸೆರಗಿನ ತುದಿಯನ್ನು ಬಾಯೊಳಗೆ ತುರುಕಿಸಿಕೊಂಡಳು. ಅವಳನ್ನು ಕಂಡ ತಕ್ಷಣ ಅವನಿಗೆ ಏನನ್ನಿಸಿತೋ ಏನೋ! ಪ್ರಾಯಶಃ ರಾತ್ರಿಯ ವಿರಸ ಸ್ಮರಣೆಗೆ ಬಂತು. ಮುಖ ಕೆಂಪಡರಿತು. ಮಾತುಗಳನ್ನಾಡದೆ ಫಕ್ಕನೇ ಹೊರಳಿದ. ಆಗ ಅವಳು ಇದಿರ್ಬಂದು ಬಾಗಿಲೆಡೆ ತಡೆಯುವಂತೆ ನಿಂತಳು

"ಹೀಗೇಕೆ ಮಾಡುತ್ತೀ, ಕಾವೇರಿ?" ಅವನು ಕೋಪದಿಂದ ಕೇಳಿದ.

ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಳು.

"ಯಾಕೆ ಅಳುತಿದ್ದೀಯಾ?"

ಅವಳು ಕಣ್ಣುಗಳನ್ನೊರಸಿಕೊಂಡಳು.

"ದಾರಿ ಬಿಡು. ನನಗೆ ಹೋಗಬೇಕಾಗಿದೆ."

"ನಾನೂ ಬರುತ್ತೇನೆ" ಅವಳು ಬಿಸುಸುಯ್ದಳು.

"ನೀನೂ ಬರುತ್ತೀ?''

"ಹುಂ"

"ಏನು ನಿನಗೆ ಹುಚ್ಚು ಗಿಚ್ಚು ಹಿಡಿಯಿತೇ ಹೇಗೆ? ಮನೆಯಿಲ್ಲ ಮಾರಿಲ್ಲ. ನಾನು ಅದರ ವ್ಯವಸ್ಥೆಯನ್ನು ಇನ್ನೂ ಮಾಡಿಲ್ಲ''

"ನನಗೆ ಬೇಕಾಗಿಲ್ಲ''

"ಮತ್ತೆಲ್ಲಿ ಧರ್ಮಶಾಲೆಯಲ್ಲಿರುತ್ತೀ?"

"ನೀವೆಲ್ಲಿರುತ್ತೀರೋ ಅಲ್ಲಿ!''

"ಓಹೋಹೋ!" ಎಂದವನು ವ್ಯಂಗ್ಯವಾಗಿ ಗಹಗಹಿಸಿ ಹೇಳಿದ: "ಆಗಲಿ. ಆಗಲಿ. ಇನ್ನು ಎಂಟು ದಿನದೊಳಗೆ ಮನೆಯ ವ್ಯವಸ್ಥೆ ಮಾಡುತ್ತೇನೆ. ಮತ್ತೆ ನೀನು ಬರುವಿಯಂತೆ. ಸುಮ್ಮನೆ ಹುಡುಗಾಟ ಮಾಡಬೇಡ'' ಎಂದು ಹೇಳಿ ಹೋದ.

ಆದರೆ ಎಂಟು ದಿನಗಳೊಳಗೆ ಅವನು ಮನೆಯ ವ್ಯವಸ್ಥೆಯನ್ನು ಮಾಡಲಿಲ್ಲ. ಮಂಗಳೂರಿನಲ್ಲಿ ಒಂದು ಮನೆಯಿದೆ. ಅದೇ ಸಾಕು. ಅಲ್ಲಿಗೇ ಆಸ್ಪತ್ರೆಯನ್ನು ಸ್ಥಳಾಂತರಿಸುವುದು ಲೇಸು. ಇವಳ ಅಹಂಕಾರ ಇಳಿಯಲಿ ಎಂಬ ಸೇಡಿನ ಬುದ್ಧಿಯಿಂದ ಮಂಗಳೂರಿಗೆ ಹೋದ.

## ೧೫ ನೇಯ ಅಧ್ಯಾಯ

ಬೆಳ್ತಂಗಡಿಯಿಂದ ಓಡಿದ ನಾರಾಯಣ ಆ ದಿನ ಚಾರ್ಮಾಡಿಯಲ್ಲಿ ತಂಗಬೇಕಾಯಿತು. ಲಾರಿ ಚಾರ್ಮಾಡಿ ಗಟ್ಟ ಏರಲಿಲ್ಲ. ಮೋಟಾರಿನ ಯಂತ್ರ ಕೆಟ್ಟಿರಲಿಲ್ಲ. ಪೆಟ್ರೋಲಿನ ಕೊರತೆಯೂ ಅಲ್ಲ. ಮುಖ್ಯತಃ ಡ್ರೈವ ರನಿಗೆ ಪೆಟ್ರೋಲಿನ ಆಸೆ. ಈ ಚಾರ್ಮಾಡಿಯಲ್ಲಿ ಅದು ಯಥೇಚ್ಛ ಸಿಗುತ್ತದೆ. ತೆಂಗು, ತಾಳ ಮರಗಳ ಅವ್ವಲ್ ಕಳ್ಳು ಸಿಗುತ್ತದೆ. ಆಸುಪಾಸಿನ ಅರಣ್ಯ ದಲ್ಲಿ ಬೆಳೆದ ಈಂದ್ ಮರದ ಹೆಂಡವಂತೂ ಬಹಳ ಹೆರ್ದ್. ಅದನ್ನು ಹುಡುಕಿಕೊಂಡು ಹೋಗುವ ಅಗತ್ಯವೂ ಇಲ್ಲ. ಇಲ್ಲಿರುವ ಒಂದು "ಮಿಲಿಟರಿ ಹೋಟೇಲ್"ನಲ್ಲಿ ಅದು ಲಭಿಸುತ್ತದೆ. ಅದರೊಂದಿಗೆ ಮೀನು, ಏಡಿ, ಕೋಳಿ, ಆಡು, ಊರ ಹಂದಿ, ಮೊಲ ಅಡಿಗೆ ದಿನನಿತ್ಯ ಇದ್ದದ್ದೇ. ಒಮ್ಮೊಮ್ಮೆ ಬೇಟೆಗಾರರು ಚಿಗರಿ. ಬೆರಿಂಕ, ಕಾಡು ಹಂದಿ ಇತ್ಯಾದಿ ಕಾಡು ಪ್ರಾಣಿಗಳನ್ನು ಹೊಡೆದರೆ ಅದರ ಪಾಲು ಈ ಹೊಟೇಲಿಗೂ ಹೇಗೋ ಬರುತ್ತದೆ. ಆ ದಿನ ಅಲ್ಲಿ ದಿವ್ಯ ಭೋಜನ! ಹೊಟ್ಟೆ ತುಂಬ ತಿಂದು, ಸ್ಮೃತಿ ತಪ್ಪುವ ವರೆಗೆ ಕುಡಿದು ಅಲ್ಲೇ ಬಿದ್ದುಕೊಳ್ಳುತ್ತಾರೆ. ಮತ್ತೆ ಶಯ ನಕ್ಕೆ ರಂಭೆಯೂ ಸಿಗುತ್ತಾಳೆಂದು ಊರವರು ಗುಸುಗುಟ್ಟುತ್ತಾರೆ. ಅಂತೂ ಈ ಲಾರಿ ಡ್ರೈವರ್ ರಾತ್ರಿ ಅಲ್ಲೇ ಕ್ಯಾಂಪ್ ಹಾಕಿದ.

ಮಧ್ಯರಾತ್ರಿ. ಚಳಿ ಗಾಳಿ ಬೀಸುತ್ತದೆ ಬೇರೆ. ಕಣ್ಣು ತೂಕಡಿಸು ತ್ತದೆ. ಎಲ್ಲಿ ಮಲಗಬೇಕೆಂದು ಅವನಿಗೆ ತಿಳಿದಿಲ್ಲ. ಕ್ಲೀನರ್ ಬಂದು "ಹೊಟೇಲಿನ ಜಗಲಿಯಲ್ಲಿ ಮಲಗುತ್ತೀರಾ? ಎರಡು ಬೆಂಚುಗಳನ್ನು ಜೋಡಿಸಿ ಕೊಡುತ್ತೇನೆ" ಎಂದು ಹೇಳಿದ. ಹೋಗಬೇಕೋ ಬೇಡವೋ ಎಂದು ನಾರಾಯಣ ಗೊಂದಲಕ್ಕೀಡಾದ. ಪರವೂರು. ಪರಸ್ಥಳ. ಹೋಟೇ

ಲಿನವರ ಪರಿಚಯವೂ ಅವನಿಗಿಲ್ಲ. ಅವನ ಒಳ ಅಂಗಿಯ ಕಿಸೆಯಲ್ಲಿ ನೋಟುಗಳ ಕಟ್ಟೇ ಇದೆ. ಅವನು ಟ್ರಂಕಿನಲ್ಲಿ ಕೂಡ ಸ್ವಲ್ಪ ಹಣವಿಟ್ಟಿದ್ದಾನೆ. ರಾತ್ರಿ ಹೊತ್ತಿನಲ್ಲಿ ಅವನ ಕೈಯಿಂದ ದೋಚಿಕೊಂಡರೆ ಮಾಡುವುದೇನು? ಕುತ್ತಿಗೆ ಹಿಚುಕಿ, ಲಾರಿಯ ಮೇಲೆ ಹಾಕಿಕೊಂಡು, ರಾತ್ರಿ ಆ ಚಾರ್ಮಾಡಿ ಗಟ್ಟದ ಕೆಳಗೆ ಎಸೆದರೆ, ಹದ್ದು ಕಾಗೆಗಳಿಗೂ ಸಿಗುವುದು ಕಷ್ಟ! ಅವನು ಈ ಲಾರಿಯಲ್ಲಿ ಬಂದಿರುವುದನ್ನು ಕಂಡವರು ಯಾರು? ಯಾರಿಲ್ಲ. ಹೇಳ ಹೆಸರಿಲ್ಲದೆ ಹೋಗಬೇಕಾದೀತು! ಆದುದರಿಂದ ನಾರಾಯಣ ಬೆದರಿ "ಆ ಬೆಂಚಿನಲ್ಲಿ ತಗಣೆಯಿದೆ, ಅಷ್ಟಿಷ್ಟಲ್ಲ! ಈಗ ಎರಡು ಬಾಳೆಹಣ್ಣು ತಿನ್ನಲು ಕುಳಿತಾಗಲೇ ಕಚ್ಚಿದುವು. ಮಲಗಿದರೆ ಕಚ್ಚಿ ಕೊಂದೇ ಬಿಡುವುದು ಸೈ! ಬೇಡ, ದೇವರೇ! ನಾನು ಇಲ್ಲೇ ಒರಗುತ್ತೇನೆ" ಎಂದು ಹೇಳಿದ. ಮತ್ತು ಡ್ರೈವರನ ಎಡಬದಿಯಲ್ಲಿರುವ ಸೀಟಿನಲ್ಲೇ ಕುಳಿತುಕೊಂಡ. ಅಲ್ಲಿ ಇಬ್ಬರಿಗೆ ಕುಳಿತುಕೊಳ್ಳಲು ಸ್ಥಳವಿದ್ದುದರಿಂದ ಸ್ವಲ್ಪ ಮುದುಡಿಕೊಳ್ಳಲು ಸ್ಥಳವಾಯಿತು. ಆದರೆ ಎಲುಬಿಗೆ ಅಂಟಿದ ಭೀತಿಯಿಂದ ಅವನು ನಿದ್ರಾಪರವಶನಾಗಲಿಲ್ಲ. ಸುತ್ತುಮುತ್ತಲಿನ ಘೋರಾರಣ್ಯದಲ್ಲಿ ಯಾವುದೋ ಪ್ರಾಣಿಗಳು ಕೂಗುತಿದ್ದುವು. ಹತ್ತಿರದಲ್ಲೆಲ್ಲೋ ಗುಮ್ಮಗಳೆರಡು ಕುಳಿತು ಘೂಂ, ಘೂಂ ಘೂಂಕರಿಸುತಿದ್ದುವು. ಮರಗಳಿಗೆ ವಿದ್ಯುಚ್ಛಕ್ತಿಯ ಬಲ್ಬುಗಳನ್ನು ತೊಡಿಸಿ, ಆಗಾಗ ಸ್ವಿಚ್ ಒತ್ತಿ ತೆಗೆದಂತೆ ಮಿಂಚು ಹುಳಗಳ ಬೆಳಕು ಮಿನುಗುತಿದ್ದುದು ಅವನಿಗೆ ಆಗಾಗ ಕಾಣಿಸುತಿತ್ತು. ಅವನ ಭವಿಷ್ಯ ಜೀವನದ ದಾರಿಯಲ್ಲಿ ಕೂಡ ಬೆಳಕು ಹೀಗೆಯೇ ಇದೆಯಲ್ಲ!

ಬೆಳಕು ಹರಿಯಿತು! ನಾರಾಯಣ ಅಲ್ಲೇ ಹರಿಯುತಿದ್ದ ತೊರೆಯಲ್ಲಿ ಹಲ್ಲು ಮೋರೆ ತೊಳೆದುಕೊಂಡು ಬಂದ. ಡ್ರೈವರ್, ಕ್ಲೀನರರೂ ಅದೇ ಹೊತ್ತಿಗೆ ಬೆಂಚಿನ ಮೇಲೆ ಬಂದು ಕುಳಿತರು. ಅವರಿಗೆ ನಾರಾಯಣನದೇ ಚಹಾ ಸತ್ಕಾರವಾಯಿತು! ಅದರಿಂದ ಅವರು ತುಂಬ ಪ್ರಸನ್ನಚಿತ್ತರಾದರು. ನಾರಾಯಣನೊಡನೆ ಸಲಿಗೆಯಿಂದ ಮಾತುಕತೆ ನಡೆಸಿದರು. ಈ ಮಾತು ಅವರು ಪ್ರಯಾಣ ಮಾಡುತಿದ್ದಾಗ ರಸ್ತೆಯಂತೆ ಉದ್ದವಾಯಿತು. ನಾರಾಯಣ ತಾನೊಬ್ಬ ವೈದ್ಯನೆಂದೂ ಗಟ್ಟದಲ್ಲಿ ವೈದ್ಯಶಾಲೆ ತೆರೆಯಲು ಹೊರಟಿರುವೆನೆಂದೂ ತಿಳಿಸಿದ. ಎಲ್ಲಿ ಹೊಸದಾಗಿ ತೆರೆಯ್ಯ

ಬಹುದು ಎಂದು ಪ್ರಶ್ನಿಸಿದ. ಡ್ರೈವರ್‌ನಿಗೆ ಅದು ಗೊತ್ತೂ ಇದೆ. ವಾರ ಕ್ಕೆರಡು ಸಲ ಕಾಫಿ ಬೀಜ ಹೇರಿಕೊಂಡು ಅವನು ಮಂಗಳೂರಿಗೆ ಹೊರಡು ವನು. ಅವನ ಲಾರಿ ದಾರಿ ಮಧ್ಯೆ ಅನೇಕ ಊರುಗಳಲ್ಲಿ ಹಾದು ಹೋಗು ತ್ತದೆ. ಅನೇಕ ವರುಷಗಳಿಂದಲೂ ಇದೇ ಉದ್ಯೋಗದಲ್ಲಿ ನಿರತನಾಗಿರುವು ದರಿಂದ ಜನರ ಗುರುತು ಪರಿಚಯವೂ ಇದೆ. ಆದುದರಿಂದ ಅವನು ಸ್ವಲ್ಪ ಯೋಚಿಸಿ ನುಡಿದ :

"ಮೂಡುಗೆರೆಗೆ ಬರುತ್ತೀರಾ ?"

"ಅದು ಒಳ್ಳೇ ಸ್ಥಳ?"

"ಒಳ್ಳೇದೋ, ಕೆಟ್ಟದೋ, ಸ್ವಲ್ಪ ದೊಡ್ಡ ಊರು"

"ಅಲ್ಲಿ ಬೇರೆ ಡಾಕ್ಟರರಿಲ್ಲ?"

"ಇದ್ದರೆ ನಿಮಗೇನು? ನಿಮ್ಮ ಅದೃಷ್ಟ ಚೆನ್ನಾಗಿದ್ದರೆ ಆಗಿಯೇ ಆಗುತ್ತದೆ. ಊರಿನ ಸುತ್ತಲೂ ಅನೇಕ ಹಳ್ಳಿಗಳಿವೆ. ತೋಟಗಳಿವೆ. ಅಲ್ಲಿ ಸಾವಿರಾರು ಕೂಲಿಕಾರರಿದ್ದಾರೆ. ಮಲೆನಾಡೆಂದ ಬಳಿಕ ಸಾವಿರ ರೋಗ ಗಳು ಇದ್ದದ್ದೇ. ಡಾಕ್ಟರರ ಹತ್ತಿರ ಹೋದರೆ ತಲೆನೋವಿಗೂ "ಇಂಜೆ ಕ್ಷನ್" ಅಂತಾರೆ. ದುಡ್ಡು ಸೆಳೆಯುವುದೊಂದೇ ಗೊತ್ತು ಅವರಿಗೆ. ನಿಜವಾಗಿ ನೋಡಿದರೆ ನಿಮ್ಮಂಥ ಒಬ್ಬ ವೈದ್ಯರು ಬೇಕು ನಮ್ಮ ಊರಲ್ಲಿ"

"ನಿಮ್ಮ ಊರು ಅದೇ ಏನು ?"

"ನಮ್ಮ ಊರೆಂದರೆ ನಮ್ಮ ಊರು ಅಲ್ಲ. ನಾನು ಹುಟ್ಟಿದ ಊರು ತೋನ್ಸೆ, ಉಡುಪಿಯ ಹತ್ತಿರ. ಆದರೆ ಇದು ನಮ್ಮ ಧನಿಯರ ಊರು."

"ಯಾರು, ಧನಿಯರು?"

"ಬೋರೇಗೌಡರು. ದೊಡ್ಡ ಜನ. ಅವರಿಗೆ ಅನೇಕ ಕಾಫಿ ತೋಟಗಳಿವೆ. ಮೂಡುಗೆರೆಯಲ್ಲಿ ಆವರ ಬಂಗಲೆ. ಮೂರು ಲಾರಿಗಳಿವೆ. ಒಂದು ಟ್ಯಾಕ್ಸಿ ಇದೆ. ಅವರ ಕೈಕೆಳಗೆ ಸಾವಿರಾರು ಕೂಲಿಕಾರರಿದ್ದಾರೆ. ನೀವು ಅವರನ್ನು ಹಿಡಿದರೆ ನಿಮ್ಮ ಕೆಲಸವಾಗುತ್ತದೆ. ಅವರು ಒಳ್ಳೇ ಖುಷಿ ಯೊಳಗೆ ಇದ್ದಾಗ ನೀವು ಹೋಗಿ ಭೆಟ್ಟಿಯಾದರೆ ಬೇಕಾದ ಸಹಾಯ ಮಾಡಬಲ್ಲರು. ಎಂಥೆಂಥವರು ಅವರಿಂದ ಉದ್ಧಾರವಾಗಿ ಹೋದರು."

ನಾರಾಯಣನ ನಾಲಿಗೆಯಲ್ಲಿ ನೀರೂರಿತು. ಹಾಗೇ ಆಗಲೆಂದು

ಅವನು ಮೂಡುಗೆರೆಗೆ ಪ್ರಯಾಣ ಬೆಳಸಿದ. ಬೋರೇಗೌಡರು ಊರಲ್ಲಿರಲಿಲ್ಲ. ಆದರೂ ಅವನನ್ನು ನೂಕಲಿಲ್ಲ. ಅವರ ಬಂಗ್ಲೆಯ ಎಡ ಮಗ್ಗುಲಿಗೆ ಒಂದು ಧರ್ಮಶಾಲೆಯಂತಹ ಕಟ್ಟಡವಿದೆ. ಅದರ ಒಂದೆಡೆ ಟ್ಯಾಕ್ಸಿ, ಲಾರಿಗಳಿಗೆ ನಿಲ್ಲಲು ಸ್ಥಳ. ಅದರಲ್ಲಿ ಎರಡು ಮೂರು ಕೋಣೆಗಳೂ ಇವೆ. ಒಮ್ಮೊಮ್ಮೆ ಡ್ರೈವರರು ಅಲ್ಲಿ ಉಳಿದುಕೊಳ್ಳುವರು. ತೋಟದ ಗುಮಾಸ್ತರು, ಮೇಸ್ತ್ರಿಗಳು ಧನಿಯರನ್ನು ಕಾಣಲು ಮೂಡುಗೆರೆಗೆ ಬಂದಾಗ ತಂಗುವುದೂ ಅಲ್ಲೇ. ಪರವೂರಿಂದ ಬಂದವರಿಗೂ ಅದೇ ಕೋಣೆಯನ್ನು ಬಿಟ್ಟುಕೊಡುವರು. ಅದರಂತೆ ನಾರಾಯಣನೂ ಆ ಕೋಣೆಗೆ ಹೊಕ್ಕ. ತನ್ನ ಟ್ರಂಕು, ಸಣ್ಣ ಹಾಸಿಗೆ, ಚೀಲಗಳನ್ನು ಕೋಣೆಯಲ್ಲಿರಿಸಿದ. ಮಧ್ಯಾಹ್ನದ ಬಿಸಿಲು ಹೊತ್ತಾದರೂ ಅವನಿಗೆ ಸ್ವಲ್ಪ ಚಳಿಯೆನ್ನಿಸಿತು. ಅವನು ಸ್ನಾನವನ್ನೇ ಮಾಡಲಿಲ್ಲ. ಕೈ ಕಾಲು ತೊಳೆದುಕೊಂಡು ಬಂದು ಗಂಜಿ ಮಾಡಿದ. ರಾತ್ರಿ ನಿದ್ದೆ ತೊರೆದಿದ್ದುದರಿಂದ ಮೈ ಜಡವಾದಂತಿತ್ತು. ಲಾರಿಯಲ್ಲಿ ಪ್ರಯಾಣ ಮಾಡಿದುದರಿಂದ ಕೈ ಮೈ ಜಜ್ಜಿದಂತಿತ್ತು. ಆದುದರಿಂದ ತನ್ನ ಹಾಸಿಗೆ ಬಿಡಿಸಿ ನಿದ್ದೆ ಹೋದ. ಸಾಯಂಕಾಲ ಎಚ್ಚರವಾದ ಬಳಿಕ ಈ ಊರನ್ನು ನೋಡಲು ಆಸೆಯಾಯಿತು ಅವನಿಗೆ.

ಊರು ಮೂಡು-ಪಡು ನೀಡಿಕೊಂಡಿದೆ. ಮೂಡು ಕಡೆಯಲ್ಲಿರುವ ಚಿಕ್ಕ ಮಗಳೂರಿನಿಂದ ಪಡು ಕಡಲಿನ ಮಂಗಳೂರಿಗೆ ತೆರಳುವ ರಸ್ತೆ ಮೂಡುಗೆರೆಯಲ್ಲಿ ಹಾದಿದೆ. ಆದರೆ ರಸ್ತೆಯ ಒಮ್ಮಗ್ಗುಲಲ್ಲಿ ಮಾತ್ರ ಮನೆಗಳು. ಇನ್ನೊಂದು ಮಗ್ಗುಲಲ್ಲಿ ತಗ್ಗು ಭೂಮಿ. ತೆಂಕು ಬದಿಯಲ್ಲಿರುವ ಏರಿನಲ್ಲಿ ನೂರಾರು ಮನೆಗಳು. ಕೆಲವು ಮುಳಿ ಹುಲ್ಲಿನವು. ಅನೇಕ ಮನೆಗಳಿಗೆ ಮಂಗಳೂರು ಹಂಚು ಹೊದಿಸಲಾಗಿದೆ. ಊರಿನ ಕುಂಬಾರರು ತಯಾರಿಸಿದ ದಂಬೆ ಓಡುಗಳನ್ನು ಕೆಲವು ಮನೆಗಳಿಗೆ ಹೊದೆಸಿರುವರು. ಮನೆಗಳ ಮಧ್ಯೆ ಹಲವು ಸಣ್ಣ ರಸ್ತೆಗಳಿವೆ. ರಸ್ತೆಗಳ ಮಗ್ಗುಲಿಗೆ ಒಂದೆರಡು ಕೋಣೆಗಳ ಸಾಲು ಮನೆಗಳಿವೆ. ಇದಿರಿನ ಕೋಣೆ ಅಂಗಡಿಯಾಗಿ ಹಿಂದಿನ ಕೋಣೆ ಮನೆಯಾಗಿರುವದೂ ಉಂಟು. ಸ್ವಲ್ಪ ದೂರದಲ್ಲಿ ಕಂಪೌಂಡ್ ಗೋಡೆಯೊಳಗೆ ಒಂದೊಂದೇ ಬಂಗಲೆಗಳು ಕೆಲವು ಇವೆ. ಈ ಊರಿನ ಆಚೆ ತಗ್ಗು ಗದ್ದೆ. ಅದರ ಆಚೆ ಗುಡ್ಡ, ಕಾಡು, ಅರಣ್ಯ. ಊರಿನ ಸುತ್ತಲೂ ಅರಣ್ಯವೇ

ಕಾಣಿಸುತ್ತದೆ. ಮಲೆಯ ಮಧ್ಯೆ ಊರು ಹುದುಗಿದಂತಿದೆ. ಮಲೆಯಿಂದ ಬೀಸುತ್ತಿರುವ ಗಾಳಿಯಲ್ಲಿ ಏನೋ ಒಂದು ಪರಿಮಳ ಬೆರೆತಿದೆ. ಅದನ್ನು ಆಘ್ರಾಣಿಸಿದ ನಾರಾಯಣ ಮನೋಲ್ಲಾಸ ಹೊಂದಿದ. ಹಸುರು ಗಿಡ ಮರಗಳಿಂದ ಕಂಗೊಳಿಸುವ ಊರು ಚೆಲುವಾಗಿದೆ! ಬಾವಿಕಟ್ಟೆಯಲ್ಲಿ ನೀರೆಳೆಯುತ್ತಿದ್ದ ಕೆಲವು ನಾರಿಯರೂ ಅವನಿಗೆ ಸುಂದರಿಯರಾಗಿಯೇ ತೋರಿದರು.

ಬೋರೇಗೌಡರು ಉದಾರರು. ಊರಿನಲ್ಲಿ ಅವರ ಹೆಸರೂ ಇದೆ. ಆದುದರಿಂದ ಅವರು ಹೇಳಿ ಕಳಿಸುವುದೇ ತಡ, ರಸ್ತೆಯ ಅಂಚಿಗಿರುವ ಒಂದು ಖಾಲಿ ಅಂಗಡಿ ದೊರೆಯಿತು. ಒಂದೇ ಕೋಣೆ. ಸ್ಥಳ ವಿಶಾಲವಾಗಿದೆ. ತತ್ಕಾಲಕ್ಕೆ ಅವನಿಗೆ ಅಷ್ಟು ಸಿಕ್ಕಿದುದೇ ಪುಣ್ಯ! ಆದುದರಿಂದ ಅವನು ಒಪ್ಪಿಕೊಂಡ. ಧನಿಯರೇ ಅವನಿಗೆ ಎರಡು ಬೆಂಚುಗಳನ್ನು ಕೊಟ್ಟರು. ಮಲೆಯ ಮನೆಯಲ್ಲಿ ಬಿದ್ದಿದ್ದ ಒಂದು ಹಳೇ ಕಪಾಟು, ಕುರ್ಚಿ, ಮೇಜುಗಳನ್ನು ಲಾರಿಯಲ್ಲಿ ತರಿಸಿಕೊಟ್ಟರು. ಆಳುಗಳು ಸುಣ್ಣ ಬಳಿದರು. ತೂತು ಬಿದ್ದಿದ್ದ ನೆಲಕ್ಕೆ ಅಲ್ಲಲ್ಲಿ ಸಿಮೆಂಟಿನ ಒಪ್ಪ ಕೊಡಲಾಯಿತು. "ಧನ್ವಂತರಿ ವೈದ್ಯಶಾಲಾ" ಎಂದು ಬರೆಸಿದ ಬೋರ್ಡನ್ನು ಅವನು ತೂಗ ಹಾಕಿದ. ಕೂಡಲೇ ಅವನು ವೈದ್ಯಕೀಯ ವೃತ್ತಿಯನ್ನು ಆರಂಭಿಸಬಹುದಿತ್ತು. ಆದರೆ ಅದು ಅವನಿಗೆ ಉಚಿತವೆನಿಸಲಿಲ್ಲ. ತನಗೆ ಉಪಕಾರ ಮಾಡಿದ ಧನಿಯರಿಂದ ಅದರ ಪ್ರಾರಂಭೋತ್ಸವವನ್ನು ನೆರವೇರಿಸುವ ಆಸೆಯಾಯಿತು. ಹಾಗೆ ಮಾಡಿದರೆ ಊರಿನ ಹತ್ತು ಸಮಸ್ತರಿಗೆ ಗೊತ್ತಾಗುತ್ತದೆ! ಆ ಸಮಾರಂಭಕ್ಕೆ ಊರಿನ ಗಣ್ಯ ಮಹನೀಯರನ್ನೂ ಆಮಂತ್ರಿಸುವದು ಒಳ್ಳೇದು. ಆದರೆ ಬಾಯಿ ಮಾತಿನ ಆಮಂತ್ರಣಕ್ಕೆ ಅಧಿಕಾರಿಗಳು, ಶ್ರೀಮಂತರು ಬೆಲೆ ಕೊಡಲಾರರು! ಸ್ವಲ್ಪ ಡಂಭಾಚಾರ ಮಾಡಬೇಕು ಎಂದು ಅವನು ಯೋಚಿಸಿ, ಚಿಕ್ಕಮಗಳೂರಿಗೆ ತೆರಳಿ "ಆಮಂತ್ರಣ ಪತ್ರಿಕೆ"ಯನ್ನು ಮುದ್ರಿಸಿಕೊಂಡು ಬಂದ. ಬೋರೇಗೌಡರ ಮನೆ ಆಳು ಅದನ್ನು ಅಧಿಕಾರಿಗಳಿಗೆ, ಊರಿನ ಆಢ್ಯ ಗೃಹಸ್ಥರಿಗೆ, ವ್ಯಾಪಾರಿಗಳಿಗೆ, ಡಾಕ್ಟರರಿಗೆ, ಶಾಲಾ ಮಾಸ್ತರರಿಗೆ ಹಂಚಿ ಬಂದ.

ಶ್ರೀ ಬೋರೇಗೌಡರ ಅಧ್ಯಕ್ಷತೆಯಲ್ಲಿ ಒಂದು ದಿನ ಸಾಯಂಕಾಲ ಧನ್ವಂತರಿ ವೈದ್ಯಶಾಲೆಯ ಪ್ರಾರಂಭೋತ್ಸವ ಕಾರ್ಯಕ್ರಮ ಆರಂಭವಾ

ಯಿತು. ಮೊದಲು ನಾರಾಯಣ ಪ್ರಾಸ್ತವಿಕವಾಗಿ ನಾಲ್ಕು ಮಾತುಗಳನ್ನಾಡಿದ. ಊರಿನ ಶಾಲಾ ಮಾಸ್ತರರು "ನಾರಾಯಣ ವೈದ್ಯರ" ಪರಿಚಯ ಮಾಡಿಕೊಟ್ಟರು. "........ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು ಎಂಬ ಕನ್ನಡ ನಾಣ್ಣುಡಿಯನ್ನು ನೀವು ಕೇಳಿರುವಿರಿ. ನಮ್ಮ ಈ ನಾರಾಯಣ ವೈದ್ಯರೂ ಹಾಗೆಯೇ. ಸಣ್ಣ ವಯಸ್ಸಿನಲ್ಲೇ ಅವರು ಕರ್ನಾಟಕದ ಪ್ರಸಿದ್ಧ ಪುರುಷರಾದ ಪಂಡಿತ ತಾರಾನಾಥರಾಯರಲ್ಲಿ ತೆರಳಿ ವೈದ್ಯಶಾಸ್ತ್ರವನ್ನು ಅಭ್ಯಾಸ ಮಾಡಿದರು. ಆ ಮೇಲೆ ಕಾಶಿ, ಕಾಶ್ಮೀರ್‌ಗಳಿಗೆ ತೆರಳಿ ಹಿಮಾಲಯದಲ್ಲಿರುವ ಗಿಡಮೂಲಿಕೆಗಳನ್ನು ನೋಡಿ ಬಂದರು. ಕಳೆದ ವರ್ಷ ನಮ್ಮ ಈ ಬಾಬು ಬುಡಾನ್ ಗಿರಿಗೂ ಹೋಗಿದ್ದರಂತೆ! ಇಂಥ ಉತ್ಸಾಹೀ ವೈದ್ಯರು ನಮ್ಮಲ್ಲಿಗೆ ಬಂದಿದ್ದಾರೆ. ಅವರಿಗೆ ನಾವು ತನು ಮನ ಧನಗಳಿಂದ ಸಹಾಯ ಸಲ್ಲಿಸಬೇಕು" ಎಂದು ಹೇಳಿದರು. ತದನಂತರ ಅಧ್ಯಕ್ಷರು ಕರತಾಡನಗಳ ಮಧ್ಯೆ ಎದ್ದು ನಿಂತರು. "ಮಹನೀಯರೇ, ನನಗೆ ಭಾಷಣ ಮಾಡಲಿಕ್ಕೆ ಬರುವದಿಲ್ಲ. ಇಷ್ಟರವರೆಗೆ ಮಾಡಿಲ್ಲ. ಆದರೂ ನಾರಾಯಣ ವೈದ್ಯರು ಪ್ರೀತಿಯಿಂದ ಕರೆದುದಕ್ಕಾಗಿ ಬಂದಿದ್ದೇನೆ. ಇಲ್ಲಿ ಒಂದು "ಆಸ್ಪತ್ರೆ" ತೆಗೆಯಲು ಅವರು ಬಂದರು. ನಾವು ನಮ್ಮ ಕೈಲಾದ ಸಹಾಯ ಮಾಡಿರುತ್ತೇವೆ. ಈಗಿನ ಕಾಲದಲ್ಲಿ ನಮ್ಮ ಈ ಆಯುರ್ವೇದವನ್ನು ಯಾರೂ ಕೇಳುವದಿಲ್ಲ. ಸರಕಾರದವರೂ ಅದಕ್ಕೆ ಪ್ರೋತ್ಸಾಹ ಕೊಡುವದಿಲ್ಲ. ಜನರಿಗೂ ಅದರ ಮೇಲೆ ತಾತ್ಸಾರ. ಇದು ಒಳ್ಳೆಯದಲ್ಲ. ಪ್ರಾಚೀನ ಕಾಲದಿಂದ ಬಂದಿರುವ ಈ ದೊಡ್ಡ ಶಾಸ್ತ್ರವನ್ನು ನಾವು ಮರೆಯಬಾರದು. ನಮ್ಮ ತೋಟದಲ್ಲಿ, ಗುಡ್ಡದಲ್ಲಿ ಎಷ್ಟೋ ನಾರು ಬೇರುಗಳಿವೆ. ಬಹಳ ಸುಲಭದಲ್ಲಿ ಅವು ಸಿಗುತ್ತವೆ. ಅದನ್ನು ತಂದು ಕುಟ್ಟಿ, ಕಷಾಯ ಮಾಡಿ ಕುಡಿದರೆ ಎಷ್ಟೋ ರೋಗಗಳು ಗುಣವಾಗುತ್ತವೆ. ನಮ್ಮ ಅಜ್ಜ ಮುತ್ತಜ್ಜ ಎಲ್ಲ ಸರ್ಕಾರಿ ಆಸ್ಪತ್ರೆಗೆ ಹೋಗುತ್ತಿದ್ದರೇನು? ನೆಗಡಿ ಶೀತ ಬಂದರೆ ಇಂಜೆಕ್ಷನ್ನೇ ತೆಗೆದುಕೊಳ್ಳುತಿದ್ದರೇನು? ಇದೆಲ್ಲ ದುಡ್ಡು ದಂಡ. ಪರದೇಶದವರು ಇಲ್ಲಿಗೆ ಬಂದು ನಮ್ಮ ಹಣ ಸುಲಿಯಲು ಮಾಡಿದ ಉಪಾಯ. ಅಂದರೆ ನಾನು ಬೇರೆ ಡಾಕ್ಟರರನ್ನು ದೂರುತ್ತೇನೆಂದು ನೀವು ತಿಳಿಯಬೇಡಿರಿ. ಶ್ರೀಮಂತರಾದವರು ಅದೇ ಔಷಧ ತೆಗೆದುಕೊಳ್ಳಲಿ.!

ಆದರೆ ಬಡವರಿಗೆ ಈ ಆಯುರ್ವೇದ ಔಷಧಿಯೇ ಒಳ್ಳೇದು. ಬಡವರ ಸೇವೆ ಮಾಡಬೇಕೆಂಬ ಉತ್ಸಾಹ ನಮ್ಮ ವೈದ್ಯರಲ್ಲಿದೆ. ಇಂಥ ಉತ್ಸಾಹೀ ತರುಣರು ನಮ್ಮ ಈ ಕುಗ್ರಾಮಕ್ಕೆ ಬಂದುದು ಅದು ಊರಿನವರ ಭಾಗ್ಯ. ಏಕೆಂದರೆ ಈಗಿನ ಕಾಲದಲ್ಲಿ ಎಲ್ಲರೂ ಹಳ್ಳಿಯಿಂದ ಪೇಟೇಗೇ ತೆರಳುತ್ತಾರೆ. ಇಂಥ ಪರಿಸ್ಥಿತಿಯಲ್ಲಿ ನಾರಾಯಣ ವೈದ್ಯರು ಇಲ್ಲಿಗೆ ಬಂದುದು ಏನೋ ಅಂತಾರಲ್ಲ ಅದು, ಹಾಂ, ಪೂರ್ವಜನ್ಮದ ಸುಕೃತ ಎಂದು ಭಾವಿಸುತ್ತೇನೆ. ಆ ಚಾಮುಂಡಿದೇವಿ ಅವರನ್ನು ರಕ್ಷಿಸಲಿ!"

ಪ್ರಚಂಡ ಕರತಾಡನಗಳ ಸದ್ದು ಅಡಗಿದ ಮೇಲೆ ಆಭಾರ ಮನ್ನಿಸಲು ಎದ್ದ ನಾರಾಯಣ ಬಡವರ ಸ್ಥಿತಿಗತಿಯನ್ನು ಆವೇಶದಿಂದ ವರ್ಣಿಸಿದ. ಅವರ ಸೇವೆಯೇ ತನ್ನ ಮನೋಧರ್ಮವೆಂದು ನುಡಿದ. ವಾರದಲ್ಲಿ ಒಂದು ದಿನ ಧರ್ಮಾರ್ಥ ಚಿಕಿತ್ಸೆ ನಡೆಸುವದಾಗಿಯೂ ಸಾರಿದ. ಶ್ರೀ ಬೋರೆಗೌಡರ ಉಪಕಾರವನ್ನು ಏಳೇಳು ಜನ್ಮದಲ್ಲೂ ಸಲ್ಲಿಸಲಾಗದು ಎಂದು ಅವರನ್ನು ತಲೆಯ ಮೇಲೆ ಹೊತ್ತುಕೊಂಡ. "ನನಗೆ ಡಾಕ್ಟರಿಕೆಯೂ ಬರುತ್ತದೆ. ಬೆಂಗಳೂರಿನ ಡಾ|| ಮೂರ್ತಿಯವರಲ್ಲಿ ಎರಡು ವರುಷ ಅವರ ಅಸಿಸ್ಟಂಟ್ ಆಗಿ ಅನುಭವ ಗಳಿಸಿದ್ದೇನೆ'' ಎಂದು ಹೇಳಿದ. ಕೂಡಿದ ಜನರು ತಲೆದೂಗಿದರು.

ಆಗ ಬೋರೇಗೌಡರು "ಆ ಕೆಂಪೇಗೌಡ ರಸ್ತೆಯಲ್ಲಿರುತ್ತಾರಲ್ಲ, ಅವರೇನು?'' ಎಂದು ಪ್ರಶ್ನಿಸಿದರು.

"ಹೌದು, ಹೌದು! ಅವರೇ!"

"ಓಹೋಹೋ! ಅವರನ್ನು ನಾನು ಬಲ್ಲೆ. ನನಗೆ ಚೆನ್ನಾಗಿ ಗೊತ್ತು. ಬಹಳ ಒಳ್ಳೆಯ ಜನ. ಬಹಳ ಒಳ್ಳೆಯದಾಯಿತು'' ಎಂದರು. ಹಾರ ತುರಾಯಿಗಳ ಅರ್ಪಣೆ, ಚಹಾ ಸತ್ಕಾರಗಳೊಂದಿಗೆ ಅಂದಿನ ಸಮಾರಂಭ ಅತ್ಯಂತ ಯಶಸ್ವಿಯಾಗಿ ನೆರವೇರಿತು. ಹೀಗೆ ನಾರಾಯಣ ಮೂಡುಗೆರೆಯಲ್ಲಿ ಧ್ವಜ ಊರಿದ.

ನಾರಾಯಣ, ಧನ್ವಂತರಿ ಆಯುರ್ವೇದ ವೈದ್ಯಶಾಲೆಯನ್ನು ಆರಂಭಿಸಿದನೇನೋ ನಿಜ. ಆದರೆ ಸ್ವತಃ ಅವನು ಆಯುರ್ವೇದ ಶಾಸ್ತ್ರವನ್ನು ಅರಿತವನಲ್ಲ. ಆ ಶಾಸ್ತ್ರದ ಪ್ರಕಾರ ರೋಗ ಪರೀಕ್ಷೆ, ರೋಗ ಚಿಕಿತ್ಸಾ

ವಿಧಾನ, ಔಷಧ ಪ್ರಯೋಗ, ಪಥ್ಯ ಇತ್ಯಾದಿ ಕ್ರಮಗಳೂ ಅವನಿಗೆ ಗೊತ್ತಿಲ್ಲ. ನಾರು ಬೇರುಗಳ ಗುರುತಿಲ್ಲ. ಗುಳಿಗೆ, ಕಷಾಯ, ಭಸ್ಮಗಳ ಪರಿಜ್ಞಾನವಂತೂ ಸೊನ್ನೆಯೇ. ಆಸಂಪರಾಯನಲ್ಲಿ ಕಂಪೌಂಡರ್ ಕೆಲಸ ಮಾಡಿದಾಗ ಅವನು ಬರೆವ ಚೀಟಿಯನ್ನು ಓದಿ, ಕಪಾಟನಲ್ಲಿ ಲೇಬಲ್ ಅಂಟಿಸಿದ ಆ ಔಷಧಗಳ ಬಾಟ್ಲಿ ತೆಗೆದು, ಸಪ್ರಮಾಣದಲ್ಲಿ ಔಷಧ ಕೊಡುವ ಕೆಲಸ ಮಾಡಿದವನು. ಆ ಚೀಟಿ ಓದಿ ಓದಿ, ಇಂಥ ರೋಗಕ್ಕೆ ಇಂಥ ಔಷಧವೆಂಬ ಅನುಭವ ದೊರೆತಿದೆ ಲೇಬಲ್ ಹಚ್ಚಿದ ಬಾಟ್ಲಿಯ ಔಷಧ, ಗುಳಿಗೆಗಳನ್ನು ಕಂಡು ಇವು ಇಂಥಿಂಥ ಔಷಧಗಳೆಂದು ಮನನ ಮಾಡಿ ಕೊಂಡಿರುವನು. "ಇಂಥ ಇಂಜೆಕ್ಷನ್ ಟ್ಯೂಬ್ ತೆಗೆದು ಕೊಡು" ಎಂದು ಡಾಕ್ಟರ್ ಹೇಳಿದುದನ್ನು ಕೇಳಿ ಕೇಳಿ ಇಂಥ ರೋಗಕ್ಕೆ ಇಂಥ ಇಂಜೆಕ್ಷನ್ ಚುಚ್ಚಬೇಕೆಂದು ಗ್ರಹಿಸಿರುವನು. ಡಾಕ್ಟರ್ ಇಲ್ಲದ ವೇಳೆ ಒಮ್ಮೊಮ್ಮೆ ಅವನು ಈ ಮೊದಲೇ ಬರೆದಿದ್ದ ಚೀಟಿ ನೋಡಿ ಅದೇ ಔಷಧ ಕೊಡುತ್ತಿದ್ದ. "ಇಂಜೆಕ್ಷನ್". ಕೂಡ ಚುಚ್ಚುತ್ತಿದ್ದ. ಈ ಅನುಭವವೇ ಅವನ ಬಂಡವಾಳ. ಆದುದರಿಂದ ಅವನೆದೆ ಪುಕು ಪುಕು ಹಾರುತಿತ್ತು.

ಆದರೆ ಬೆಳ್ತಂಗಡಿಯಂತೆ ಮೂಡುಗೆರೆ ಮಲೆನಾಡಿನ ಹಳ್ಳಿ. ಬೆಳ್ತಂಗಡಿ ಮಲೆಯ ಸೆರಗಿನಲ್ಲಿದ್ದರೆ ಇದು ಇನ್ನೂ ಒಳಗೆ, ಮಲೆಯ ಮಧ್ಯದಲ್ಲಿದೆ. ಮಲೆನಾಡಿನ ರೋಗಗಳೇ ಇಲ್ಲಿ ಬಹಳ. ಆ ಊರಿಗಿಂತ ಸ್ವಲ್ಪ ಜಾಸ್ತಿಯೇ ಸರಿ. ಮಲೆ ಜ್ವರ, ಶೀತ, ನೆಗಡಿ, ಕೆಮ್ಮು, ಕಾಮಣಿ, ವಾತಪಿತ್ಥ, ಅತಿ ಸಾರ ರೋಗಗಳು ಪ್ರಬಲವಾಗಿವೆ. ಅಲ್ಲಿಗಿಂತ ಇಲ್ಲಿ ಅತಿ ಹೆಚ್ಚಾಗಿರುವುದು ಜಲೋದರ! ಇವೆಲ್ಲ ಸಾಮಾನ್ಯ ರೋಗಗಳಾಗಿದ್ದುದರಿಂದ ನಾರಾಯಣ ನಿಗೆ ಕಷ್ಟವಾಗಿ ಪರಿಣಮಿಸಲಿಲ್ಲ. ಅಲ್ಲದೆ ಅವನು ಹೊಸತಾಗಿ ಬಂದಿರುವನು. ಬರುವ ರೋಗಿಗಳು ಕಡಿಮೆ. ಮಳೆಗಾಲ ಬೇರೆ. ಬೆಳ್ತಂಗಡಿಗಿಂತಲೂ ಇಲ್ಲಿ ಮಳೆ ಬಹಳ. ತಲೆ ಹೊರಗೆ ಹಾಕುವಂತಿರಲಿಲ್ಲ. ಆದುದರಿಂದ ನಾರಾಯಣ ಮಂಗಳೂರು, ಬೆಂಗಳೂರು ಮೊದಲಾದ ಕಡೆ ಇರುವ ಆಯುರ್ವೇದ ಆಶ್ರಮಗಳಿಗೆ ಪತ್ರ ಹಾಕಿ ಅನೇಕ ಕ್ಯಾಟಲಾಗುಗಳನ್ನು ತರಿಸಿಕೊಂಡ. ಅದರಲ್ಲಿ ಸೂಚಿಸಲಾದ ಅನೇಕ ಔಷಧಗಳು ಅವನಿಗೆ ಅವಶ್ಯ ಕಂಡುವು. ಆದುದರಿಂದ ಮಳೆಗಾಲದಲ್ಲಿ ಒಂದು ದಿನ ಅವನು ಮಂಗಳೂರಿಗೆ ಪ್ರಯಾಣ

ಬೆಳಸಿದ.

ಮಂಗಳೂರಿನಿಂದ ಮರಳುವ ಮೊದಲು ವಾಸಂತಿಯನ್ನು ಕಾಣಲು ಅವನಿಗೆ ಆಸೆಯಾಯಿತು! ಅವಳು ಇನ್ನೂ ಇದ್ದಾಳೋ ಇಲ್ಲವೋ ಎಂಬ ಸಂದೇಹ. ಇದ್ದರೆ ಒಬ್ಬಳೆ ಇದ್ದಾಳೋ ಇಲ್ಲವೋ! ಎಲ್ಲಾದರೂ ಆನಂದ ರಾಯ ಬಂದಿದ್ದರೆ ಹೇಗೆ? ಅವನ ಹೆಸರು ನೆನಪಾದರೆ ನಾರಾಯಣನಿಗೆ ಭಯ. ತನ್ನನ್ನು ಕಂಡರೆ ಆನಂದರಾಯ ಸುಮ್ಮನೆ ಹೋಗಗೊಡಲಾರ! ಹಿಂದೆ ತನ್ನ ಅಪರಾಧವಿಲ್ಲದೆ ಇದ್ದಾಗಲೇ ಅವನು ಹೊಡೆದಿದ್ದ. ಈಗ ಲಂತೂ ನಾರಾಯಣನ ನೆರಳು ಕಂಡರೆ ಹಾವಿನಂತೆ ಓಡಿಸಿಕೊಂಡು ಬರು ವುದೇ ಸೈ! ಕೈಕಾಲು ಮುರಿದು ಹಾಕಲು ಅವನು ಹೇಸುವವನಲ್ಲ. ಕೋಪದ ಭರದಲ್ಲಿ ತಲೆಗೆ ಹೊಡೆದರೂ ಹೊಡೆವನೇ! ಬೂಟುಗಾಲಿನಿಂದ ಒದ್ದರೂ ಒದ್ದನೇ! ಅಂಥ ಸಂದರ್ಭದಲ್ಲಿ ಏನಾಗುತ್ತದೋ ಏನೋ! ಹಿಂದಿನ ಹಾಗೆ ಈಗ ನಾರಾಯಣನೂ ಸುಮ್ಮನಿರಲಾರ! ಜಗಳದಲ್ಲಿ ಅನರ್ಥವೇ ಸಂಭವಿ ಸಬಹುದು. ದೂರದ ಮಾರಿಯನ್ನು ಮೈಮೇಲೆ ಎಳೆದುಕೊಳ್ಳುವುದು ಸರಿ ಯಲ್ಲ. ಆದುದರಿಂದ ನಾರಾಯಣ ಕತ್ತಲೆ ಪಸರಿಸಿದ ಮೇಲೆ ಕಳ್ಳನಂತೆ ಹೆಜ್ಜೆಯನ್ನಿಕ್ಕುತ್ತ ವಾಸಂತಿಯ ಮನೆಗೆ ಬಂದ. ಆನಂದರಾಯನಿಲ್ಲವೆಂದು ತಿಳಿದು ಅವನು ಸಂಕಟದಿಂದ ಪಾರಾದವನಂತೆ ನಿಟ್ಟುಸಿರಿಟ್ಟ.

ವಾಸಂತಿ ಎಲ್ಲ ಕಥೆಯನ್ನು ಅರುಹಿದಳು. ನಾರಾಯಣ ಓಡಿಹೋದ ಬಳಿಕ ಆನಂದರಾಯ ಮಂಗಳೂರಿಗೆ ಬಂದು ರೌದ್ರಾವತಾರ ತಾಳಿದುದ ನ್ನೆಲ್ಲ ಹೇಳಿದಳು. "ನಿನ್ನಿಂದಾಗಿ ನನ್ನ ಮೇಲೆ ಕೂಡ ಅವರಿಗೆ ಸಂಶಯ! ನನಗೂ ನಾಲ್ಕು ಏಟುಗಳು ಬಿದ್ದುವು!" ಎಂದಳು.

"ನನಗೂ ಬಿತ್ತು" ಎಂದು ಅವನು ಹೇಳಿದ.

"ನಿನಗೂ ಹೊಡೆದರೇ?"

"ಹೊಡೆಯುವುದೇನು? ಕೈಕಾಲು ಮುರಿಯುವುದೊಂದು ಬಾಕಿ. ಬೂಟುಗಾಲಿನ ಪ್ರಸಾದವೂ ಆಯಿತು. ಬೇಸರ ಬಂದು ನಾನು ಹೋದೆ"

"ಹೋಗುವವನು ಔಷಧ, ಹಣ ಎಲ್ಲವನ್ನೂ ಯಾಕೆ ದೋಚಿ ಕೊಂಡು ಹೋಗಬೇಕಿತ್ತು?"

"ನನಗೆ ಮೂರು ನಾಲ್ಕು ತಿಂಗಳ ಸಂಬಳ ಬರಬೇಕಿತ್ತು!"

"ಇಲ್ಲವೆಂದು ಹೇಳುತ್ತಾರಲ್ಲ !"

"ಅವನು ಬೇಕಾದ್ದು ಹೇಳುತ್ತಾನೆ. ನಿನಗೆ ಅವನ ಮೇಲೆ ವಿಶ್ವಾಸ''

"ಆಗಲಿ. ಸಂಬಳ ಬಾಕಿ ಇತ್ತೆಂದೇ ತಿಳಿಯೋಣ ! ಹಾಗಿದ್ದರೆ ಕಳವು ಯಾಕೆ ಮಾಡಬೇಕಾಗಿತ್ತು ?''

ನಾರಾಯಣ ನಿರುತ್ತರನಾದ.

"ಅವರು ಇಲ್ಲಿ ಬಂದು ಅಷ್ಟು ಬೈದರು. ಆಯಿತು, ಹೋಯಿತು. ಬೈದ ಮಾತು ಗಾಳಿಗೆ ಹೋಯ್ತು ಬಿಡು. ನಾಲ್ಕು ಹೊಡೆದಾಕ್ಷಣ ನಾನೂ ಸಾಯಲಿಲ್ಲ. ಆದರೆ ಮಾತು ಎಲ್ಲಿಂದ ಎಲ್ಲಿಗೆ ಹತ್ತಿತು ನೋಡು. ಪೋಲೀಸರಿಗೆ ತಿಳಿಸುತಿದ್ದರೆ ನೀನು ಈಗ ಜೈಲಲ್ಲಿರಬೇಕಾಗಿತ್ತು" ಎಂದು ಪರಿತಪಿಸಿದಳು.

ನಾರಾಯಣ ಹೊರಡಲನುವಾದ. "ಈ ರಾತ್ರಿ ಇದ್ದು ಹೋಗು'' ಎಂದು ಅವಳು ಎಷ್ಟು ಹೇಳಿದರೂ ಅವನು ಒಪ್ಪಲಿಲ್ಲ. "ನೀನು ಈಗ ಎಲ್ಲಿರುತ್ತೀ ? ಏನು ಮಾಡುತ್ತೀ ?'' ಎಂದು ಅವಳು ಕೇಳಿದಳು. "ನೀನು ಅವನೊಡನೆ ಹೇಳಿ ಬಿಡುತ್ತೀ. ಇಲ್ಲದಿದ್ದರೆ ಮಾತಿನ ಭರದಲ್ಲಿ ಅದು ತಾನಾಗಿ ಬಂದು ಬಿಡುತ್ತದೆ. ನಾನು ಹೇಳುವುದಿಲ್ಲ" ಎಂದವನು ಹಾರಿಸಿಕೊಂಡ. "ನೀನು ಎಲ್ಲಾದರೂ ಇರು. ಆಗಾಗ ಇಲ್ಲಿಗೆ ಬರುತ್ತಾ ಇರು. ನನ್ನದು ಯಾವುದೂ ಸ್ಥಿರವಿಲ್ಲ'' ಎಂದು ಅವಳು ಕಂಬನಿಗರೆದಳು. "ಇನ್ನೂ ಸ್ವಲ್ಪ ಸೈರಿಸು. ನನ್ನ ಕಾಲು ಸ್ವಲ್ಪ ಭದ್ರವಾಗಲಿ. ಆ ಮೇಲೆ ನಾನು ಬಂದು ಬಾ ಎಂದರೆ ನೀನು ಬರಬೇಕು ನೋಡು. ಸುಮ್ಮನೆ ಅತ್ತರೆ ಪ್ರಯೋಜನವಿಲ್ಲ. ಇನ್ನು ನೀನು ಇಲ್ಲಿರುವದು ಸರಿಯಲ್ಲ'' ಎಂದವನು ಉಪದೇಶಿಸಿದ.

ನಾರಾಯಣ ಬಂದು ಹೋದ ಮೇಲೆಯೇ ಚಂದ್ರಾವತಿ ಮಂಗಳೂರಿಗೆ ಬಂದಳು. ಮತ್ತು ವಾಸಂತಿಯ ಮನಸ್ಸಿನಲ್ಲಿ ಅಶಾಂತಿಯ ತೆರೆಗಳನ್ನು ಎಬ್ಬಿಸಿದಳು. ಆ ಬಿರುಗಾಳಿ ಸಂಪೂರ್ಣ ಶಮನವಾಗುವ ಮೊದಲೇ ಇನ್ನೊಮ್ಮೆ ನಾರಾಯಣ ಸಾಯಂಕಾಲ ಪ್ರತ್ಯಕ್ಷನಾದ. ಅವನು ಬಹಳ ಗಡಿಬಿಡಿಯಲ್ಲಿದ್ದಂತೆ ತೋರಿತು. "ಕುಳಿತುಕೊಳ್ಳಲು ಹೊತ್ತಿಲ್ಲ. ಈಗ ಹೋಗಬೇಕಾಗಿದೆ. ನಮ್ಮ ಧನಿಯರ ಟ್ಯಾಕ್ಸಿ ಅಲ್ಲಿ ನಿಂತಿದೆ. ಹಾಗೆ ನಿನ್ನನ್ನು ನೋಡಿ ಹೋಗೋಣವೆಂದು ಬಂದೆ. ಇನ್ನೊಂದು ಸಲ ಬಂದಾಗ ಮಾತನಾಡೋಣ" ಎಂದು ಹೇಳಿ ಅವಸರ ಮಾಡಿದ.

"ಚಹಾ ಕುಡಿದು ಹೋಗು" ಎಂದು ಅವಳು ಅಂಗಲಾಚಿ ಬೇಡಿದಳು.

"ಅದಕ್ಕೆ ಹೊತ್ತಾಗುತ್ತದೆ"

"ಒಂದು ನಿಮಿಷದೊಳಗೆ ಸ್ಟೋವ್ ಹಚ್ಚಿ ತಯಾರಿಸುತ್ತೇನೆ."

"ಅಷ್ಟರ ವರೆಗೆ ಅವರು ಅಲ್ಲಿ ಕಾಯಬೇಕಾಗುತ್ತದೆ.''

"ಅವರನ್ನೂ ಕರೆ''

"ಸರಿ'' ಎಂದು ನಾರಾಯಣ ರಸ್ತೆಗೆ ತೆರಳಿ ಬೋರೇಗೌಡರನ್ನು ಕರೆ ದುಕೊಂಡು ಬಂದ. "ಬೇಡ. ಬೇಡ!''ಎಂದು ಹೇಳುತ್ತಲೇ ಅವರು ಬಂದು ಕುರ್ಚಿಯಲ್ಲಿ ಕುಳಿತರು. ವಾಸಂತಿ ಚಹಾ ತಂದಾಗ ಬೋರೇಗೌ ಡರು ಅವಳ ಕಡೆ ನೋಡಿದರು. ನೋಡಿ ಬೆರಗಾದರು. ಅವಳ ರೂಪ, ಬಣ್ಣ, ಯೌವನ, ಗಾಡಿ ಮೋಡಿ, ಅಂಗ ಸಂಯೋಗಗಳನ್ನು ಕಂಡು ಆಕ ರ್ಷಿತರಾದರು. ಚಹಾದೊಂದಿಗೆ ಅವರು ಅವಳ ಸೌಂದರ್ಯಪಾನವನ್ನೂ ಮಾಡಿದರು. ಅಲ್ಲಿಂದ ಹೊರಡಲು ಕಾಲು ಬರಲಿಲ್ಲ. ನಾರಾಯಣ ಒತ್ತಾಯ ಮಾಡಿದುದರಿಂದ ಯಾಂತ್ರಿಕವಾಗಿ ಎದ್ದರು. "ಬರುತ್ತೇವೆ; ನಮಸ್ಕಾರ'' ಎಂದು ಅವರು ಹೇಳಿ ಮತ್ತೊಮ್ಮೆ ಅವಳನ್ನು ಕಂಡರು. ಟ್ಯಾಕ್ಸಿಯಲ್ಲಿ ಬಂದು ಕುಳಿತ ಮೇಲೆ ಕೂಡ ಅವರ ದೃಷ್ಟಿ ಆ ಮನೆಯ ಕಡೆಗೇ ಇತ್ತು. "ಇವಳು ಯಾರಿರಬಹುದು? ಮನೆಯಲ್ಲಿ ಬೇರೆ ಗಂಡಸರಿದ್ದಂತೆ ತೋರ ಲಿಲ್ಲ. ಬೇರೊಂದು ನರಪ್ರಾಣಿಯ ಸುಳಿವೂ ಇದ್ದಂತಿಲ್ಲ. ಗರತಿಯ ಲಕ್ಷಣ ಗಳು ಕಾಣಿಸಿದುವೇನೋ ನಿಜ. ಆದರೆ ಮೋರೆ ಕಂದಿದೆ. ಕೊರಳಲ್ಲಿ ಕರಿ ಮಣಿ ಇದ್ದಿತೇ? ಹಣೆಯಲ್ಲಿ ಕುಂಕುಮ ಇತ್ತೋ ಇಲ್ಲವೋ? ನಾನು ಸರಿಯಾಗಿ ನೋಡಲಿಲ್ಲ'' ಎಂದವರು ತರ್ಕಿಸತೊಡಗಿದರು. ಅವಳನ್ನು ನೆನ ಸಿಕೊಂಡಂತೆ ಅವರಲ್ಲಿ ಕಾಮೋನ್ಮಾದ ಹೆಚ್ಚಾಯಿತು. ಅವಳ ಅಂಗಸಂಗದ ಅಭಿಲಾಷೆ ಹುಟ್ಟಿಸಿತು.

ಬೋರೇಗೌಡರ ವ್ಯಕ್ತಿತ್ವದ ಈ ಮುಖವನ್ನು ನಾರಾಯಣ ಕಂಡಿಲ್ಲ. ಅವರು ದೊಡ್ಡ ಕಾಫಿ ಪ್ಲಾಂಟರರು, ಭಾರೀ ಶ್ರೀಮಂತರು ಎಂದು ಬಲ್ಲ. ಪರೋಪಕಾರಿ ಎಂದು ಕೇಳಿರುವನು. ಸ್ವತಃ ಅವನಿಗೂ ಅವರು ಸಹಾಯ ವನ್ನು ನೀಡಿರುವುದೂ ನಿಜ. ಊರಿನಲ್ಲಿ ಅವರು ಆಢ್ಯಗೃಹಸ್ಥರು! ಅವರ ಮಾತನ್ನು ಮೀರುವವರು ವಿರಳ. ಆಳುಗಳು ಅವರೆಂದರೆ ನಡುಗುತ್ತಾರೆ!

ದೊಡ್ಡ ಮನುಷ್ಯರು ಎಂದವನ ಭಾವನೆ. ಆದರೆ ಈ ಶ್ರೀಮಂತರ ವಿಲಾಸ ಜೀವನದ ದಿಗ್ದರ್ಶನವಾಗಿಲ್ಲ ಅವನಿಗೆ. ಮೂಡುಗೆರೆಯ ಜನ ಬಲ್ಲರಾದರೂ ಅವನು ಬಂದು ಬಹಳ ಕಾಲವಾಗಿಲ್ಲವಾದುದರಿಂದ ಅವನು ಕೇಳಿಲ್ಲ. ಅವರ ನೆರಳಲ್ಲಿರುವ "ನಾರಾಯಣ ವೈದ್ಯ"ರ ಮುಂದೆ ಜನ ಆಡಿಕೊಳ್ಳುವಂತೆಯೂ ಇಲ್ಲ. ಕೇಳಿದರೆ ಬೋರೇಗೌಡರು ಮಲೆಯಲ್ಲಿ ಜೀವಂತ ಹುಗಿಸಿ, ಅದರ ಮೇಲೊಂದು ಕಾಫಿ ಗಿಡ ನೆಡುವರೆಂಬ ಭಯವಿದೆ. ಆದುದರಿಂದ ಇದಿರಲ್ಲಿ ಜನ ಬಾಯಿ ತೆರೆದಂತಿಲ್ಲ. ಒಳಗೊಳಗೆ ಅವರು ಗುಸುಗುಟ್ಟುವರು. ಮುಖ್ಯವಾಗಿ ಬೋರೇಗೌಡರು ಹೆಣ್ಣು ಮರುಳ! ಕಂಡ ಹೆಣ್ಣು ಬೇಕು ಅವರಿಗೆ. ಅವರ ದೆಸೆಯಿಂದ ಅವರು ವೆಚ್ಚಮಾಡಿದ ಹೊನ್ನು ಅಷ್ಟಿಷ್ಟಲ್ಲ. ಈ ಹೊತ್ತು ಬೆಂಗಳೂರು, ನಾಳೆ ಕಾರವಾರ, ನಾಳದು ಗೋವಾಗಳಿಗೆ ತೆರಳುತ್ತಾರೆ. ಒಮ್ಮೊಮ್ಮೆ ಈ ಅರಸಿಯರನ್ನು ಟ್ಯಾಕ್ಸಿಯಲ್ಲಿ ಕರೆದುಕೊಂಡು ಬರುವುದೂ ಇದೆ. ಯಾರೂ ಇಲ್ಲದೆ ಇದ್ದಾಗ ಯಾವುದು ದೊರೆತಿತೋ ಅದು. ಅಂದಚಂದದ ತೋಟದ ಕೂಲಿಯಾಳುಗಳ ವರೆಗೂ ಸರ್ತಿ! ತೋಟದ ಮೇಸ್ತ್ರಿ ತನ್ನ ಹೆಂಡತಿಯನ್ನು ಕೊಟ್ಟು ಉದ್ಧಾರವಾದನೆಂದು ಎಲ್ಲರೂ ಬಲ್ಲರು. ವರುಷದ ಬಹುಭಾಗದಲ್ಲಿ ಅವನಿರುವುದು ತೋಟದಲ್ಲಿ. ಅವನ ಹೆಂಡತಿ ಇರುವುದು ಮಂಗಳೂರಲ್ಲಿ. ಬೋರೇಗೌಡರು ಮಂಗಳೂರಿಗೆ ಹೋದಾಗಲೆಲ್ಲ ಅಲ್ಲೇ ಕ್ಯಾಂಪ್ ಹಾಕುತ್ತಾರೆ ಮತ್ತು ಅವಳಿಗೊಂದು ಮನೆಯನ್ನೇ ಕಟ್ಟಿಸಿಕೊಟ್ಟಿರುವರೆಂದು ಪ್ರತೀತಿ. ಇಂಥ ಕಾಮಣ್ಣನಿಗೆ ವಾಸಂತಿ ರತಿಯಾಗಿ ತೋರಿದಳು.

ನಾರಾಯಣ ವೈದ್ಯರು ಅಲ್ಲಿಗೆ ಹೋದರೇಕೆ, ಅವರಿಗೇನಾದರೂ ಸಂಬಂಧವಿದೆಯೇ ಎಂದು ಬೋರೇಗೌಡರು ಯೋಚಿಸಿ ತಿಳಿದುಕೊಳ್ಳುವ ಆಸೆಯಿಂದ ಕೇಳಿದರು: "ವೈದ್ಯರೇ! ನೀವು ಸಂಜೆ ಉರ್ವಕ್ಕೆ ನನ್ನನ್ನು ಕರೆದುಕೊಂಡು ಹೋದಿರಲ್ಲ! ಆ ಹೆಂಗಸು ಯಾರ್ರೀ?"

ನಾರಾಯಣ ತನ್ನ ಅಕ್ಕನೆಂದು ಹೇಳಲಿಲ್ಲ. "ಅವಳೋ? ನನಗೆ ಬಹಳ ದೂರದ ಬಳಗ! ಬಹಳ ದೂರ ಅಂದರೆ ಬಹಳ ದೂರ! ಬಾದರಾಯಣ ಸಂಬಂಧ, ಸ್ವಾಮಿ! ಅವಳೇ ಹೇಳುತ್ತಾಳೆ ಅದನ್ನು. ನನಗೆ ನೆನಪಿಲ್ಲ. ಅವಳದೊಂದು ದೊಡ್ಡ ಕಥೆ!" ಎಂದು ನುಡಿದ.

"ಏನದು ಕಥೆ?". ಬೋರೇಗೌಡರ ಕುತೂಹಲ ಹೆಚ್ಚಿತು.

"ಅದರ ಗಂಡ ಯುದ್ಧಕ್ಕೆ ಸೇರಿದೆ. ಈಗ ಎರಡು ಮೂರು ವರುಷವಾಯಿತು ಪತ್ತೆ ಇಲ್ಲ. ಮೊದಲು ಆಗಾಗ ಪತ್ರ ಬರುತಿತ್ತು. ಅಲ್ಪಸ್ವಲ್ಪ ಹಣವನ್ನೂ ಮನಿಯಾರ್ಡರ ಮಾಡುತ್ತಿತ್ತು. ಈಗಂತೂ ಚಕಾರ ಸುದ್ದಿ ಇಲ್ಲ. ಇದ್ದಾನೋ, ಸತ್ತನೋ, ದೇವರೇ ಬಲ್ಲ!"

"ಅಯ್ಯಯ್ಯೋ! ರಾಮಕೃಷ್ಣ! ಮತ್ತೆ ಕೊಕ್ಕಕ್ಕೆ?"

"ನಾನೇ ಆಗಾಗ ಕೈಗೆ ಸಿಕ್ಕಿದುದನ್ನು ಸ್ವಲ್ಪ ಕಳಿಸುತ್ತಿರುತ್ತೇನೆ."

"ತಾಯಿ ತಂದೆ, ಅಣ್ಣ ತಮ್ಮ, ಯಾರೂ ಇಲ್ಲ?"

"ಯಾರೂ ದಿಕ್ಕಿಲ್ಲ. ತಂದೆ ಸತ್ತುಹೋಗಿದ್ದಾನೆ. ತಾಯಿ ಎಲ್ಲೋ ಇದ್ದಾಳೆ. ಮುದುಕಿ. ಈ ಹೊತ್ತೋ ನಾಳೆಯೋ ಸಾಯುವ ಸ್ಥಿತಿ. ಸತ್ತುಹೋದರೆ ಸುಖವಾಯಿತು ಬಿಡಿ. ಇದ್ದರೇನು ಮಹಾ, ಅನ್ನದಂಡ; ಭೂಮಿ ಭಾರ!"

"ಪಾಪ! ಪಾಪ! ಅದಕ್ಕೇ ಮೋರೆ ಸಣ್ಣದಾಗಿ ಕಾಣಿಸಿತು ನನಗೆ. ಆಗಲೇ ನಿಮ್ಮನ್ನು ಕೇಳೋಣ ಎಂದಿದ್ದೆ. ಮತ್ತೆ ಸಂಸಾರದಲ್ಲಿ ಏನಾದರೂ ಬೇಸರವಿದ್ದೀತು, ನಮಗ್ಯಾಕೆ ಎಂದು ಸುಮ್ಮನಾದೆ. ಆದರೂ ಅಂತಃಕರಣ ಎಲ್ಲಿ ಹೋಗುತ್ತದರೀ? ಬಹಳ ಒಳ್ಳೆಯ ಹೆಂಗಸಾಗಿ ಕಾಣುತ್ತಾಳೆ. ವೈದ್ಯರೇ, ನೀವು ಕೈ ಬಿಡಬೇಡಿರಿ. ದೂರದ ಬಳಗ ಅಂತೀರಿ. ಯಾರೂ ದಿಕ್ಕು ದಾತಾರರಿಲ್ಲ ಅನ್ನುತ್ತೀರಿ. ನೀವು ಮೂಡುಗೆರೆಗೆ ಯಾಕೆ ಕರೆದು ಕೊಂಡು ಬರಬಾರದು?"

"ನನ್ನ ಕಾಲೇ ಭದ್ರ ಇಲ್ಲವಲ್ಲ, ಸ್ವಾಮಿ!"

"ಛೇ! ಹಾಗೆಂದರೆ ಏನರ್ಥ? ನಾವೆಲ್ಲ ಇಲ್ವಾ? ನಿಮ್ಮನ್ನು ಬಿಟ್ಟು ಹಾಕುತ್ತೇವೆಂತ ಮಾಡಿದಿರೇನು? ನೀವು ಅದನ್ನೆಲ್ಲ ಚಿಂತಿಸಬೇಡಿರಿ. ಯಾರು ಯಾರೋ ತಿಂದು ಹೋಗುತ್ತಾರೆ ನಮ್ಮಲ್ಲಿ. ನಿಮ್ಮಂಥವರಿಗೆ ಸಹಾಯ ಮಾಡಿದರೆ ಪುಣ್ಯವಾದರೂ ಬರುತ್ತದೆ. ನಾನು ಹೇಳಿದ ಹಾಗೆ ಮಾಡಿ. ಕರೆದುಕೊಂಡು ಬನ್ನಿ."

ನಾರಾಯಣ ಗೋಣು ತಿರುವಿದ. ಒಂದು ಹಕ್ಕಿ ಬಲೆಯೊಳಗೆ ಬಿದ್ದಿತೆಂದು ಬೋರೇಗೌಡರು ಸಂತೋಷಿಸಿದರು. ಆ ವಾಸಂತಿಯ ಮೋಲಿನ

ವ್ಯಾಮೋಹದಿಂದ ನಾರಾಯಣನೊಡನೆ ಬಹಳ ಪ್ರೀತ್ಯಾದರದಿಂದ ನಡೆದು ಕೊಳ್ಳಲಾರಂಭಿಸಿದರು. ತನ್ನ ತೋಟವಲ್ಲಿ ದುಡಿವವರೆಲ್ಲರೂ ಅವರಲ್ಲೇ ಔಷಧಿ ತೆಗೆಮುಕೊಳ್ಳಬೇಕೆಂದು ಆಜ್ಞೆಯಾಯಿತು. ಆಳುಗಳೊಂದಿಗೆ ಕಾಳು ಕಡಿ, ಹಣಗಳ ಹೊಳೆಯೂ ಹರಿಯಿತು. ನಾರಾಯಣ ಪ್ರತ್ಯೇಕ ಒಂದು ಮನೆಯನ್ನು ಬಾಡಿಗೆ ಹಿಡಿದ. ಮತ್ತು ಮಳೆ ಕಡಿಮೆಯಾದ ಬಳಿಕ ಒಂದು ದಿನ ಮಂಗಳೂರಿಗೆ ಬಂದು ವಾಸಂತಿಯೊಡನೆ ಹೇಳಿದ :

"ನಾನು ಆಸ್ಪತ್ರೆ ತೆರೆದು ಸ್ವಲ್ಪ ಕಾಲವಾಯಿತು. ಸಂಪಾದನೆ ಚೆನ್ನಾಗಿದೆ. ನೀನು ಬಾ. ಇನ್ನು ಇಲ್ಲಿರುವುದು ಸಾಕು. ಎರಡು ಹೊತ್ತು ಗಂಜಿ ಕಾಣಿಸು. ದಿನವಿಡೀ ದುಡಿದ ಮೇಲೆ ಮತ್ತೆ ಬಂದು ಅಡಿಗೆ ಮಾಡುವುದೆಂದರೆ ಬೇಸರವಾಗುತ್ತದೆ ಕೈ ಸುಟ್ಟುಕೊಂಡು ತಿಂದು ತಿಂದು ನನಗೆ ಸಾಕಾಗಿದೆ. ಒಂದೊಂದು ದಿನ ಊಟವನ್ನೇ ಮಾಡುವುದಿಲ್ಲ. ಬಾಳೆಹಣ್ಣು, ಬ್ರೆಡ್ಡು ತಿಂದಿರುತ್ತೇನೆ."

ಅವಳು ಒಪ್ಪಲಿಲ್ಲ. "ಅವರು ಈಗ ಇಲ್ಲೇ ಆಸ್ಪತ್ರೆ ತೆರೆದಿದ್ದಾರೆ. ಇಲ್ಲೇ ಇರುತ್ತಾರೆ. ಮನೆಗೆ ಬರುವ ಹೊತ್ತು. ಬೇಗ ಹೊರಡು" ಎಂದು ಹೇಳಿದಳು.

"ಮತ್ತೆ ಅವನ ಹೆಂಡತಿ?" ಎಂದು ಆಶ್ಚರ್ಯದಿಂದ ಅವನು ಕೇಳಿದ.

"ನನಗೆ ಗೊತ್ತಿಲ್ಲ" ಎಂದವಳು ಹೇಳಿ "ಹೋಗು, ಹೋಗು" ಎಂದು ಎಚ್ಚರಿಸಿದಳು.

"ಪಾಪಿ! ಪಾಪಿ! ಇಷ್ಟರವರೆಗೆ ಇದನ್ನು ಪೀಡಿಸಿದ. ಇನ್ನು ಅದನ್ನು ಕಣ್ಣೀರು ಸುರಿಸುತ್ತಾನೆಂದು ತೋರುತ್ತದೆ. ಇದಕ್ಕೂ ಬುದ್ಧಿ ಇಲ್ಲ. ಒಳ್ಳೆಯ ಮಾತುಗಳನ್ನು ಹೇಳಿದರೆ ಇದು ನಂಬುವುದಿಲ್ಲ. ಇದಕ್ಕೆ ಬುದ್ಧಿಗಲಿಸುವ ಮಾರ್ಗವೇ ಬೇರೆ" ಎಂದು ನಾರಾಯಣ ಯೋಚಿಸಿದ.

# ೧೬ ನೇಯ ಅಧ್ಯಾಯ

ನೇತ್ರಾವತಿ ಹೊಳೆ ದಾಟಿಸಿ ಆನಂದರಾಯನನ್ನು ಕಳಿಸಿ ಮನೆಗೆ ಬಂದ ಮೇಲೆ "ಯಾಕೆ ಹೋದ? ಯಾಕೆ ಹೋದ? ಈ ಹೊತ್ತು ಯಾಕೆ ಇರಲಿಲ್ಲ? ಮೋರೆಯೇಕೋ ರಾವು ಬಡಿದಂತಿತ್ತು!" ಎಂದು ಗೋಪಾಲ ರಾಯರು ಯಜಮಾನತಿಯ ಮುಂದೆ ನುಡಿದರು. "ಯಾಕೆನೇ? ಏನೋ ಕೋಪದಿಂದ ಮಾತನಾಡುವಂತೆ ಕೇಳಿಸಿತು. ಏನು ಸಮಾಚಾರ?'' ಎಂದು ಜಲಜಮ್ಮ ಏಕಾಂತದಲ್ಲಿ ಕಾವೇರಿಯನ್ನು ಪ್ರಶ್ನಿಸಿದರು. ಆಗ ಅವಳು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಮತ್ತು ತಾಯಿ ಆಗ್ರಹ ಹಿಡಿದುದರಿಂದ ಹಿಂದಿನ ರಾತ್ರಿ ನಡೆದ ಸಂಗತಿಯನ್ನು ತಿಳಿಸಿದಳು. ಅದನ್ನು ಕೇಳಿ ಜಲಜಮ್ಮನವರಿಗೆ ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದಂತಾಯಿತು. ಅದೊಂದು ಕ್ಷಣ ಮಾತ್ರ. ಮತ್ತೊಂದು ಕ್ಷಣದಲ್ಲಿ ಕಾವೇರಿಯ ಮೇಲೆ ಅವರಿಗೆ ಅತಿ ಸಿಟ್ಟು ಬಂದಿತು. "ಮೂರು ಕಾಸಿನವಳೇ! ಸುಮ್ಮನಿರು; ಪ್ರತಿ ನುಡಿಯಬೇಡ ಎಂದು ನಾನು ನಿನಗೆ ಹೇಳಲಿಲ್ಲವೇನು? ನೀನು ಸಣ್ಣ ಕೂಸೇನು? ನಿನಗೆ ಪ್ರಪಂಚ ಜ್ಞಾನವಿಲ್ವಾ? ಗಂಡನೊಡನೆ ಹೇಗೆ ಮಾತನಾಡಬೇಕು, ಹೇಗೆ ಬಾಳ್ವೆ ಮಾಡಬೇಕು ಎಂದು ಸ್ವಬುದ್ಧಿಗೆ ಹೊಳೆಯುದಿಲ್ವಾ? ದಿಗ್‌ಡ್‌ದಿಮ್ಮಿ ಹಾಗೆ ಬೆಳೆದಿದ್ದೀ. ವರುಷ ಹದಿನೆಂಟು ಸಂದಿತು!" ಎಂದು ಜರೆದರು.

ಆ ಮೇಲೆ ಒಂದು ನಿಮಿಷ ತಡೆದು ಮತ್ತಿಂತೆಂದರು: "ಗಂಡಸರು ಸೂಳೆಯ ಹತ್ತಿರ ಹೋಗುತ್ತಾರೆ. ಪ್ರಪಂಚದಲ್ಲಿ ಅವನೊಬ್ಬನೇ ಅಲ್ಲ. ಯಾರ ಯಾರ ಗುಟ್ಟು ಯಾರಿಗೆ ಗೊತ್ತಿದೆ? ಅವನದು ಹೊರಬಿದ್ದಿದೆ ಅಷ್ಟೆ! ಇಷ್ಟರ ವರೆಗೆ ಲಗ್ನವಾಗಿರಲಿಲ್ಲ! ಸೂಳೆಯನ್ನಿಟ್ಟುಕೊಂಡಿದ್ದರೂ ಇಟ್ಟುಕೊಂಡಿದ್ದಾನು! ಅದು ನಿನಗೆ ಯಾಕೆ ಬೇಕಾಗಿತ್ತು? ಅವಳು ಯಾರು, ಅವಳ ಹೆಸರೇನು, ಎಂದು ಕೇಳಬೇಕಾಗಿತ್ತು ಯಾಕೆ? ನಿನ್ನದು ಅಧಿಕ ಪ್ರಸಂಗ ಜಾಸ್ತಿಯಾಯಿತು. ಅದರಿಂದಲೇ ಅವನಿಗೆ ಸಿಟ್ಟು ಬಂದಿರಬೇಕು. ಅದಕ್ಕೆ ಅವನು ಅಷ್ಟು ಗಡಿಬಿಡಿಯಿಂದ ಹೋದ. ಆಗ ನನಗೆ ಗೊತ್ತಾಗಲಿಲ್ಲ. ಈಗ ಅದರ ಕಾರಣ ತಿಳಿಯಿತು."

ಪುನಃ ಅವರು ಯೋಚಿಸಿ ನುಡಿದರು: "ನೀನು ಬೆಳಿಗ್ಗೆ ನನ್ನ

ಮುಂದೆ ಹೇಳಿದೆಯಾ? ಅದೂ ಇಲ್ಲ. ಅವನ ಕಾಲು ಹಿಡಿದು ತಪ್ಪಾಯಿತೆಂದು ಹೇಳುತಿದ್ದರೆ ಅವನು ನಿಲ್ಲುತಿದ್ದನೋ ಏನೋ! ಹೆಂಡತಿ ಕಣ್ಣೀರು ಸುರಿಸಿದರೆ ಎಂಥ ಕಠಿಣ ಹೃದಯವಾದವರೂ ಕರಗೀತು! ನೀನು ಅದನ್ನೂ ಮಾಡಲಿಲ್ಲ. ನಿನ್ನ ಹಟ, ಹಠ! ಅವನ್ನು ನೀನು ಬಿಡದಿದ್ದರೆ ಬರ್ಕತಿಲ್ಲ, ನೋಡು. ನಾನು ಸಾರಿ ಸಾರಿ ಹೇಳಿದ್ದೇನೆ. ಸೆರಗಿನಲ್ಲಿ ಗಂಟು ಹಾಕಿಕೋ!"

ಹಾಗೆ ಎಚ್ಚರಿಸಿದ ಬಳಿಕ ಪರಿಸ್ಥಿತಿಯನ್ನು ನೆನಸಿಕೊಂಡು ಅವರಿಗೆ ಅಳು ಬಂದಿತು. "ಸಿಟ್ಟಿನಿಂದ ಹೋದವನನ್ನು ಇನ್ನು ಸಮಾಧಾನ ಮಾಡುವುದು ಹೇಗೆ? ಇನ್ನು ಇಲ್ಲಿಗೆ ಬರುತ್ತಾನೋ ಇಲ್ಲವೋ! ಒಂದು ವೇಳೆ ಅವನು ನಿನ್ನನ್ನು ಕಣ್ಣೆತ್ತಿ ನೋಡದಿದ್ದರೆ ಏನು ಮಾಡೋಣ! ಹೇಗಿದ್ದರೂ ನಿನ್ನನ್ನೇ ಅವನು ನಂಬಿಕೊಂಡಿಲ್ಲ. ರಂಭೆಯೊಬ್ಬಳು ಇದ್ದಾಳೆ ಅವನಿಗೆ! ಗಂಡಸರ ಮನಸ್ಸು ಹೀಗೆಯೇ ಇದೆ ಎಂದು ಹೇಳಲಳವಲ್ಲ. ಅವರು ಏನು ಮಾಡಿದರೂ ನಡೆಯುತ್ತದೆ. ಏನು ಮಾಡಲೂ ಹೇಸುವುದಿಲ್ಲ! ಇದೊಂದು ದೊಡ್ಡ ಕಷ್ಟವಾಯಿತಲ್ಲ, ದೇವರೇ!"

ಜಲಜಮ್ಮ ಕಣ್ಣೀರನ್ನು ಒರಸಿಕೊಂಡು ಒಲೆಗಿಟ್ಟಿದ್ದ ಕೊಳ್ಳಿಯನ್ನು ಎಳೆದು "ನಿನ್ನ ಮೋರೆಗೆ ಇಟ್ಟು ಬಿಡುತ್ತೇನೆ, ಇದನ್ನು ನೋಡು! ನೀನು ಸತ್ತು ಹೋದರೂ ದುಃಖವಿಲ್ಲ" ಎಂದು ರೇಗಿ ಸಹಸ್ರನಾಮ ಪಠಿಸಿದರು. ಕಾವೇರಿ ಅಳುತ್ತ ಎದ್ದು ಹೋದಳು.

"ಯಾಕೆ ಹಾಗೆ ಮಕ್ಕಳಿಗೆ ಶಾಪ ಕೊಡುತ್ತಿ? ಒಂದು ಗಳಿಗೆ ಒಳ್ಳೇದಿದೆ; ಒಂದು ಗಳಿಗೆ ಕೆಟ್ಟದಿದೆ. ನಿನ್ನ ನಾಲಿಗೆಯನ್ನು ಸ್ವಲ್ಪ ಬಿಗಿ ಹಿಡಿ ನೋಡುವಾ!" ಎಂದು ಗೋಪಾಲರಾಯರು ಅಲ್ಲಿಗೆ ಬಂದರು.

"ನಿಮ್ಮ ಮಗಳ ರಾಮಾಯಣ ಕೇಳಿದಿರಾ?" ಎಂದು ಜಲಜಮ್ಮ ಅದನ್ನು ಗಂಡನ ಮುಂದೆ ತೋಡಿಕೊಂಡರು. ಅವರಿಗೂ ಅತೀವ ದುಃಖವಾಯಿತು. ಆದರೆ ಅವರು ಮಗಳಿಗಿಂತಲೂ ಅಳಿಯನ ಅಪರಾಧವನ್ನೇ ಹೆಚ್ಚಾಗಿ ಗುರುತಿಸಿದರು.

"ಘಟಿಂಗ! ಹೆಂಡತಿ ಮುಂದೆ ಸೂಳೆ ಹೆಸರು ಯಾಕೆ ತೆಗೆಯಬೇಕಾಗಿತ್ತು. ತಾನೆಲ್ಲಿದ್ದೇನೆ, ಏನು ಮಾತನಾಡುತ್ತೇನೆ ಎಂಬ ಸ್ಮೃತಿ ಇರಬೇಕೋ ಬೇಡವೋ? ಏನು ಕುಡಿದು ಬಂದಿದ್ದಾನೇನು, ಮೂರು ಕಾಸಿನ

ವನು! ಸಣ್ಣ ಹುಡುಗಿ, ಹೊಸ ಹೆಣ್ಣು, ಇನ್ನೂ ಪ್ರಪಂಚ ಮಾಡಿಲ್ಲ ಎಂದು ತಿಳಿಯಬೇಕೋ ಬೇಡವೋ ಅವನಿಗೆ? ಅವಳನ್ನು ಮೆಲ್ಲಗೆ ಮಾತ ನಾಡಿಸಿ, ನಗಿಸಿ, ಸಂತೋಷಗೊಳಿಸಿ, ತಾನೂ ಸಂತೋಷಪಡುವುದನ್ನು ಬಿಟ್ಟ! ನೀನು ಏನೇ ಹೇಳು, ಅವನು ಬದ್ಮಾಷ್‌ನಿದ್ದಾನೆ! ನಮ್ಮ ಹುಡುಗಿ ಅಜ್ಞಾನಿ ಖರೆ. ಆದರೆ ಲಜ್ಜೆ ಬಿಟ್ಟವಳೇನು? ಸೂಳೆಯ ಹಾಗೆ ಅವನ ಮೈ ಮೇಲೆ ಹೋಗಿ ಬೀಳಬೇಕೇನು? ಅವನ ಮುಂದೆ ಗೆಜ್ಜೆ ಕಟ್ಟಿ ಕುಣಿ ಯಬೇಕೆಂದು ಕಾಣಿಸುತ್ತದೆ. !''

ಸ್ವಲ್ಪ ತಡವರಿಸಿ ಅವರು ನುಡಿದರು: "ಆಯಿತಪ್ಪಾ, ನಿನ್ನೆ ಏನೋ ಒಳ್ಳೆ ಗಳಿಗೆ ಇರಲಿಲ್ಲ. ಈ ಹೊತ್ತು ಇರಬೇಕಾಗಿತ್ತು, ಮಗ! ಅಷ್ಟು ಅವ ಸರವೇನು ಅವನಿಗೆ? ಅಲ್ಲಿ ಆಕೆ ಕಾಯುತಿದ್ದಾಳೆಂತ ಕಾಣುತ್ತದೆ. ಅವನ ಜೀವ ಅಲ್ಲೇ ಇದೇನೆ! ಸುಮ್ಮನೆ ಹೆಸರಿಗೊಂದು ಲಗ್ನವಾಗಿದ್ದಾನೆ. ನನ ಗೆಲ್ಲ ಗೊತ್ತು! ಈ ಕರಾವಳಿ ಜನ ಹೇಗಿದ್ದೀರಂತೀ? ನಸೆಹಚ್ಚಿ ಹಸು ನುಂಗುವವರು!"

"ಅದು ಏನೇ ಇರಲಿ, ಈಗ ಸೆಟಗೊಂಡು ಹೋದನಲ್ಲ, ಮಾರಾಯ!"

"ನನಗೆ ಮೊದಲೇ ಗೊತ್ತಾಗಲಿಲ್ಲ, ಬಿಡು! ಇಲ್ಲದಿದ್ದರೆ ಅವನು ಆ ನೇತ್ರಾವತಿ ಹೇಗೆ ದಾಟಿ ಹೋಗುತ್ತಿದ್ದನೋ ನೋಡುತ್ತಿದ್ದೆ. ಹೋಗುವು ದಾದರೆ ನಿನ್ನ ಹೆಂಡತಿಯನ್ನು ಕಟ್ಟಿಕೊಂಡೇ ಹೋಗು ಎಂದನ್ನುತಿದ್ದೆ. ಮದುವೆ ಮಾಡಿಕೊಂಡವನಿಗೆ ಹೆಂಡತಿ ಭಾರವಾದಳೇನು?''

ಈ ವಾದವಿವಾದ ಕೋಪಾಟೋಪದ ಮಾತುಗಳು ನಡೆದುವೇನೋ ನಿಜ. ಆದರೆ ಅದರ ಹಿಂದೆ ಅತಿಯಾದ ದು:ಖ ಹುದುಗಿತ್ತು. ಆ ಗಾಯದ ಉರಿ ಸಹಿಸಲಾರದೆ ಅವರೆಲ್ಲರೂ ಹಾಗೆ ಕೂಗಿದರು. ದಿನದಿಂದ ದಿನಕ್ಕೆ ಗಾಯ ದೊಡ್ಡದಾಗುತ್ತ ಬಂತು. ಮತ್ತು ವೇದನೆಯೂ ಹೆಚ್ಚಾಯಿತು. ಅದನ್ನು ಗುಣ ಪಡಿಸುವ ಉಪಾಯ ಚಿಂತನೆಯನ್ನೇ ಅವರು ಮಾಡತೊಡ ಗಿದರು. ಕಾವೇರಿಯ ಕಾಲಸದ್ದು ಕೇಳಿದಾಗ, ಅವಳನ್ನು ಕಂಡಾಗ, ಜಗಲಿ ಯಲ್ಲಿ ಕುಳಿತಾಗ, ಗದ್ದೆಗಳ ಹುಣಿಗಳಲ್ಲಿ ಸಂಚರಿಸಿದಾಗ ಅವರಿಗೆ ಅದೇ ಯೋಚನೆ. ಗಾಯದಿಂದ ಇಳಿವ ನೀರಿನಂತೆ ಒಮ್ಮೊಮ್ಮೆ ಅವರ ಕಣ್ಣಿಂದ ನೀರು ಸುರಿಯುತ್ತಿತ್ತು. ಅವರ ಮೋರೆಯಲ್ಲಿ ನಗುವಿಲ್ಲ. ಮನಸ್ಸಿನಲ್ಲಿ

ಉಲ್ಲಾಸವಿಲ್ಲ. ಮೈಯಲ್ಲಿ ಚಲನ ಶಕ್ತಿಯೇ ಉಡುಗಿದಂತಾಗಿದೆ. ಅವರ ತಲೆಯ ಮೇಲಿದ್ದ ಕೆಲವು ಕರಿಗೂದಲುಗಳೂ ಬೆಳ್ಳಗಾದುವು. ಏನೋ ಒಂದು ಕಾಯಿಲೆ ಬಿದ್ದವರಂತೆ ಕಾಣಿಸತೊಡಗಿವರು. ಅವರ ವಯಸ್ಸು ಹತ್ತು ವರುಷ ಜಾಸ್ತಿಯಾದಂತೆ ತೋರಿತು. ಒಂದು ದಿನ ಗದ್ದೆಯ ಹುಣಿಯಲ್ಲಿ ಅವರನ್ನು ಕಂಡ ರಾಮುಗೌಡ "ಅಯ್ಯಾ! ಯಾಕೆ ಹೀಗಾಗಿದ್ದೀರಾ? ಮೋರೆಯೆಲ್ಲ ಚೀಪಿದ ಉಪ್ಪಿನಕಾಯಿಯಂತಾಗಿದೆ. ಜೀವಕ ಸುಖಾವಿಲ್ವಾ ಏನು?" ಎಂದು ಅಂತಃಕರಣದಿಂದ ಪ್ರಶ್ನಿಸಿದ.

"ಸಾಯಲಿಕ್ಕೆ ದಿನ ಬರಲಿಲ್ಲ, ರಾಮೂ!'' ಎಂದು ಅವರು ಬೇಸರದ ದನಿ ತೆಗೆದರು.

"ಏನಯ್ಯ ಹೀಗ ಮಾತನಾಡಿದರೆ ? ನಿಮಗೇನಾಗಿದೆ ಈಗ? ದೇವ್ರು ಮಕ್ಕಳು ಮರಿ, ಗದ್ದೆ ಎಲ್ಲ ಕೊಟ್ಟಾನೆ. ಮಗಳಿಗೆ ಲಗ್ನ ಮಾಡಿದಿರಿ. ಇನ್ನೇನು ಚಿಂತೆ ನಿಮಗೆ?"

"ಲಗ್ನ ಮಾಡಿದುದೇ ತಪ್ಪಾಯ್ತು, ರಾಮಾ! ನಿನಗೆ ಅದರ ಕಥೆ ಗೊತ್ತಿಲ್ಲ, ಪೂರಾ'' ಎಂದು ಅವರು ಹೇಳಿ ಹೊಟ್ಟೆಯೊಳಗಿನ ದುಃಖವನ್ನೆಲ್ಲ ಅವನ ಮುಂದೆ ತೋಡಿಕೊಂಡರು. ಅದನ್ನು ಕೇಳಿ ಅವನಿಗೆ ಅನುತಾಪವಾಯಿತು.

"ಅಯ್ಯಾ! ನಮ್ಮ ಮುಂದಿಯಾಗಿದ್ದರೆ ಕೈಕಾಲು ಕಟ್ಟಿ ಗಾಡಿ ಮ್ಯಾಲೆ ಹಾಕಿಕೊಂಡು ಬರುತಿದ್ದೆ!" ಎಂದನವ ಮೀಸೆ ಹುರಿಮಾಡಿ.

ಗೋಪಾಲರಾಯರು ಉತ್ತರವಿತ್ತರು: "ಏನು ಮಾಡೋಣ, ಹೇಳು! ಅದನ್ನು ಮಾಡಲಾರೆನೆಂದಲ್ಲ. ಆದರೆ ಮೇಲೆ ಉಗುಳಿದರೆ ನಮ್ಮ ಮೋರೆಗೆ ಬೀಳುತ್ತದಲ್ಲ !''

"ಹೌದಯ್ಯ ! ಹೌದಯ್ಯ !'' ಎಂದು ಅವನು ಸುಮ್ಮನಾದ.

ಸ್ವಲ್ಪ ಯೋಚಿಸಿ ಅವರು ಹೇಳಿದರು. "ರಾಮೂ! ನೀನೊಂದು ಕೆಲಸ ಮಾಡು. ಈ ಹೊತ್ತು ಬೆಳ್ತಂಗಡಿಗೆ ಹೋಗು. ಅವನೇನು ಮಾಡುತ್ತಾನೆ, ಎಲ್ಲಿಗೆ ಹೋಗುತ್ತಾನೆ, ಅವಳು ಎಲ್ಲಿರುತ್ತಾಳೆ, ಎಂದೆಲ್ಲ ನೋಡಿಕೊಂಡು ಬಾ. ಯಾರಿಗೂ ಗೊತ್ತಾಗಬಾರದು. ಸಿ. ಐ. ಡಿ ಹಾಗೆ ಕೆಲಸಮಾಡಬೇಕು ನೋಡು. ಮತ್ತೆ ಏನಾದರೂ ಉಪಾಯ ಹುಡುಕೋಣ!''

" ಹೋ ! ಅದಕ್ಕೇನಯ್ಯ ! ಬೇಕಾದ್ರೆ ಈ ಜೀವ ಕೊಟ್ಟೇನು " ಎಂದವನು ಹೇಳಿದ. ಕತ್ತಲಿ ಕತ್ತಲೆ ಬೀಳುವಾಗ ಬೆಳ್ತಂಗಡಿ ಮುಟ್ಟಿದರೆ ಸಾಕೆಂದು ನಿಶ್ಚಯಿಸಿ ಅವನು ಹೊತ್ತು ನೋಡಿ ಬೆಳ್ತಂಗಡಿ ದಾರಿ ಹಿಡಿದ. ಆದರೆ ಅವನು ಪಟ್ಟ ಕಷ್ಟ ನೀರಲ್ಲಿಟ್ಟ ಹೋಮದಂತಾಯಿತು. "ಆನಂದ ಆಸ್ಪತ್ರೆ"ಯ ಕಟ್ಟಡದಲ್ಲಿ "ಆನಂದ ಭವನ" ಹೋಟೇಲನ್ನು ತೆರೆಯಲಾಗಿದ್ದಿತು. ಅದನ್ನು ಕಂಡ ರಾಮುಗೌಡ ಬೆಕ್ಕಸ ಬೆರಗಾದ. "ಅರರೆ ! ಅರರೆ ! ಇದೇನು ಚೋದ್ಯ ! ಜಾದೂ, ಜಾದು ಮಾಡಿದ ಹಾಗಿದೆಯಲ್ಲ !" ಎಂದವನು ತನ್ನೊಳಗೆ ಅಂದುಕೊಂಡು ಒಳಗೆ ಹೊಕ್ಕ. ಡಾಕ್ಟರರು ಮಂಗಳೂರಿಗೆ ತೆರಳಿದ್ದಾರೆಂದು ಅವನಿಗೆ ತಿಳಿಯಿತು. ಆದರೆ ಅವರ ಸೂಳೆ ಎಲ್ಲಿರುತ್ತಾಳೆ, ಅವಳ ಮನೆಯೆಲ್ಲಿ ಎಂಬುದು ಅವನಿಗೆ ಗೊತ್ತಾಗಲಿಲ್ಲ. " ಅವರಿಗೇನ್ರೀ, ದಿನಾ ಒಂದು ಕಡೆ ಹೋಗುತ್ತಾರೆ " ಎಂದು ಹೇಳಿ ಗಹಗಹಿಸುವವರೇ ಹೆಚ್ಚು. ಆದರೆ ಉಡುಪಿಯಿಂದಲೋ, ಪುತ್ತೂರಿನಿಂದಲೋ, ಮಂಗಳೂರಿನಿಂದಲೋ ಯಾರೋ ಒಬ್ಬಳು ಕೆಲಕಾಲದ ಹಿಂದೆ ಬೆಳ್ತಂಗಡಿಗೆ ಬಂದಿದ್ದಳೆಂದು ಒಬ್ಬರು ಹೇಳಿದರು. ಇದನ್ನು ತಿಳಿದ ಬಳಿಕ ಗೌಡನಿಗೆ ಅಲ್ಲಿ ನಿಲ್ಲಲು ಮನಸ್ಸಾಗಲಿಲ್ಲ. ಮತ್ತೆ ಬಂಗಾಡಿಗೆ ಹೊರಟ. ಕಣ್ಣು ಕಾಣದ ಕತ್ತಲೆ. ಇದಿರು ಅಮವಾಸ್ಯೆ. ರಸ್ತೆಯೂ ಸುಗಮವಾದುದಲ್ಲ. ಹಾವು, ಹುಲಿಗಳ ಹೆದರಿಕೆಗಿಂತಲೂ ಅವನಿಗೆ ಈ ಭೂತ ಪಿಶಾಚಿಗಳ ಭಯವೊಂದಿದೆ. ಆದರೂ ಧನಿಯ ಕಾರ್ಯ ಬಿಡಲಾರ. ದಾರಿಯುದ್ದಕ್ಕೂ "ಲೇ, ಲೇ ! ಲೇಲೆ" ಪಾಡ್ದನ ಹೇಳುತ್ತ ಅವನು ನಡೆಯಲಾರಂಭಿಸಿದ. ಬೆಳಗಿನ ಜಾವಕ್ಕೆ ಊರು ಸೇರಿದ. ಮತ್ತು ಗೋಪಾಲರಾಯರನ್ನು ಕೂಗಿ ಎಚ್ಚರಿಸಿದ. ಅವನ ದನಿಯನ್ನು ಕೇಳಿಯೇ ಅವರು ಹಾಸಿಗೆಯಿಂದ ಹಾರಿಬಿದ್ದರು. "ಸಂಜೆ ಬೆಳ್ತಂಗಡಿಗೆ ಹೋದ ಗೌಡ ಇಷ್ಟು ಬೇಗನೇ ಹೇಗೆ ಬಂದ? ಏನಾಯಿತು?" ಎಂದು ಅವರು ಆಶ್ಚರ್ಯ, ಕುತೂಹಲಗಳಿಂದ ನಿದ್ದೆಗಣ್ಣಿನಲ್ಲಿ ಎದ್ದು ಬಂದರು.

"ಅಯ್ಯಾ ! ಕೆಲಸ ಕೆಟ್ಟಿತು ! ಆಸ್ಪತ್ರೆ ಇದ್ದಲ್ಲಿ ಹೋಟ್ಲು ಆಗಿದೆ " ಎಂದವನು ನುಡಿದು ಎಲ್ಲ ಸಮಾಚಾರವನ್ನೂ ತಿಳಿಸಿದ.

ಗೋಪಾಲರಾಯರು ತಲೆಯ ಮೇಲೆ ಎರಡೂ ಕೈಗಳನ್ನಿಟ್ಟು

ಕೊಂಡರು. "ಕೈ ಮೀರಿತು! ಕೈ ಮೀರಿತು! ಇನ್ನು ಎಲ್ಲ ದೈವಾಧೀನ!" ಎಂದು ಅವರು ಬಿಸುಸುಸುಯ್ದರು. ಬೆಳಗಿನ ಜಾವಕ್ಕೆ ಉದಯರಾಗ ಕೇಳಿ ಬರುತಿದ್ದ ಮನೆಯಲ್ಲಿ ದುಃಖದ ಬಿಸಿಯುಸಿರುಗಳು! ಪಕ್ಷಪಾತ ರೋಗ ಹಿಡಿದವರಂತಾಯಿತು ಗೋಪಾಲರಾಯರ ಸ್ಥಿತಿ. ಅವರ ನಾಲಿಗೆಯೇ ಬಿದ್ದಿತು. ಏನು ಮಾಡಬೇಕು, ಏನು ಮಾಡಬಾರದೆಂಬ ಚಿಂತೆಯಿಂದ ಅವರು ದಿನಗಳೆಯುತಿದ್ದಾಗಲೇ ಒಂದು ದಿನ ಅರವಿಂದನ ಪತ್ರ ಬಂದಿತು. "ಭಾವನನ್ನು ಮಂಗಳೂರಲ್ಲಿ ಕಂಡೆ. ಹಂಪನ ಕಟ್ಟೆಯಲ್ಲಿ ಒಂದು ಕಟ್ಟಡದ ಅಟ್ಟದ ಮೇಲೆ ಅವನು ಆಸ್ಪತ್ರೆ ತೆರೆದಿದ್ದಾನೆ. ಆಸ್ಪತ್ರೆಯೆಂದರೆ ಇರುವುದು ಎರಡು ಕೋಣೆಗಳು! "ಎಲ್ಲಿರುತ್ತೀರಿ" ಎಂದು ನಾನು ಕೇಳಿದರೆ ಸರಿಯಾಗಿ ಉತ್ತರವನ್ನು ಕೊಡಲಿಲ್ಲ. ಸಂತೋಷದಿಂದ ಅವನು ಮಾತನಾಡಿಸಲಿಲ್ಲ. ಮೊದಲಿನಂತೆ ಅವನು ಇಲ್ಲ. ಏನೋ ಒಂದು ತರಹ ಇದ್ದಾನೆ. ಮೋರೆ ನಿಸ್ತೇಜವಾಗಿದೆ. ಸಂಪಾದನೆ ವಿಶೇಷವಿದ್ದಂತೆ ತೋರುವುದಿಲ್ಲ...... ನಾನು ದೀಪಾವಳಿ ರಜೆಗೆ ಊರಿಗೆ ಬರುತ್ತೇನೆ. ಬಾಕಿ ಮೊಕ್ತಾ........" ಎಂದು ಅರವಿಂದ ಬರೆದಿದ್ದ.

ಓದಿ, "ನಾನೊಂದು ನೆನಸಿದರೆ ದೈವ ಬೇರೊಂದು ಬಗೆಯಿತು" ಎಂದು ಗೋಪಾಲರಾಯರು ಅಂದುಕೊಂಡರು. ಬೆಳ್ತಂಗಡಿಯಲ್ಲಿ ಆನಂದರಾಯನಿಗೆ ಇರಲು ಇಷ್ಟವಿಲ್ಲವೆಂದು ಅವರು ಊಹಿಸಿದ್ದರು. ಹೇಗಾದರೂ ಮಾಡಿ ಈ ಬಂಗಾಡಿಗೆ ಅವನು ಬರುವಂತೆ ಮನಪ್ಪೊಲಿಸಬೇಕೆಂದು ಯೋಚಿಸಿದ್ದರು. ಇದೇ ಊರಲ್ಲಿ ಕಿಲ್ಲೂರಲ್ಲಿ, ಕೊಲ್ಲಿಯಲ್ಲಿ, ಬಂಗಾಡಿಪೇಟೆಯಲ್ಲಿ, ಇಂದಬೆಟ್ಟನಲ್ಲಿ ಎಲ್ಲಾದರೂ ಒಂದು ಆಸ್ಪತ್ರೆ ತೆರೆಯಲಿ. ಈ ಬಂಗಾಡಿಯಲ್ಲಿ ಡಾಕ್ಟರರೇ ಇಲ್ಲ. ಬೆಳ್ತಂಗಡಿ ದಾಟಿ ಬರಲು ಅವರಿಗೆ ಭಯ. ನಿಜವಾಗಿ ನೋಡಿದರೆ ಇಲ್ಲಿಯ ಸಂಪಾದನೆ ಅವರಿಗೆ ಬೇರೆಲ್ಲಿಯೂ ಆಗಲಾರದು. ಬಂದದ್ದೆಲ್ಲ ದೇವರ ಮುಡುಪಿನ ಹಾಗೆ ಉಳಿಯುತ್ತದೆ. ಮನೆತನಕ್ಕೆ ಅದರಿಂದ ಒಂದು ಪೈಯನ್ನೂ ವೆಚ್ಚಮಾಡಬೇಕಾಗಿಲ್ಲ. ಏಕೆಂದರೆ ಆಸ್ಪತ್ರೆ ತೆರೆಯುವುದಾದರೆ ಬಾಡಿಗೆ ಇಲ್ಲದೆ ಮನೆ ಕೊಡುವ ಪುಣ್ಯಾತ್ಮರಿದ್ದಾರೆ. ಒಕ್ಕಲಿಲ್ಲದ ಮನೆಗಳು ಎಷ್ಟೋ ಇವೆ. ಒಂದು ವೇಳೆ ಬಾಡಿಗೆ ಬೇಡಿದರೂ ಮೂರು ಕಾಸು, ಆರು ಕಾಸು. ಕಟ್ಟಿಗೆಗೆ ಕ್ರಯವಿಲ್ಲ. ನಾಲ್ಕು ಬೀಜಗಳನ್ನೆಸೆದರೆ ಮನೆಯ ಹಿಂದೆ

ಹಸುರುವಾಣಿ ಬೆಳೆಯುತ್ತದೆ. ಹಳ್ಳಿಯವರು ಡಾಕ್ಟರರಲ್ಲಿ ಬಂದಾಗ ಬರಿಗೈ ಬೀಸಿಕೊಂಡು ಬರುವ ಸ್ವಭಾವದವರೂ ಅಲ್ಲ. ಊರಿಗೆ ಉಪಕಾರವಾಗುತ್ತದೆ. ಇವನಿಗಂತೂ ಪ್ರತ್ಯೇಕ ಬಿಡಾರದ ಅವಶ್ಯಕತೆಯೂ ಇಲ್ಲ. ಇಷ್ಟು ದೊಡ್ಡ ಮನೆಯಿದೆ. ತನ್ನ ಮನೆಯೆಂದೇ ತಿಳಿದು ರಾಜನಂತೆ ಇರಬಹುದು. ನನಗೂ ಅದರಿಂದ ಸಂತೋಷವೇ. ನನಗೆ ಬೇರೆ ಮಕ್ಕಳು ಇರುವುದು ಅಷ್ಟರಲ್ಲೇ ಇದೆ. ಇದ್ದ ಒಬ್ಬ ಹುಡುಗ ಕಾಲೇಜಿಗೆ ತೆರಳಿದ್ದಾನೆ. ಮನೆಯಲ್ಲಿ ಬೇರೆ ಯಾರೂ ಇಲ್ಲ. ಆಚಾರಕ್ಕೂ ಆಯಿತು, ಸುಖಕ್ಕೂ ಆಯಿತು ಎಂದಂದ ಹಾಗೆ ನಮಗೂ ಧೈರ್ಯಕ್ಕಾಯಿತು. ನನಗೆ ಇನ್ನು ಯೌವನ ಬರುವುದಿಲ್ಲ ! ಈ ಬಂಗಾಡಿಯಲ್ಲಿ ಐವತ್ತು ವರುಷ ದಾಟಬೇಕಾದರೆ ಕೃತಾವಸ್ಥೆ ! ಹೇಳಿ ನೋಡಬೇಕು. ಒಮ್ಮೆ ಬೆಳ್ತಂಗಡಿಗೆ ಹೋಗಬೇಕು ಎಂದು ಅವರು ಬಗೆದಿದ್ದರು. ಆದರೆ ಈಗೆಲ್ಲ "ತಿರುಕನೋರ್ವ್ವನ ಕನಸಿ"ನಂತಾಯಿತಲ್ಲ!

ಕಾವೇರಿಯಂತೂ ತುಂಬ ಕರಗಿದ್ದಾಳೆ. ಆನಂದರಾಯ ಸಿಡುಕಿನಿಂದ ಹೋದಂದಿನಿಂದ ಅವಳಿಗೆ ಈ ಜೀವವೇ ಭಾರವಾದಂತಾಗಿದೆ. ಅವಳ ಮುಖ ಬಾಡಿದೆ. ಮನಸ್ಸು ಔದಾಸೀನ್ಯ ಹೊಂದಿದೆ. ಧೈರ್ಯದ ಒರತೆ ಬತ್ತಿದೆ. ಬತ್ತಿದ ತೊರೆಯ ಮಳಲನ್ನು ಅಗೆದಂತೆ ಸೆಲೆ ನೀರು ಚಿಮ್ಮುತ್ತದೆ. ಹಾಗೆ ಪ್ರಥಮ ಸಮಾಗಮದ ಸನ್ನಿವೇಶವನ್ನು ಅವಳು ಪುನಃ ಪುನಃ ನೆನಸಿಕೊಂಡಾಗ ಕಣ್ಣೀರು ಸುರಿಯುತ್ತದೆ. ನಾನು ಅವರ ಬಂಧನಾಲಿಂಗನದಿಂದ ತಪ್ಪಿಸಿಕೊಳ್ಳಲೇಕೆ ಯತ್ನಿಸಿದೆ ? ವಾಸಂತಿಯೆಂದು ಅವರು ಕರೆದಾಗ ಕಿವಿಯನ್ನೇಕೆ ಮುಚ್ಚಿಕೊಳ್ಳಲಿಲ್ಲ? ನಾನು ಕಿವುಡಳಾಗಿರುತಿದ್ದರೇ ಸೊಗಸಾಗಿತ್ತು! ಸುಟ್ಟ ಕೋಪವೊಂದು ಅದೇ ಕಾಲಕ್ಕೆ ಬಂದಿತಲ್ಲ ! ಈ ಕಣ್ಣಿನ ಒಳಗೆ ಕಣ್ಣೀರಿನ ಕೆರೆಯೆ ಇದೆಯೋ ಹೇಗೆ? ಅದು ಒಣಗಿ ಹೋಗುವುದಿಲ್ಲವೇಕೆ ! ಅಥವಾ ನೇತ್ರಾವತಿಯ ಕಟ್ಟು ಕಡಿದಾಗ ಹರಿದು ಹೋಗುವಂತೆ ಒಮ್ಮೆ ಅದನ್ನು ಸಂಪೂರ್ಣ ಹರಿಸಿ ಬಿಡುವ ಬಗೆಯಾದರೂ ಗೊತ್ತಿಲ್ಲವಲ್ಲ ! ಅಯ್ಯೋ ! ದುರ್ಭಾಗ್ಯಳೇ !

ಚಿಂತೆ, ದುಃಖ, ಪಶ್ಚಾತ್ತಾಪಗಳಿಂದ ಕಾವೇರಿ ದಗ್ಧಳಾದಳು. ಮಾವಿನ ಚಿಗುರಿನಂತಹ ಅವಳ ತುಟಿಗಳು ಒಣಗಿದುವು. ಗುಲಾಬಿ ಕೆನ್ನೆ ಬಿಳುಪೇರಿತು. ಅತ್ತು ಅತ್ತು ಕಣ್ಣುಗಳು ಗುಳಿ ಸೇರಿದುವು. ತಲೆಯನ್ನು ಬಾಚಿದರೆ ಬಾಚಿ

ದಳು; ಇಲ್ಲದಿದ್ದರೆ ಇಲ್ಲ. ಕೈ ಬೊಗಸೆಯಲ್ಲಿ ಒಂದಿಷ್ಟು ನೀರನ್ನು ತಲೆಗೆ ಪ್ರೋಕ್ಷಿಸಿ ಬೆರಳಿನಿಂದಲೇ ತಿದ್ದಿಕೊಳ್ಳತೊಡಗಿವಳು. ಆಗ ಅದು ಸರಿಯಾಗಿ ಕೂತರೂ ನೀರೊಣಗಿದ ಬಳಿಕ ಹಣೆ, ಕೆನ್ನೆಗಳ ಮೇಲೆ ಎಳೆಗಳು ಹಾರಾಡ ತೊಡಗಿಮವು. ಕೂದಲು ಎಣ್ಣೆಯಿಲ್ಲದೆ ಕೆಂಚು ಮತ್ತು ಗುಂಗುರು ಆಗ ತೊಡಗಿತು. ಅವಳ ಹೃದಯ ಕುದಿವ ಕೊಪ್ಪರಿಗೆಯಾಗಿದೆ. ಕುದಿವ ನೀರಿನ ಆವಿಯಂತೆ ಉಸಿರು ಬಿಸಿಯಾಗಿದೆ. ಅವಳ ಅಂಗಾಂಗ ಸುಡುತ್ತಿದೆ ಯೇನೋ! ದಿನದಿಂದ ದಿನಕ್ಕೆ ಕ್ಷೀಣವಾಗುತಿದ್ದಾಳೆ. ಕಾಫಿಯೆಂದರೆ ಪ್ರಾಣವಾಗಿದ್ದ ಅವಳಿಗೆ ಈಗ ಅದರ ಮೇಲೆ ಇಷ್ಟವಿಲ್ಲ. ತಿಂಡಿ ತಿನಸುಗಳ ಆಸೆಯಿಲ್ಲ. ಅನ್ನ ಆಹಾರಗಳೂ ನಾಲಿಗೆಗೆ ರುಚಿಯಿಲ್ಲ. ಏನೋ ತಾಯಿ ತಂದೆ ಬೈಯುತ್ತಾರೆ, ಬೇಸರಪಡುತ್ತಾರೆ ಎಂದು ಕುಡಿಯುತ್ತಾಳೆ, ತಿನ್ನು ತ್ತಾಳೆ, ಅಷ್ಟೆ! ರಾತ್ರಿ ಕಣ್ಣಿಗೆ ನಿದ್ರೆಯೇ ಹಿಡಿಯುವುದಿಲ್ಲ. ಸದಾ ನಗು ಬೀರಬೇಕಾಗಿದ್ದ ಮೊಗ ಹೊಗೆಮೊಗವಾಗಿದೆ. ನೋಟದಲ್ಲಿ ಪ್ರೇಮದ ಕಾಂತಿಯಿಲ್ಲ. ದಿನಕ್ಕೆರಡು ಮೂರು ಸಲ ಸೀರೆ ಬದಲಾಯಿಸಿ ನಿರಿ ಸೆರಗು ಹಾರಿಸುತ್ತ ಪತಿಯ ಮನ ಸೆಳೆಯಬೇಕಾಗಿದ್ದ ಅವಳು ದಿನಕ್ಕೊಮ್ಮೆ ದಿನ ನಿತ್ಯದ ಸೀರೆಯನ್ನು ಸ್ನಾನ ಮಾಡುವಾಗ ಅಷ್ಟು, ಬದಲಾಯಿಸುತ್ತಾಳೆ. ಪತಿಯೊಂದಿಗೆ ಏಕ ದೇಹದಂತೆ ಮಿಲನ ಸುಖ ಸೌಖ್ಯ ಪಡೆಯಬೇಕಾಗಿದ್ದ ಕಾವೇರಿ ಹತಾಶೆಯಿಂದ ವ್ಯಥೆಯೊಂದಿಗೆ ಬೆರೆತಿದ್ದಾಳೆ. ಪತಿಗೃಹದಲ್ಲಿರಬೇ ಕಾದವಳು ಇನ್ನೂ ತವರು ಮನೆಯಲ್ಲೇ ಇರುವಳಲ್ಲ! ಹೆಣ್ಣಿನ ದುಃಖಕ್ಕೆ ಅದೊಂದೇ ಸಾಕು!

ಕಾವೇರಿ ದುಃಖಿಯಾಗಿದ್ದರೂ ಹೊರಗೆ ಅದನ್ನು ತೋರಿಸಿಕೊಳ್ಳುವು ದಿಲ್ಲ. ತನ್ನ ಕೋಣೆಯಲ್ಲೆ ಸದಾಗಾಲ ಬಾಗಿಲಿಕ್ಕಿಕೊಂಡು ಅಳುತ್ತಾ ಬಿದ್ದಿರುವದಿಲ್ಲ. ಅಳಲು ಅವಳಿಗೆ ರಾತ್ರಿ ಕಾಲ ಇದೆಯಲ್ಲ! ಹಗಲು ಮನೆಗೆ ಲಸದಲ್ಲಿ ಹೊತ್ತು ಹೇಗೋ ಹೋಗುತ್ತದೆ. ಆದರೂ ಒಮ್ಮೊಮ್ಮೆ ಅವಳ ಕೈಗಳು ಪಾತ್ರೆಗಳನ್ನು ತಿಕ್ಕುತ್ತಾ ಇರುತ್ತವೆ. ದೃಷ್ಟಿ ಒಂದು ಕಡೆ, ಚಿತ್ತ ಇನ್ನೊಂದೆಡೆ. ಒಂದು ದಿನ ಹಾಗೆ ಬಾವಿ ಕಟ್ಟೆಯಲ್ಲಿ ಬೆಳಿಗ್ಗೆ ಅವಳು ಲೋಟಗಳಿಗೆ ಹುಣಸೆಹಣ್ಣು ಪೂಸಿ, ಬೂದಿಯಿಂದ ತಿಕ್ಕುತಿದ್ದಳು. ಆಗ ಒಂದು ಹಾತೆ ಹಾರಿ ಬಂತು. ಅಂದವಾದ ಒಂದು ಹೂವಿನ ಸುತ್ತಲೂ

ಸುಳಿಯತೊಡಗಿತು. ಅದನ್ನು ಕಂಡ ಕಾವೇರಿಯ ಕಣ್ಣಿನಿಂದ ಒಂದು ಹನಿ ನೀರುದುರಿತು. ಅವಳು ಮೋರೆಯನ್ನು ಎಡಬಲ ಭುಜಗಳಿಗೆ ಸರಿಸಿ ಕಣ್ಣು ಗಳನ್ನೊರಸಿಕೊಂಡಳು. ಪುನಃ ಹಾತೆಯನ್ನು ನೋಡಿದಳು. ಅದು ಮತ್ತೊಂದು ಹಾತೆಯ ಬೆನ್ನ ಹಿಂದೆ ಹಾರುತಿತ್ತು. ಕುಳಿತ ಕಾವೇರಿ ಎದ್ದು ನಿಂತು ನೋಡಿದಳು. ಆ ಹಾತೆ ಇತ್ತ ಮತ್ತೆ ಬರಲಾರದೇ ಎಂದು ಯೋಚಿಸತೊಡಗಿದಳು.

ಇನ್ನೊಂದು ದಿನ ದನಕರುಗಳನ್ನು ಮೇಯಿಸುವ ಹುಡುಗ ಬಂದಿರಲಿಲ್ಲ. ಜಲಜಮ್ಮ ಹಟ್ಟಿಗೆ ಬಂದು ಅವುಗಳ ಹಗ್ಗ ಬಿಚ್ಚಿದರು. "ಗುಡ್ಡದ ವರೆಗೆ ನೀನು ಹೊಡೆದು ಬಾ'' ಎಂದು ಮಗಳನ್ನು ಕಳಿಸಿದರು. ದನಕರುಗಳ ಹಿಂದೆ ಅವಳು ಹೋದಳು. ಕರೆವ ಗೋದಾವರಿ ಹೋಗಲೊಲ್ಲದು. ಅವಳ ಸಮೀಪ ಬಂದಿತು. ಕಾವೇರಿ ಬಗ್ಗಿ ಅದರ ಮೋರೆ ಕುತ್ತಿಗೆಗಳ ಮೇಲೆ ಕೈ ಆಡಿಸಿದಳು. ಗೋದಾವರಿ ಅವಳ ಕೈ, ಕೆನ್ನೆಗಳನ್ನು ನೆಕ್ಕತೊಡಗಿತು. "ಈ ಬಾಯಿ ಬಾರದ ಪಶುವಿಗೂ ನನ್ನ ಮೇಲೆ ಇಷ್ಟು ಪ್ರೇಮವಿದೆ. ನಿಮಗಿಲ್ಲದಂತಾಯಿತೇ, ಸ್ವಾಮಿ" ಎಂದು ಅವಳು ನೆನಸಿದಳು. ಫಕ್ಕನೇ ಅವಳ ಕಣ್ಣಲ್ಲಿ ನೀರೂ ಬಂತು. ಗೋದಾವರಿಯ ಮೇಲೆ ರೇಗಿ "ಹೋಗು! ಹೋಗು!'' ಎಂದು ಕೈಯಿಂದಲೇ ಅದರ ಬೆನ್ನು ತಟ್ಟಿದಳು. ಅದು ಹೋಗಲಿಲ್ಲ. ಆಗ ಅಲ್ಲೇ ಇದ್ದ ಒಂದು ಗಿಡದ ಟೊಂಗೆ ಮುರಿದು ಬೆನ್ನಿಗೆ ಹೊಡೆಯುತ್ತ ಗುಡ್ಡಕ್ಕಟ್ಟಿದಳು. ಅಲ್ಲಿಗೆ ಬಂದ ಬಳಿಕ ಅದರ ಆಚೆ ತಪ್ಪಲಲ್ಲಿ ಹಿಂದೊಮ್ಮೆ ತಾನು ಸೈಕಲ್ ನಡೆಸಿದುದು, ಆನಂದರಾಯ ಸೈಕಲ್ ಹಿಡಿದುದು ಅವಳ ಸ್ಮೃತಿಗೆ ಬಂದಿತು. ಅವನು ಈಗಲೂ ಅಲ್ಲಿ ಕಾಣಿಸುತ್ತಾನೋ ಏನೋ ಎಂದು ನೋಡುವವಳಂತೆ ತುದಿಗಾಲಿನಲ್ಲಿ ನಿಂತು ತಪ್ಪಲನ್ನು ನೋಡತೊಡಗಿದಳು. ಅವನು ಅಲ್ಲಿಲ್ಲವೆಂದು ಗೊತ್ತು. ಅವಳು ತಪ್ಪಲನ್ನು ನೋಡುತಿದ್ದರೂ ಅವಳ ಮನೋದೃಷ್ಟಿ ಆಚೆ ಇದೆ. ತನ್ನ ಗಂಡನಿರುವ ಪಶ್ಚಿಮ ದಿಕ್ಕನ್ನು ಅವಳು ನೋಡುತಿದ್ದಾಳೆ. ಎಲ್ಲೋ ಇಲ್ಲೇ, ತಪ್ಪಲಿನ ಮುಳಿಹುಲ್ಲಿನೊಳಗೆ, ಆ ಮರದ ನೆರಳಲ್ಲಿ ಇದ್ದಾನೆ ಎಂಬ ಭಾವನೆಯೋ ಏನೋ! ಆದರೆ ಅವರೀರ್ವರ ನಡುವೆ ಎಷ್ಟೋ ಗುಡ್ಡಗಳಿವೆ, ಅರಣ್ಯಗಳಿವೆ, ಹೊಳೆ ಹಳ್ಳ, ಕಲ್ಲು ಮುಳ್ಳು, ಗದ್ದೆಗಳಿವೆ! ಇದನ್ನು ಫಕ್ಕನೇ ಜ್ಞಾಪಿ

ಸಿಕೊಂಡ ಕಾವೇರಿ ಆಕಾಶದ ಕಡೆ ಮುಖವೆತ್ತಿದಳು. ಪಶ್ಚಿಮದಿಂದ ಮೋಡಗಳು ಅವಳೆಡೆಗೆ ಒಂದರ ಬೆನ್ನ ಹಿಂದೆ ಇನ್ನೊಂದು ಓಡಿ ಬರುತ್ತಿದೆ. ಅವುಗಳ ಆಕಾರವೂ ಚಿತ್ರ ವಿಚಿತ್ರ. ನಾನಾ ಪಶುಪಕ್ಷಿ, ಮೀನ, ಉರಗಗಳ ತಲೆ ಕೈಕಾಲುಗಳನ್ನು ಹೋಲುತ್ತವೆ. ತನ್ನ ಪತಿಯ ರೂಪವನ್ನು ಹೋಲುವುದೊಂದಾದರೂ ಇದೆಯೇ ಎಂದು ಅವಳು ಕಾತರದಿಂದ ಕಂಡಳು. ಅವಳು ಎಷ್ಟು ಹೊತ್ತು ಹೀಗೆ ದಿಟ್ಟಿಸುತ್ತ ನಿಂತಿದ್ದಳೋ! "ಈ ಪಶ್ಚಿಮಾಭಿಮುಖವಾಗಿ ನಾನು ಯಾಕೆ ಹೋಗಬಾರದು." ಎಂಬ ವಿಚಾರ ಬಂತು.

"ಹುಚ್ಚಿ, ಕಲ್ಲುಮುಳ್ಳುಗಳಿವೆ" ಎಂದು ಯಾರೋ ಹೇಳಿದರು.

"ಇದ್ದರೇನಾಯಿತು?"

"ಕಾಡು ಇದೆಯಲ್ಲ?"

"ನನಗೆ ಹೆದರಿಕೆಯೇ?"

"ಹಾವುಗಳಿವೆಯಲ್ಲ!"

"ಕಚ್ಚಲಿ"

"ಹುಲಿ ಹರಿದು ತಿನಬಹುದು".

"ತಿನಲಿ"

"ಊಟಕ್ಕೆ?"

"ಬೇಡ, ಒಟ್ಟು ಸತ್ತರೆ ಸರಿ. ನನಗೇನಾಗಬೇಕು? ಈ ಜೀವದ ಮೇಲಿನ ಆಸೆ ಇಲ್ಲ!"

ಆಗ ಫಕ್ಕನೇ ಮನೆಯಲ್ಲಿ ಕರೆಯುವದು ಕೇಳಿಸಿತು. ಕಾವೇರಿಗೆ ಮೈಮೇಲೆ ಸ್ಮೃತಿ ಬಂತು. ನಾನು ಯಾರೊಡನೆ ಮಾತನಾಡುತಿದ್ದೆ ಎಂದು ಅವಳು ಸುತ್ತಲೂ ನೋಡಿದಳು. ಯಾರೂ ಇರಲಿಲ್ಲ. ಬೆದರಿ ಅಲ್ಲಿಂದ ಮನೆಗೆ ಒಂದೇ ಉಸಿರಿಗೆ ಓಡುತ್ತ ಬಂದಳು.

"ಎಷ್ಟು ಹೊತ್ತನೇ? ಗುಡ್ಡದಲ್ಲಿ ಹಾಗೆ ಒಬ್ಬೊಬ್ಬರೇ ಬಹಳ ಹೊತ್ತು ಇರಬಾರದು. ಅರವಿಂದನಿಗೊಂದು ಪತ್ರ ಬರೆಯಬೇಕಂತೆ. ಅಕೋ ಅವರು ಕರೆಯುತ್ತಾರೆ. ಹೋಗು" ಎಂದು ಜಲಜಮ್ಮ ಹೇಳಿದರು.

ಕಾವೇರಿ ಮಸಿ, ಲೇಖನಿ. ಕಾಗದ, ಕವರ್ ಹಿಡಿದುಕೊಂಡು ಜಗಲಿಗೆ ಬಂದಳು ಗೋಪಾಲರಾಯರು ಒಕ್ಕಣೆ ನುಡಿದರು..."ದೀಪಾವಳಿ ಹಬ್ಬಕ್ಕೆ

ಆನಂದರಾಯರಿಗೆ ಆಮಂತ್ರಣ ಕೊಡು. ನಿನ್ನ ಕಾಲೇಜಿನ ಗಡಿಬಿಡಿಯಲ್ಲಿ ಮರೆಯಬೇಡ. ನೀನು ಬರುವ ಮೊದಲು ಮತ್ತೊಮ್ಮೆ ಅವರಿದ್ದಲ್ಲಿ ಹೋಗು. ಅವರನ್ನು ನಿನ್ನೊಂದಿಗೆ ಕರೆದುಕೊಂಡೇ ಬಾ. ಬಂದೇ ಹೋಗಲು ತಿಳಿಸಿದ್ದೇನೆಂತ ಹೇಳು. ಮತ್ತೆ ಮನಸ್ಸಿನಲ್ಲಿ ಯಾವುದೇ ರೀತಿಯ ಬೇಸರ ತಾಳಬಾರದೆಂದು ತಿಳಿಸು. ಒಂದು ವೇಳೆ ಅವರಿಗೆ ಹಣದ ಅನಾನುಕೂಲತೆ ಇದ್ದರೆ ದಾಕ್ಷಿಣ್ಯ ಮಾಡುವುದು ಬೇಡ. ನಮ್ಮ ಕೈಲಾದ ಸಹಾಯ ಮಾಡಲು ನಾವು ಯಾವಾಗಲೂ ಸಿದ್ಧರು. ಈ ಪತ್ರವನ್ನು ಅವರಿಗೆ ತೋರಿಸು" ಎಂದು ಬರೆಸಿದರು. ಪತ್ರ ಒಂದು ಬದಿಯಲ್ಲಿ ಮುಗಿಯಿತು. "ಅದರ ಹಿಂದೆ ಸ್ಥಳವಿದೆ. ನಿನಗೇನಾದರೂ ಬರೆಯಲಿದ್ದರೆ ಬರೆ" ಎಂದು ಗೋಪಾಲರಾಯರು ಹೇಳಿದರು. ಕಾವೇರಿ ಅವುಗಳನ್ನೆಲ್ಲ ತನ್ನ ಕೋಣೆಗೆ ತೆಗೆದುಕೊಂಡು ಬಂದು "ನನ್ನ ಸರ್ವಾಪರಾಧಗಳನ್ನು ಕ್ಷಮಿಸಿರಿ. ದೀಪಾವಳಿಗೆ ಅಗತ್ಯ ಬನ್ನಿರಿ" ಎಂದು ಅವಳು ಬರೆದಳು. ಬರೆದಾದ ಮೇಲೆ "ಅಯ್ಯೋ! ಇದು ಅರವಿಂದನಿಗೆ ಬರೆದ ಪತ್ರ. ಅದರ ಹಿಂದೆ ನಾನು ಅವನಿಗೆ ಬರೆಯಬೇಕಾಗಿತ್ತಲ್ಲ" ಎಂದು ಅವಳು ಪಶ್ಚಾತ್ತಾಪಪಟ್ಟು, ಬರೆದುದನ್ನು ಹೊಡೆದಳು. ಅವಳ ಕಣ್ಣಿಂದ ಒಂದು ಹನಿ ಅದರ ಮೇಲೆ ಬಿದ್ದು, ಅಕ್ಷರಗಳ ಮೇಲಿನ ಮಸಿ ಹಬ್ಬಿತು.

ಪತ್ರ ಬರೆವ ಅವಳ ಆಸೆ ಅಷ್ಟಕ್ಕೆ ನಿಂತು ಹೋಯಿತಾದರೂ ದೀಪಾವಳಿಗೆ ಬರುತ್ತಾರೆಂಬ ಆಸೆ ಚಿಗುರಿತು. ದೀಪಾವಳಿಗೆ ಇನ್ನು ಎಷ್ಟು ದಿನಗಳಿವೆಯೆಂದು ಕೈ ಬೆರಳುಗಳನ್ನು ಮಡಚಿ ಲೆಕ್ಕಮಾಡಿದಳು. ಅವರು ಬಂದಾಗ ಹೇಗಿರಬೇಕೆಂದು ಎಣಿಕೆ ಹಾಕಿದಳು. ಯಾವಾಗಲೂ ನಗುವೆ. ಮುನಿಸು ತೋರೆ ಬಿಡುವೆ. ಕಣ್ತುಂಬ ನೋಡುವೆ. ಅವರ ಕಾಲಿಗೆ ಮಣಿದು ಕ್ಷಮೆ ಕೇಳುವೆ. ನನ್ನ ಈ ತೋಳುಗಳಿಂದ ಅವರನ್ನು ಆಲಿಂಗಿಸಿಕೊಳ್ಳುವೆ. ಒಂದು ಕ್ಷಣ ಅಗಲಲಾರೆ. ಒಂದೆ ದಿನ ಇದ್ದು ಹೋಗಲು ಬಿಡಲಾರೆ. ಅವರಿಲ್ಲದೆ ಒಂದು ದಿನವೂ ಇನ್ನು ಇಲ್ಲಿರಲಾರೆ. ಓ ದೇವ! ನನ್ನ ಮೇಲೆ ಕೃಪೆದೋರು. ನನ್ನ ಪತಿ ಒಮ್ಮೆ ಬರುವಂತೆ ಕರುಣಿಸು. ಅವರ ಕಠಿಣ ಹೃದಯವು ಈ ಭಾಗ್ಯಹೀನಳನ್ನು ನೆನಸಿ ಕರಗುವಂತೆ ಮಾಡು. ಸ್ವಾಮಿ, ನನ್ನ ಕಷ್ಟ ಪರಿಹರಿಸು! ಈ ಜನ್ಮದಲ್ಲಿ ಈ ರೀತಿಯ ದುಃಖ ಏಕೆ ಬಂತೋ

ಕಾಣೆನಲ್ಲ ! ಹಿಂದಿನ ಜನ್ಮದಲ್ಲಿ ಮಾಡಿದ ಪಾಪ ಬೆನ್ನು ಹತ್ತಿತೊ ? ನಿನ್ನ ಪಾದಕ್ಕೆ ಬಿದ್ದೆ ಪ್ರಭೋ, ನನ್ನನ್ನು ಪೊರೆ'' ಎಂದು ಅವಳು ಮೊರೆಯಿಡ ತೊಡಗಿದಳು !

ದೀಪಾವಳಿ ದಿನ ದೇವರ ಮುಂದೆ ಕಾಲುದೀಪಗಳನ್ನು ಬೆಳಗಿಸಿದರು. ತುಳಸಿಕಟ್ಟೆಯ ಬಳಿ ನೀಲಾಂಜನ ಹೊತ್ತಿಸಿದರು. ಹೆಬ್ಬಾಗಿಲಿನ ಇಮ್ಮಗ್ಗ್ಗಲುಗಳಲ್ಲಿ ಹಣತೆ ಹಚ್ಚಿದರು. ಗದ್ದೆಗಳ ಮೂಲೆಯಲ್ಲಿ ಕೋಲು ನಿಸೆ ಉರಿಸಿದರು. ಎಲ್ಲ ಕಡೆಯಲ್ಲೂ ದೀಪ ! ಎಲ್ಲಿ ನೋಡಿದರೂ ಬೆಳಕು ! ಆದರೆ ಸ್ವತಃ ಅವಳ ಕಣ್ಣಿಗೆ ಕತ್ತಲೆ! ಅರವಿಂದನೊಂದಿಗೆ ಆನಂದರಾಯ ಬರಲಿಲ್ಲ.

ಈ ನಿರಾಸೆಯಲ್ಲಿಯೂ ಒಂದು ಆಶಾಕಿರಣ ಕಾಣಿಸಿದೆ.

"ನನಗೆ ಕೆಲಸವಿದೆ. ಬರಲಿಕ್ಕಾಗುವುದಿಲ್ಲ. ನೀನು ಬರುವಾಗ ಅವಳನ್ನು ಕರೆದುಕೊಂಡು ಬಾ.'' ಎಂದು ಆನಂದರಾಯ ಹೇಳಿದ್ದನಂತೆ.

"ಮನೆ?'' ಎಂದು ಅರವಿಂದ ಪ್ರಶ್ನಿಸಿದ್ದನಂತೆ.

"ಅದು ನಿನಗೇಕೆ ? ಮನೆಯಿಲ್ಲದೆ ಕರೆಸುತ್ತೇನೇನು ? ಇಲ್ಲವೆಂದೇ ತಿಳಿ. ಇಲ್ಲೇ ಸ್ಥಳವಿದೆ. ಹೋಟೇಲು ಇಲ್ವಾ ? ಇಷ್ಟವಿದ್ದರೆ ಇಲ್ಲಿಯ ವರೆಗೆ ಕರಕೊಂಡು ಬಾ. ಇಲ್ಲದಿದ್ದರೆ ಅಲ್ಲೇ ಇರಲಿ. ನಾನಂತೂ ಬರುವುದಿಲ್ಲ" ಎಂದು ಗದರಿಸಿದ್ದನಂತೆ.

ಅರವಿಂದನ ಬಾಯಿಂದ ಅದನ್ನು ಕೇಳಿದ ಗೋಪಾಲರಾಯರಿಗೆ ಸಂತೋಷಕ್ಕಿಂತ ಅಸಮಾಧಾನವೇ ಹೆಚ್ಚಾಯಿತು. ಕಳಿಸಿದರೆ ಏನಾಗುತ್ತದೋ ? ಮನೆ ಹುಡುಕಿದ್ದಾನೋ ? ಅಥವಾ ಆಸ್ಪತ್ರೆಯಲ್ಲೇ ಇದ್ದಾನೋ ? ಆ ಪೇಟೆ ಮಧ್ಯದಲ್ಲಿ ಹೇಗಿರುತ್ತಾಳೆ ?– ಕಳಿಸಿದರೆ ಇದೊಂದು ಚಿಂತೆ. ಕಳಿಸದಿದ್ದರೆ ಮತ್ತೆ ಮಹಾರಾಯ ಅದೇ ತಪ್ಪನ್ನು ಪರ್ವತದಷ್ಟು ಮಾಡಿ ಮುಂದೇನು ಮಾಡುತ್ತಾನೋ–ಕಳಿಸದಿದ್ದರೆ ಈ ಎರಡನೇ ಚಿಂತೆ ! ಆದುದರಿಂದ ಕಳಿಸಬೇಕೋ ಬೇಡವೋ ಎಂದು ಅವರು ಉಭಯ ಸಂಕಟದಲ್ಲಿ ಸಿಲುಕಿದರು. ಒಮ್ಮೆ "ನಾನೇ ಹೋಗಿ ಬರುತ್ತೇನೆ'' ಎಂದು ನಿರ್ಣಯಿಸಿದರು. "ಬೇಡ ! ನೀವು ಹೋದರೆ ನನ್ನಾಣೆ ! ನೀವು ಸುಮ್ಮನಿರುವವರಲ್ಲ. ಗುದ್ದಾಡಿ ಬರುತ್ತೀರಿ'' ಎಂದು ಜಲಜಮ್ಮ ತಡೆದರು. "ಹುಡುಗಿಯನ್ನು ಬಿಟ್ಟು ಬರಲಿಕ್ಕಾದರೂ ನನ್ನನ್ನು ಕಳಿಸುತ್ತೀಯಾ ?"

ಎಂದು ಅವರು ಪ್ರಶ್ನಿಸಿದರು. ಅದೂ ಜಲಜಮ್ಮನವರಿಗೆ ಸರಿದೋರಲಿಲ್ಲ. "ಅರವಿಂದ ಹೇಗೂ ಕಾಲೇಜಿಗೆ ಹೋಗುವವನಿದ್ದಾನೆ. ಅವನೇ ಕರೆದೊಯ್ಯುತ್ತಾನೆ. ಅವನೇನು ಸಣ್ಣ ಮಗುವಲ್ಲ. ನೀವು ಸುಮ್ಮನಿರಿ. ಅವಳ ಗಂಡನ ಮುಂದೆ ಒಪ್ಪಿಸಿ ಬಿಡಲಿ. ಆ ಮೇಲೆ ಮಾರಾಯ ತನ್ನ ಇಷ್ಟ ಬಂದಂತೆ ನಡೆಸಿಕೊಳ್ಳಲಿ. ಮನೆ ಅವನು ಹುಡುಕಿರಬಹುದು. ಇಲ್ಲದಿದ್ದರೆ ಕರೆದು ತಾ ಎಂದು ಯಾಕೆ ಹೇಳುತ್ತಾನೆ? ಒಂದು ವೇಳೆ ಮನೆಯೇ ಸಿಕ್ಕಿಲ್ಲವೆಂದೆನ್ನೋಣ! ಬೀದಿಪಾಲು ಮಾಡುತ್ತಾನೇನು? ಆಸ್ಪತ್ರೆಯಲ್ಲೇ ಇರಲಿಕ್ಕೆ ಸ್ಥಳವಿರಬಹುದು. ಅಲ್ಲೇ ಇರುತ್ತಾರೆ. ಅಡಿಗೆ ಮಾಡಲಿಕ್ಕಾಗದಿದ್ದರೆ ಹೋಟೇಲಿನಿಂದ ತರಿಸುತ್ತಾರೆ. ಮುಂಬಯಿಯಲ್ಲಿ ಒಂದು ಸಣ್ಣ ಕೋಣೆಯಲ್ಲಿ ಪರದೆ ಹಾಕಿ ಎರಡು ಸಂಸಾರ ಮೂರು ಸಂಸಾರ ಸಾಗಿಸುತ್ತಾರೆಂದು ನೀವು ಹೇಳಿದ್ದೀರಿ. ಮುಂಬಯಿಯಲ್ಲಾದುದು ಮಂಗಳೂರಲ್ಲಿ ಯಾಕಾಗಬಾರದು? ಅವರ ಇಷ್ಟ! ಇಷ್ಟ ಬಂದಂತೆ ಮಾಡಿಕೊಳ್ಳಲಿ! ಅದನ್ನೆಲ್ಲ ಹಗಲಿರುಳು ಚಿಂತಿಸಿದರೆ ಮರುಳು ಹಿಡಿದೀತು ತಲೆಗೆ" ಎಂದವರು ನುಡಿದರು. ಹೀಗಾಗಿ ಅರವಿಂದನೊಂದಿಗೆ ಅವಳನ್ನು ಕಳಿಸುವುದೆಂದು ನಿಶ್ಚಯವಾಯಿತು.

ಬೆಳ್ತಂಗಡಿಯ ವರೆಗೆ ಕಾವೇರಿಯನ್ನು ನಡೆಸಲು ಯಾರಿಗೂ ಇಷ್ಟವಿಲ್ಲ. ಕಾವೇರಿ ನಡೆಯಲು ಸಮರ್ಥಳಿದ್ದರೂ ಪ್ರಥಮ ಸಲ ಕಳಿಸಿದಾಗ ಅದು ಅನುಚಿತವೆಂದು ತಂದೆಯ ವಿಚಾರ. ಅಲ್ಲದೆ ಅವಳ ಸೀರೆ ರವಕೆ ಆಭರಣಗಳ ಪೆಟ್ಟಿಗೆಯೂ ಇದೆ. ಹೋದಾಗ ಸ್ವಲ್ಪ ಉಪ್ಪಿನಕಾಯಿ, ಹಪ್ಪಳ, ಸೆಂಡಿಗೆ, ಹಸುರುವಾಣಿ ಕೂಡ ಕೊಡಲು ಜಲಜಮ್ಮನವರ ಆತುರ. ಆದುದರಿಂದ ಕಿಲ್ಲೂರ್ ಹೊಳೆಯ ಆಚೆಗಿರುವ ಬ್ಯಾರಿಯೊಬ್ಬನ ಗಾಡಿಯನ್ನೇ ಗೊತ್ತು ಮಾಡಿದರು. ರಾಮುಗೌಡನ ಗಾಡಿ ಹೊಳೆ ಈಚೆಗಿದೆ. ಗಟ್ಟದಿಂದ ಅವನ ಎತ್ತುಗಳು ಬಂದಿವೆಯಾದರೂ ಕಾಲಿಗೆ ಇನ್ನೂ ಲಾಳ ಬಿಗಿದಿಲ್ಲ. ಅವನ ಗಾಡಿಯಾದರೆ ರಾತ್ರಿ ಪಯಣ ಮಾಡಲೂ ಅಂಜಿಕೆಯಿಲ್ಲ. ಈಗ ಮಾತ್ರ ಅವರು ನಸು ಬೆಳಿಗ್ಗೆ ಗಾಡಿ ಕಟ್ಟಿಸಿದರು. ಅದು ಬೆಳ್ತಂಗಡಿ ಮುಟ್ಟಿದಾಗ ಮಧ್ಯಾಹ್ನವಾಯಿತು. ಗಟ್ಟದಿಂದ ಬಸ್‌ಗಳು ಒಂದರ ಹಿಂದೊಂದು ಇಳಿವ ಹೊತ್ತು ಕೂಡ ಅದೇ. ಇಬ್ಬರಿಗೆ ಸೀಟು ಸಿಗುವುದು ಕಡುಕಷ್ಟವೆನಿ

ಸಲಿಲ್ಲ. ಮಂಗಳೂರಿಗೆ ಮುಟ್ಟಿದಾಗ ಸಾಯಂಕಾಲವಾಯಿತು.

ಮೋಟಾರ ನಿಲ್ದಾಣದಲ್ಲಿ ಕಾವೇರಿಯನ್ನು ನಿಲ್ಲಿಸಿ ಅರವಿಂದ ಆನಂದ ರಾಯನ ಆಸ್ಪತ್ರೆಗೆ ಬಂದ. ಒಬ್ಬಿಬ್ಬರು ಗಿರಾಕಿಗಳಿದ್ದುದರಿಂದ ಅವನು ಬರಲಿಲ್ಲ. ಅರವಿಂದನಿಗೆ ಉರ್ವದ ಮನೆಯ ಗುರುತು ತಿಳಿಸಿ "ನೀವು ಹೋಗಿ, ನಾನು ಆ ಮೇಲೆ ಬರುತ್ತೇನೆ" ಎಂದ. ಉರ್ವ ಅರವಿಂದನಿಗೆ ಹೊಸತೂ ಅಲ್ಲ. ಕಾಲೇಜ್ ಹುಡುಗರೊಂದಿಗೆ ಅನೇಕ ಸಲ ಅವನು ಆ ರಸ್ತೆಯಲ್ಲಿ ತಿರುಗಾಡಿದುದುಂಟು. ಮನೆ ಹುಡುಕುವುದೂ ಕಷ್ಟವಲ್ಲ. ಆದರೆ ಮನೆಯನ್ನು ಆನಂದರಾಯ ಹುಡುಕಿದುದು ಯಾವಾಗ? ಯಾರೂ ವಾಸಿಸುತಿದ್ದಿಲ್ಲವಾದರೆ ಬೀಗ ಹಾಕಿರಬೇಕಾಗಿತ್ತು. ಆನಂದರಾಯ ಆಸ್ಪತ್ರೆ ಯಲ್ಲೇ ಇರುವವನಲ್ಲ! ಬೀಗದ ಕೈ ಕೊಡಲು ತಪ್ಪುತಿದ್ದಿಲ್ಲ. ಹಾಗಿರುವಾಗ ಆ ಮನೆ ಯಾರದು; ಅಲ್ಲಿ ಯಾರಿರುತ್ತಾರೆಂದು ಅಣ್ಣ ತಂಗಿ ಜಟ್ಕಾದಲ್ಲಿ ಕುಳಿತು ತೆರಳಿದಾಗ ಚರ್ಚಿಸಿದರು. ಮನೆ ಹುಡುಕಿ ತಾಯಿ ತಂದೆಯನ್ನು ಕರೆಸಿಕೊಂಡಿರಲೂ ಸಾಕು. ಅಥವಾ ಬಳಗದವರ ಮನೆಯೋ ಏನೋ ಎಂದವರು ಸಂತೈಸಿಕೊಂಡರು. ಆನಂದರಾಯ ಸೂಚಿಸಿದಂತೆ ಅವರು ಒಂದು ಶಾಲೆ ದಾಟಿದರು, ಹಲಸಿನ ಕಟ್ಟೆಯ ಬಲಕ್ಕಿದೆ. "ಓಹೋ! ಇಲ್ಲೇ ಈ ಸಂಕದ ಹತ್ತಿರ. ನಿಲ್ಲಿಸು" ಎಂದು ಅರವಿಂದ ಹೇಳಿದ. ಮಾರ್ಗದ ಬದಿ ಜಟ್ಕಾ ನಿಂತಿತು. ಅರವಿಂದ ಮೊದಲು ಇಳಿದು "ನೀನು ಕುಳಿತಿರು. ನಾನು, ಹೌದೋ ಅಲ್ಲವೋ ಎಂದು ನೋಡಿ ಬರುತ್ತೇನೆ" ಎಂದು ಹೇಳಿ ಹೋದ. ದಡಬಡ ಬೂಟುಗಾಲುಗಳ ಸದ್ದು ಕೇಳಿ ಮನೆಯೊಳಗಿನಿಂದ ವಾಸಂತಿ ಹೊರಗೆ ಮುಖಮಂಟಪಕ್ಕೆ ಬಂದಳು. ಅರವಿಂದ ಅಂಗಳದಲ್ಲಿ ನಿಂತು ಅವಳನ್ನು ನೋಡಿದ. ಈ ಮನೆಯಲ್ಲ, ಇದು ಬೇರೆ ಯಾರದೋ ಇರಬೇಕು. ಪ್ರಾಯಶಃ ರಸ್ತೆಯ ಆಚೆ ಮಗ್ಗುಲಲಿರಬೇಕು ಎಂದು ಅವನು ಯೋಚಿಸಿದ. ಆದರೂ "ಡಾಕ್ಟರ್ ಆನಂದರಾಯರು ಎಲ್ಲಿರುತ್ತಾರಮ್ಮಾ?" ಎಂದು ಪ್ರಶ್ನಿಸಿದ.

"ಅವರು ಹಂಪನಕಟ್ಟೆಯಲ್ಲಿರುತ್ತಾರೆ" ಎಂದು ವಾಸಂತಿ ಉತ್ತರ ವಿತ್ತಳು.

"ಇಲ್ಲೆಲ್ಲೋ ಅವರ ಮನೆ ಇದೆಯಂತೆ!"

"ಇದೇ ! ಇದೇ ಮನೆ !''

ಅರವಿಂದ ಆಶ್ಚರ್ಯಪಟ್ಟ. ಅವನು ಅಂಗಳದಿಂದ ಮುಖಮಂಟಪದ ಮೆಟ್ಟಲುಗಳನ್ನೇರತೊಡಗಿದ. ವಾಸಂತಿ ಹಿಂದೆ ಹಿಂದೆ ಹೋಗಿ ಬಾಗಿಲಿ ನೆಡೆ ನಿಂತುಕೊಂಡಳು. ಅರವಿಂದ ಒಂದು ಕಾಲನ್ನು ಮುಖಮಂಟಪಕ್ಕೆ ಎತ್ತಿಟ್ಟು ಅವಳನ್ನೇ ದಿಟ್ಟಿಸಿ "ನೀವು ಅವರಿಗೇನಾಗಬೇಕು?" ಎಂದು ಕೇಳಿದ.

ವಾಸಂತಿ ಉತ್ತರ ಕೊಡಲು ಬಾಯಿ ತೆರೆದಳು. ಆದರೆ ಅವಳು ಏನು ಹೇಳಬೇಕು ? ಆನಂದರಾಯನಿಗೆ ಅವಳು ಏನಾಗಬೇಕು ? ಹೆಂಡತಿಯೆ ನ್ನಲೇ ? ಹೆಂಡತಿ ಬಂಗಾಡಿಯಲ್ಲಿರುವಳು. ಅವಳು ಅವನ ಸೂಳೆ ! ಆ ಸ್ವಪ್ರಜ್ಞೆ ವಾಸಂತಿಗೆ ಬಂದು ಚೇಳು ಕಚ್ಚಿದಂತಾಯಿತು. ಆ ನೋವಿನಿಂದ ಸಿಟ್ಟು ಬಂದಿತು. ಅರವಿಂದನನ್ನು ಅವಳು ದುರದುರನೆ ನೋಡಿ "ಡಾಕ್ಟರರು ಬೇಕಾಗಿದ್ದರೆ ಆಸ್ಪತ್ರೆಗೆ ಹೋಗಿ. ಅವರು ಇಲ್ಲಿಲ್ಲ !" ಎಂದು ಜಿರುನುಡಿ ಆಡಿ ಬೆನ್ನು ತಿರುಗಿಸಿ ಒಳಗೆ ಹೋದಳು. ಅರವಿಂದ ಇಳಿದು ಬಂದ. ಜಟ್ಕಾ ಇದ್ದಲ್ಲಿ ಬಂದು ತಂಗಿಗೆ ನಡೆದುದನ್ನು ಹೇಳಿದ. ಆಗ ಕಾವೇರಿಗೆ ಸಂದೇಹವಾಯಿತು. ಅವಳು ಪ್ರಾಯಶಃ ತನ್ನ ಗಂಡನ ಸೂಳೆ, ವಾಸಂತಿ ಯೆಂದು ಅವಳಿಗೆ ಹೊಳೆಯಿತು. ಅದನ್ನವಳು ಅಣ್ಣನ ಮುಂದೆ ಪಿಸುಗು ಟ್ಟಲು "ನಾನು ಹೆಸರು ಕೇಳಲಿಲ್ಲ. ತಡಿ, ತಡಿ. ಕೇಳಿ ಬರುತ್ತೇನೆ. ನನ ಗೇನು ಅವಳ ಹೆದರಿಕೆ ?'' ಎಂದು ಅವನು ಪುನಃ ಮನೆಗೆ ಬಂದ. ವಾಸಂತಿ ಮಂಟಪದಲ್ಲಿ ಓರೆಯಾಗಿ ನಿಂತು ಜಟ್ಕವನ್ನೇ ನೋಡುತಿದ್ದಳು. ಅರವಿಂದ ಬಂದು "ನಾನು ಕೇಳಿದೆನಂತ ಸಿಟ್ಟಾಗಬೇಡಿ. ನಿಮ್ಮ ಹೆಸರು ವಾಸಂತಿ ಯಲ್ಲ?'' ಎಂದು ಅವನು ಪ್ರಶ್ನಿಸಿದ.

"ಹೌದು" ಎಂಬ ಎರಡಕ್ಷರ ಅವಳ ಬಾಯಿಂದ ಬಂತು.

"ನೀವು ಯಾರು ?" ಎಂದು ಅವಳು ಪ್ರತಿಪ್ರಶ್ನೆ ಹಾಕಿದಳು.

ಆದರೆ ಅರವಿಂದ ಓಡಿ ಹೋಗಿದ್ದ. ಅವನ ಬೂಟುಗಾಲಿನ ಸಪ್ಪಳ ದಲ್ಲಿ ಅವಳ ಪ್ರಶ್ನೆ ಅಡಗಿತು. "ಹೌದು ! ವಾಸಂತಿ !'' ಎಂದವನು ಬಂದು ತಂಗಿಗೆ ಹೇಳಿದ. ಜಟ್ಕದಲ್ಲಿ ಕುಳಿತೇ ಇದ್ದ ಕಾವೇರಿ ತಕ್ಷಣ ಹಣಕಿ ಮನೆಯ ಕಡೆ ನೋಡಿದಳು. ವಾಸಂತಿಯ ಅಲ್ಪಸ್ವಲ್ಪ ಸ್ವರೂಪ ದರ್ಶನವಾಯಿತು ಅವಳಿಗೆ. ಆಗ ಕಾವೇರಿಯ ಹೃದಯದಲ್ಲಿ ಸವತಿ ಮತ್ಸರದ ಕಿಡಿ ಪ್ರಜ್ವಲಿ

ಸಿತು. ಅವಳ ಮಾನ ಹಾವಿನಂತೆ ಹೆಡೆ ಅರಳಿಸಿತು. ಮನಸ್ಸು ವಜ್ರದಂತೆ ಕಠೋರವಾಯಿತು. "ಅಣ್ಣಾ! ಹೋಗೋಣ!" ಎಂದು ಅವಳು ನುಡಿದಳು.

ಅರವಿಂದ ಟ್ರಂಕನ್ನು ತೆಗೆಯಲೆತ್ನಿಸಿದ. ಕಾವೇರಿ ಕೇಳಿದಳು: "ಯಾಕೆ ತೆಗೆಯುತ್ತೀ?"

"ಮತ್ತೆ ಇಳಿಯುವುದಿಲ್ಲೇನು, ನೀನು?"

"ಇಲ್ಲ".

ಅರವಿಂದ ಅಚ್ಚರಿಪಟ್ಟು ನುಡಿದ: "ಮತ್ತೆ, ಮತ್ತೆ?"

"ಮತ್ತೆಯಿಲ್ಲ, ಮೆತ್ತೆಯಿಲ್ಲ. ನಾನು ಆ ಮನೆಗೆ ಹೋಗುವುದಿಲ್ಲ. ಅವಳಿದ್ದಾಳೆಂದು ನೀನು ಮೊದಲೇ ನನಗೆ ಯಾಕೆ ಹೇಳಲಿಲ್ಲ? ಹಾಗಿದ್ದರೆ ನಾನು ಬರುತಿದ್ದಿಲ್ಲ."

"ನನಗೆ ಇದು ಗೊತ್ತಿರಲಿಲ್ಲ"

"ಈಗ ಗೊತ್ತಾಯಿತಲ್ಲ!"

ಅರವಿಂದ ದಿಙ್ಮೂಢನಾದ. "ಮತ್ತೆ ನಾನು ಈಗ ಏನು ಮಾಡಲಿ?" ಎಂದು ಕೇಳಿದ.

"ನನ್ನನ್ನು ಊರಿಗೆ ಮುಟ್ಟಿಸು"

"ಈಗ ಮೋಟರಿಲ್ಲಮ್ಮಾ!"

"ನಾಳೆ"

"ಅಲ್ಲಿ ವರೆಗೆ?"

"ಎಲ್ಲಾದರೂ ಇರೋಣ. ಮೊದಲು ಇಲ್ಲಿಂದ ಹೋಗೋಣ."

ಅರವಿಂದ ಜಟ್ಕಾ ಹತ್ತಿ ಕುಳಿತುಕೊಂಡ. ಅದು ಹೊರಳಿ ಹೊರಟು ಹೋಯಿತು.

# ೧೭ ನೇಯ ಅಧ್ಯಾಯ

ಅರವಿಂದ ಕಾವೇರಿಯನ್ನು ಕರೆದುಕೊಂಡು ಬಂದುದನ್ನು ಕೇಳಿ ಆನಂದರಾಯನಿಗೆ ಸ್ವಲ್ಪ ಗಾಬರಿಯಾಯಿತು. ದೀಪಾವಳಿಯ ಮೊದಲು ಅರವಿಂದ ಬಂದಾಗ ಅವನು ಮಾತಿನ ಭರದಲ್ಲಿ ಹಾಗೆ ನುಡಿದಿದ್ದ. ಆದರೆ ಅವನು ಚಾಚೂ ತಪ್ಪದಂತೆ ಪಾಲಿಸಿದುದನ್ನು ನೋಡಿ ಅವನಿಗೆ ಆಶ್ಚರ್ಯ. ಮನೆಯ ವ್ಯವಸ್ಥೆ ಮಾಡಿದ್ದೇನೋ ಇಲ್ಲವೋ ಗೊತ್ತಿಲ್ಲ. ಮನೆಯೆಲ್ಲಿದೆ ಯೆಂದರಿತಿಲ್ಲ. ಮನೆಯಲ್ಲಿ ಸಂಸಾರ ಸಾಗಿಸಲು ಸಕಲ ವಸ್ತುಗಳಿವೆಯೋ ಇಲ್ಲವೋ ಎಂದು ಕಂಡಿಲ್ಲ. ಏಕಾಏಕೀ ಕರೆದು ತಂದನಲ್ಲ ಎಂದು ಆನಂದ ರಾಯ ಅಂದುಕೊಂಡ. ಕಾವೇರಿಯನ್ನು ಬಿಟ್ಟು ಹೋದನೋ! ತಾನೂ ರಾತ್ರಿ ಅಲ್ಲೆ ಉಳಿದನೋ! ಸ್ವತಃ ಅರವಿಂದ ಅಲ್ಲಿರುವುದು ಅವನಿಗೆ ಇಷ್ಟ ವೆನಿಸಲಿಲ್ಲ. ಅರವಿಂದನ ಮೋರೆ ದಿಟ್ಟಿಸಿ ಅವನು ಸಂಭಾಷಿಸುತಿದ್ದುದೂ ಇಲ್ಲ. ಈಗ ಕೂಡ ಇದೇ ಮುಖಹೇಡಿತನದಿಂದ ಅವನು ಬೇಗನೇ ಮನೆಯ ದಾರಿ ಹಿಡಿಯಲಿಲ್ಲ.

ಕಾವೇರಿಯನ್ನು ಸ್ಮರಿಸಿಕೊಂಡಾಗಲೂ ಉರಿಮೋರೆ ಹಾಕಿಕೊಂಡು ಯೋಚಿಸಿದ: ಅದಕ್ಕೊಂದು ಕೋಣೆ ಬಿಟ್ಟುಕೊಟ್ಟರೆ ಸರಿ. ಹೊತ್ತು ಹೊತ್ತಿಗೆ ಒಂದಿಷ್ಟು ಕೂಳು ಕಾಣಿಸಿದ. ಮನೆಯಲ್ಲಿ ಹೇಳಿದ ಹಾಗೆ ಕೇಳಿ ಕೊಂಡು ಬಿದ್ದಿರುತ್ತದೆ. ಮನೆಗೆಲಸಕ್ಕೆ ಒಂದು ಆಳಾಯಿತು. ಸೊಕ್ಕು ಇಳಿ ಯಲಿ! ತವರು ಮನೆಯಲ್ಲಿ ತಿಂದದ್ದೆಲ್ಲ ಕರಗಲಿ! ಹಟ! ಹಟ! ಯಾರ ಮುಂದೆ ಈ ಹಟ?

ಆದರೂ ಅವನ ಎದೆಯಲ್ಲಿ ಒಂದು ರೀತಿಯ ದಿಗಿಲು! ಕತ್ತಲೆಯಾದ ಮೇಲೆಯೇ ಅವನು ಮನೆಯ ಕಡೆ ಹೊರಟ. ಸದ್ದಾಗದಂತೆ ಮನೆಗೆ ಬಂದ. ಪಾಗಾರದ ಬಳಿ ಸ್ವಲ್ಪ ಹೊತ್ತು ನಿಂತು ಮನೆಯನ್ನು ನೋಡಿದ. ಕಿಟಕಿ ಯೊಳಗಿಂದ ಬೆಳಕು ತೋರುತಿತ್ತು. ಮಾತಿಲ್ಲ. ಮುಖಮಂಟಪಕ್ಕೆ ಹತ್ತುವ ಮೊದಲು ಬೂಟುಗಳನ್ನು ತೆಗೆದು ಕಳ್ಳನಂತೆ ಬಾಗಿಲು, ಕಿಟಕಿಗಳ ಬಳಿ ನಿಂತು ಕಿವಿಗೊಟ್ಟ. ನಿಶ್ಶಬ್ದ! ಆ ಮೇಲೆ ಅವನು ಮೆಲ್ಲಗೆ ಬಾಗಿಲು ತಟ್ಟಿದ.

"ಯಾರು?"

ವಾಸಂತಿಯ ದನಿ.

"ನಾನು"

ಅವಳು ಬಂದು ಬಾಗಿಲು ತೆರೆದಳು. ಅವನು "ಅವರೆಲ್ಲಿದ್ದಾರೆ?" ಎಂದು ಕೈ ಸಂಜ್ಞೆಮಾಡಿ ಕೇಳಿದ.

"ಯಾರು?'' ಎಂದವಳು ಮೆಲುವಾಗಿಯೇ ಕೇಳಿದಳು.

"ಕಾವೇರಿ''

"ಕಾವೇರಿ?''

''ಹುಂ! ಇಲ್ಲಿಗೆ ಬಂದಿದ್ದರು. ಅರವಿಂದ ಅವಳನ್ನು ಕರೆದುಕೊಂಡು ಬಂದಿದ್ದ"

ವಾಸಂತಿ ಅವರೀರ್ವರನ್ನೂ ಕಂಡವಳಲ್ಲ. ಅರವಿಂದ ಬಂದು ಡಾಕ್ಟರರನ್ನು ವಿಚಾರಿಸಿದಾಗ ಯಾರೋ ರೋಗಿಯನ್ನು ಜಟ್ಕಾದಲ್ಲಿ ಕರೆದು ತಂದಿರಬೇಕೆಂದು ಅವಳು ಬಗೆದಳು. ಆದರೆ ಆ ಯುವಕ ತನ್ನ ಹೆಸರು ಬಲ್ಲನಲ್ಲ! ಆಗ ಬಂಧು ಬಳಗದವರೇ ಹೇಗೆ ಎಂದು ಅವಳು ಸಂಶಯ ಪಟ್ಟಳು. ನನ್ನ ಬಳಗದವರು ಯಾರಾದರೂ ಇರಬಹುದು. ಅಥವಾ ಅವರ ಬಂಧುಗಳೋ ಏನೋ! ಆದುದರಿಂದ ಯಾರೆಂದು ಅವಳು ಕುತೂಹಲ ದಿಂದ ಕೇಳಿದಳು. ಆದರೆ ಮನೆ ವಿಚಾರಿಸಿದ, ಹೆಸರು ಕೇಳಿದ ಅವರು ಮರಳಿ ಹೋದರೇಕೆ? ಅದು ಅವಳಿಗೆ ಅರ್ಥವಾಗಲಿಲ್ಲ. ಜಟ್ಕಾದ ಬಳಿ ಅವರೇನೋ ಪಿಸು ಪಿಸು ಮಾತನಾಡುತ್ತಿದ್ದರೆಂದು ಗೊತ್ತಾದರೂ ಅದೇನೆಂದು ಕೇಳಿಸಲಿಲ್ಲ. ಆದರೆ ಜಟ್ಕಾ ಹೊರಟ ಬಳಿಕ "ಅದರೊಳಗೆ ಕುಳಿತವಳು ಕಾವೇರಿಯೇ ಹೇಗೆ?" ಎಂಬ ಒಂದು ಸಂದೇಹ ಅವಳ ತಲೆಯಲ್ಲಿ ಸುಳಿದು ಹೋಗದೇ ಇರಲಿಲ್ಲ." ಕಾವೇರಿಯಾಗಿದ್ದರೆ ಇಳಿಯದೆ ಹೋಗುತ್ತಾಳೆ ಎಲ್ಲಿಗೆ'' ಎಂಬ ಮತ್ತೊಂದು ವಿಚಾರ! ಯಾರೋ ಡಾಕ್ಟರರ ಸ್ನೇಹಿತರಿರಬಹುದು ಎಂದು ಅವಳು ಸುಮ್ಮನಾದಳು. ಈಗ ಆನಂದರಾಯ ಬಂದು ಕೇಳಿದ ಬಳಿಕ ಅವಳ ಆ ಭ್ರಮನಿರಸನವಾಯಿತು! ಏನು ಉತ್ತರ ಕೊಡಬೇಕೆಂದು ಅವಳು ಗಾಬರಿಗೊಂಡಳು. ಬಂದಿದ್ದರು ಎನಲೇ, ಇಲ್ಲ ಎನಲೇ? ಈ ವಿಚಾರದ್ವಂದ್ವಕ್ಕೊಳಗಾದ ವಾಸಂತಿ ಕೊನೆಗೆ ನಡೆದುದನ್ನು ತಿಳಿಸಿದಳು.

ಆನಂದರಾಯ ಸಂಬಲಿಲ್ಲ. ಹೇಳಿದ: "ಇಲ್ಲ. ನೀನೇ ಜಗಳ ಮಾಡಿ ಅವರನ್ನು ಹಿಂದಕ್ಕಟ್ಟಿರಬೇಕು"

"ರಾಮಾ ರಾಮಾ! ನನ್ನ ಮೈಮೇಲೆ ಬಂತೇನು ಈಗ? ನಾನು ಅವರನ್ನು ಹುಟ್ಟಿದಂದಿನಿಂದ ಕಂಡವಳಲ್ಲ. ಅವನು ಅವಳ ಅಣ್ಣ ಅರವಿಂದ ನೆಂದೂ ಅರಿಯೆ. ಅವಳನ್ನೂ ನಾನು ಸಮ ನೋಡಲಿಲ್ಲ. ಜಟ್ಕಾದಿಂದ ಇಳಿಯಲಿಲ್ಲ, ಪುಣ್ಯಾತ್ಗಿತ್ತಿ! ಇಲ್ಲಿಯ ವರೆಗೆ ಬರುತ್ತಿದ್ದರೆ ಅವಳ ಕಾಲು ಸವೆದು ಹೋಗುತಿದ್ದುವೇನು? ಅಷ್ಟು ಜಂಭವೇನು, ಅವಳಿಗೆ? ಅವಳೆಂದು ಗೊತ್ತಾಗುತಿದ್ದರೆ ನಾನು ಹಿಂದಕ್ಕಟ್ಟುತ್ತೇನೆ ಯಾಕೆ? ಒಂದೂ ಅವರು ಹೇಳಲಿಲ್ಲ. ಮಿಂಚಿನ ಹಾಗೆ ಬಂದರು; ಮಿಂಚಿನ ಹಾಗೆ ಹೋದರು."

"ಸಾಕು ಸಾಕು! ಈಗ ಎಲ್ಲಿಗೆ ಹೋದರು?"

"ನನಗೇನು ಗೊತ್ತು? ನನ್ನನ್ನೇಕೆ ವಿಚಾರಿಸುತ್ತೀರಿ? ನನ್ನನ್ನು ಕೇಳಿ ಬಂದಿಲ್ಲ. ನನ್ನನ್ನು ಕೇಳಿ ಹೋಗಿಲ್ಲ. ನೀವೂ ನನ್ನ ಹತ್ತರ ಹೇಳಿಲ್ಲ."

ಆನಂದರಾಯ ಸ್ವಲ್ಪ ರೇಗಿ ಕೇಳಿದ: "ಅಂದರೆ ನಿನ್ನೊಡನೆ ಹೇಳ ಬೇಕಿತ್ತೇನು ನಾನು?"

"ಹೇಳಬೇಕಾಗಿತ್ತು! ಅಂದರೆ ಆರತಿ ಅಕ್ಷತೆ ಹಿಡಿದು 'ಬಾಯಿಯ ವರೇ ಬನ್ನಿ' ಎಂದು ಸ್ವಾಗತಿಸುತಿದ್ದೆ. ಅಂದರೆ ಬರುತಿದ್ದಳು. ದೊಡ್ಡವರು! ನನ್ನ ಮನೆಗೆ ಹಾಗೆಯೇ ಹೇಗೆ ಬರುತ್ತಾರೆ?"

ಆ ವ್ಯಂಗ್ಯೋಕ್ತಿ ಕೇಳಿ ಅವನು ಇನ್ನಷ್ಟು ಅಸಹನೆಪಟ್ಟು ಕೇಳಿದ:

"ನಿನ್ನ ಮನೆಯೇನಿದು? ನಿನ್ನಪ್ಪ ಕಟ್ಟಿಸಿದ್ದೇನು?"

"ನನ್ನಪ್ಪ ಯಾಕೆ ಬರುತ್ತಾನೆ, ಇಲ್ಲಿ ಕಟ್ಟಿಸಲಿಕ್ಕೆ? ನಿಮ್ಮಪ್ಪ ಕಟ್ಟಿ ಸಿದ್ದೂ ಅಲ್ಲ."

ಆನಂದರಾಯ ತಟ್ಟನೆ ಅವಳ ತಲೆ ಕೆನ್ನೆಗಳಿಗೆ ಬಡೆದು "ಏನಂದೀ? ನಮ್ಮಪ್ಪ ಕಟ್ಟಿಸಿದ್ದು ಅಲ್ಲ? ಯಾಕೋ ನಾಲಿಗೆ ಬಹಳ ಉದ್ದವಾಯಿತಲ್ಲ! ನಾನೆಂದರೆ ಏನೂಂತ ತಿಳಕೊಂಡಿದ್ದೀಯಾ? ಅವಳು ಬಂದದ್ದೇ ನಿನಗೆ ಸೈರಣೆ ಇಲ್ಲ. ನಾಯಿಗೆ ನಾಯಿ ಕಂಡರೆ ಹಗೆಯಂತೆ, ಹಾಗೆ ನಿಮಗೂ. ಈಗ ಅವರು ನನಗೆ ಏನಂತಾರೆ ಗೊತ್ತೇನು, ನಿನಗೆ? ಬಂದಿದ್ದರೆ ಮನೆ ಯಲ್ಲಿ ಒಂದು ಮೂಲೆಯಲ್ಲಿ ಬಿದ್ದುಕೊಂಡಿರುತಿದ್ದಳು. ನಿನ್ನಪ್ಪನ

ಗಂಟೇನು ಖರ್ಚಾಗುತಿತ್ತು ? ಮತ್ಸರ ! ಮತ್ಸರ ! ನಿನಗೂ ಭಾರೀ ಸೊಕ್ಕು ಬಂದಿದೆ ಈಗ ! ನನ್ನ ಲಕ್ಷವಿಲ್ಲ !'' ಎಂದು ಗೊಣಗಿದ.

ವಾಸಂತಿ ಅಳುತ್ತ ಒಂದು ಕೋಣೆಗೆ ಹೊಕ್ಕು ಕದವಿಕ್ಕಿಕೊಂಡಳು.

"ಅವಳಿಗೂ ಜಂಭ ! ನಿನಗೂ ಬಿಂಕ ! ಅವಳಿಗೆ ಅಪ್ಪನ ಧೈರ್ಯವಿದೆ ! ಕುಳಿತು ತಿಂದುಂಡೇನೆಂಬ ಸೊಕ್ಕು! ಅವರೂ ತಲೆಯ ಮೇಲೆ ಹೊತ್ತು ಕೊಂಡಿದ್ದಾರೆ. ನಿನಗೆ ಯಾವುದರ ಧೈರ್ಯ? ಮತ್ತೆ ಅಂಗಡಿ ಮಾರಾಟ ಉದ್ಯೋಗ ಆರಂಭಿಸುತ್ತಿಯೇನು ?"

"ಹೌದು !" ಅವಳು ಒಳಗಿನಿಂದಲೇ ಪ್ರತ್ಯುತ್ತರವಿತ್ತಳು.

"ಮಾಡು ! ಅದು ಕುಲವಿದ್ಯೆ. ಎಲ್ಲಿ ಹೋದೀತು ! ಆದರೆ ಈ ಮನೆಯಲ್ಲಿ ಬೇಡ. ಬೇರೆ ಮನೆಗೆ ಹೋಗು. ಬಜಾರಿನಲ್ಲಿ ನಾನೊಂದು ಮನೆ ನೋಡಿಕೊಡುತ್ತೇನೆ. ಹೋಗು "

"ನಾನೇಕೆ ಹೋಗಲಿ ? ನೀವೇ ಹೋಗಿ.''

ಆನಂದರಾಯ ಕೆದರಿದ. ಅವನಿಗೆ ತುಂಬ ಅಸಮಾಧಾನವೆನ್ನಿಸಿತು. ಕಾವೇರಿ ಹೊರಟು ಹೋದ ಸಿಟ್ಟು ಇವಳ ಮೇಲೆ ತಿರುಗಿತ್ತು. ಈ ಪೆಟ್ಟು ವಾದವಿವಾದಗಳಿಂದ ಬೇಸರವೂ ಉಂಟಾಯಿತು. ಅವನು ಪುನಃ ಕೋಟನ್ನು ಸಿಕ್ಕಿಸಿ "ಸರಿ. ನೀನೇ ಇರು. ನಾನು ಹೋಗುತ್ತೇನೆ. ನಿನ್ನದಲ್ವಾ ಮನೆ ? ನಾನು ಯಾಕಿರಲಿ ?" ಎಂದು ಮನೆಯಿಂದ ಹೊರಟು ಹೋದ. ರಸ್ತೆಗೇರಿದ ಮೇಲೆ ಕಾವೇರಿಯ ಮೇಲೆ ಮುಯ್ಯಿ ತೀರಿಸಿಕೊಳ್ಳುವ ಹಟ ಹುಟ್ಟಿತು. ಅವಳು ಎಲ್ಲಿಗೆ ಹೋದಳು ? ಅರವಿಂದ ಅವಳನ್ನು ಎಲ್ಲಿಗೆ ಕರೆದುಕೊಂಡು ಹೋದ ? ಎಂದವನು ಯೋಚಿಸುತ್ತ ಹಂಪನ ಕಟ್ಟೆಯ ವರೆಗೂ ಬಂದು ಒಂದೆರಡು "ಬೋರ್ಡಿಂಗ್ ಮತ್ತು ಲಾಜಿಂಗ್" ಹೋಟೇಲುಗಳಲ್ಲಿ ವಿಚಾರಿಸಿದ. ಆದರೆ ಅವರು ಅಲ್ಲಿರಲಿಲ್ಲ.

ಜಟ್ಕಾ ಹೊರಳಿಸಿದ ಕಾವೇರಿ ಮೋರೆಯನ್ನು ಬೇರೊಂದು ಕಡೆ ತಿರುಗಿಸಿ, ರಸ್ತೆಯ ಸಾಲುಮರಗಳನ್ನೂ ಅವುಗಳ ಹಿಂದಿರುವ ತೆಂಗಿನ ತೋಟಗಳೊಳಗಿನ ಮನೆಗಳನ್ನೂ ನೋಡುತಿದ್ದಳು. ಅರವಿಂದನೂ ಮೌನವಾಗಿಯೇ ಇದ್ದ. ಅವರು ಹೊಟೇಲು ಸೇರಿದಾಗ ರಸ್ತೆಯ ವಿದ್ಯುದ್ದೀಪಗಳು ಬೆಳಗಿದುವು. ಅಟ್ಟದ ಮೇಲೆ ಒಂದು ಕೋಣೆ ಖಾಲಿಯಿತ್ತು. ಸಾಮಾ

ನುಗಳನ್ನೆಲ್ಲ ಅಲ್ಲಿಗೆ ತರಿಸಿಹಾಕಿದರು. ಅರವಿಂದ ಕೈಕಾಲು ಮೋರೆ ತೊಳೆದು ಕೊಂಡು ಬಂದ. ಕಾವೇರಿ ಹಾಸಿಗೆಯಲ್ಲಿ ಮಲಗಿ ಬಿಕ್ಕಿ ಬಿಕ್ಕಿ ಅಳುತಿದ್ದಳು. ಅದನ್ನು ಕಂಡು ಅರವಿಂದನಿಗೆ ಬಹಳ ದುಃಖವಾಯಿತು. ಅವನು ಮಂಚದ ಸಮೀಪ ಬಂದು ಕರೆದ: "ಕಾವೇರಿ !''

ಅವಳು ಎದ್ದು ಕುಳಿತು ಕಣ್ಣೊರಸಿಕೊಂಡಳು.

ಅವನು ಕನಿಕರದಿಂದ ಕೇಳಿದ : "ಯಾಕೆ ಹೀಗೆ ಮಾಡುತ್ತೀ ? ಅಲ್ಲಿಗೆ ಹೋಗಿ ಹಿಂತಿರುಗಿದವಳು ನೀನೆ. ಇಲ್ಲಿ ಬಂದು ಅಳುವವಳು ನೀನೇ !"

"ಅಂದರೆ ನಾನು ಹಿಂತಿರುಗಬಾರದಿತ್ತೆಂದು ನಿನ್ನ ಮಾತಿನ ಅರ್ಥ ವೇನು ?"

"ಹೌದು ! ನೀನು ಹೋಗಬೇಕಾಗಿತ್ತು !"

"ಅವಳ ಮನೆಗೆ ?''

"ಹೌದು"

"ಅಣ್ಣಾ! ಏನು ಹೇಳುತ್ತೀ? ನಾನು ಅಲ್ಲಿ ನೀರನ್ನೂ ಕುಡಿಯಲಾರೆ"

"ಹೀಗೆ ಹಟ ಮಾಡಿದರೆ ಆಯಿತು. ಇಕೋ, ಈ ಹೋಟೇಲಿನಲ್ಲಿ ಯಾರು ನೀರು ಹಾಕುತ್ತಾರೆ, ಯಾರು ಕಾಫಿ ಕೊಡುತ್ತಾರೆಂದು ನಿನಗೆ ತಿಳಿದಿದೆಯೇನು ? ಇದು ಹಳ್ಳಿಯಲ್ಲ. ಮಂಗಳೂರು ಪೇಟೆ. ಇಲ್ಲಿ ಪೇಟೆಯ ವರಂತೆ ಇರಬೇಕು. ನಿನಗೆ ಇಷ್ಟವಿಲ್ಲದಿದ್ದರೆ ಬೇರೆ ಅಡಿಗೆ ಮಾಡಿದ !"

"ಒಂದೇ ಮನೆಯಲ್ಲಿ ಎರಡು ಒಲೆ ! ನಿತ್ಯ ಜಗಳ !"

''ಅದೇನಾಗುತಿತ್ತೋ ಆ ಮೇಲೆ. ನಾನೇ ನೀನಾಗುತಿದ್ದರೆ ಅವಳನ್ನು ಒದ್ದು ಹೊರಹಾಕುತಿದ್ದೆ.''

''ಹೌದು. ಗಂಡ ನಮ್ಮಂತಿದ್ದರೆ ಸಾಧ್ಯ. ಅಣ್ಣಾ, ನಿನಗೆ ಇದು ಗೊತ್ತಿಲ್ಲ !''

''ಗೊತ್ತಿಲ್ಲ ನಿಜ. ಆದರೆ ಈಗ ನಿಷ್ಠುರವಾದವಳು ಯಾರು ಹೇಳು ? ಆ ಮಾರಾಯ ಇನ್ನಷ್ಟು ರೌದ್ರಾವತಾರ ತಾಳುತ್ತಾನೆ. ಅಪ್ಪಯ್ಯ ಏನಂತಾರೋ ಏನೋ ! ವಾಪಾಸು ಕರಕೊಂಡು ಹೋದರೆ ನನ್ನ ಮೇಲೆ ಸಿಟ್ಟಾಗುತ್ತಾರೋ ಏನೋ ?''

''ನೀನು ಬರಲೇ ಬೇಡ. ಮೋಟಾರಿನಲ್ಲಿ ಕೂತುಕೊಳ್ಳಿಸು. ನಾನು

ಹೋಗುತ್ತೇನೆ.''

''ಒಬ್ಬಳೇ ?" ಎಂದು ಅರವಿಂದ ಆಶ್ಚರ್ಯದಿಂದ ಪ್ರಶ್ನಿಸಿದ: "ಬೆಳ್ತಂಗಡಿಯಿಂದ ಒಬ್ಬಳೇ ಹೋಗುತ್ತೀಯಾ ?"

"ಒಬ್ಬಳೇ! ಹುಟ್ಟುವಾಗಲೂ ಒಬ್ಬಳೇ. ಹೋಗುವಾಗಲೂ ಒಬ್ಬಳೇ!"

ಅದನ್ನು ಕೇಳಿ ಅರವಿಂದ ನೊಂದ: "ಹೊಳೆ ಹೇಗೆ ದಾಟುತ್ತೀಯಾ?" ಎಂದು ಪ್ರಶ್ನಿಸಿದ.

"ದಾಟಲಿಕ್ಕಾದರೆ ದಾಟಿದ. ಆಗದಿದ್ದರೆ ಹೋದ. ಇನ್ನು ನನಗೆ ಆಗಬೇಕೇನು ? ಈ ಜೀವದ ಮೇಲೆ ಎಳ್ಳಷ್ಟೂ ಆಸೆಯಿಲ್ಲ, ಅಣ್ಣಾ!''

ಅರವಿಂದ ಭೀತನಾದ. ತಂಗಿಯ ಮೋರೆ ನೋಡಿದ. ಅದು ಕಠೋರವಾಗಿತ್ತು. ಅವನ ಕಾಲುಗಳು ನಡುಗತೊಡಗಿದುವು. ಇವಳು ಜೀವ ತೆಗೆದುಕೊಳ್ಳುತ್ತಾಳೋ ಏನೋ ಎಂದು ಸಂಶಯ ತಲೆದೋರಿತು. ಆದುದರಿಂದ ಅವಳು ಹೊರಗೆ ಹೋದಾಗ ಅವಳ ಬೆನ್ನ ಹಿಂದೆ ಹೋದ. ರಾತ್ರಿ ಅವನು ಸರಿಯಾಗಿ ನಿದ್ದೆಯನ್ನು ಮಾಡಲಿಲ್ಲ. ತಂದೆಗೆ ಬರಹೇಳುವುದೇ ಲೇಸೆಂದು ಮತ್ತೆ ತೋಚಿತು. ಆದುದರಿಂದ ಅವನು ಬೆಳಗಿನ ಜಾವಕ್ಕೆ ಎದ್ದು ಕಾವೇರಿ ಮಲಗಿದ್ದ ಕೋಣೆಗೆ ಹೊರಗಿನಿಂದ ಬೀಗ ಹಾಕಿ ಮೋಟಾರ್ ನಿಲ್ದಾಣಕ್ಕೆ ತೆರಳಿದ. ಮತ್ತು ಮೊದಲನೇ ಮೋಟಾರಿನಲ್ಲಿ ಬಾಲಕೃಷ್ಣನಿಗೊಂದು ಚೀಟಿ ಕಳಿಸಿ ಬಂದು ತನ್ನ ಹಾಸಿಗೆಯಲ್ಲಿ ಮಲಗಿಕೊಂಡ. ಕಾವೇರಿಗೆ ನಿದ್ದೆ ಬಂದಿದೆಯೆಂದು ಅವನ ಕಲ್ಪನೆ. ಆದರೆ ಅವಳು ದುಪ್ಪಟಿಯೊಳಗಿನಿಂದಲೇ ಕೇಳಿದಳು :

"ಅಣ್ಣಾ! ಎಲ್ಲಿಗೆ ಹೋಗಿದ್ದೆ ಇಷ್ಟು ಹೊತ್ತು ?"

ಅವನು ಹೌಹಾರಿ ಬಿದ್ದ. "ಇಲ್ಲೇ''

"ಇಲ್ಲೇ ಅಂದರೆ ? ಮತ್ತೆ ನೀನೂ ಮಂಗಳೂರಿನಲ್ಲಿ ಕಾಲೇಜ್ ಹುಡುಗಿಯನ್ನು ನೋಡಿಕೊಂಡಿರುವಿಯಾ ಹೇಗೆ ?''

ಅವನಿಗೆ ಈಗ ನಗು ಬಂದಿತು.

"ಅಂತೂ ಈ ಗಂಡಸರು ಪಕ್ಕಾ'' ಎಂದಳು. ಅವನೂ ಕುಳಿತು ವಿದ್ಯುದ್ದೀಪ ಹಚ್ಚಿದ. ಕಾವೇರಿ ಹೊದೆದುಕೊಂಡು ಹಾಸಿಗೆಯಲ್ಲಿ ಕುಳಿತಿದ್ದಳು.

"ನೀನು ನಿದ್ದೆ ಮಾಡಿಲ್ಲೇನು ?" ಎಂದು ಪ್ರಶ್ನಿಸಿದ.

"ಸ್ವಲ್ಪ ಬಂತು. ನೀನು ಹೋದಾಗ ಎಚ್ಚರವಾಯಿತು. ಕೋಣೆಗೆ ಬೀಗ ಯಾಕೆ ಹಾಕಿದೆ? ಏನು, ನಾನು ಓಡಿ ಹೋಗುತ್ತೇನೆಂದು ಹೆದರಿದೆ ಯೇನು ?"

ಅರವಿಂದನ ಮೋರೆ ಸಣ್ಣದಾಯಿತು.

"ಬಾವಿಗೆ ಬೀಳುತ್ತೇನೆಂದು ಬೆದರಿದೆಯಾ ?''

ಅವನು ತಲೆ ತಗ್ಗಿಸಿದ.

"ಅಣ್ಣಾ, ಇಲ್ಲ, ಇಲ್ಲ! ಈ ಜನ್ಮದಲ್ಲಿ ಎಲ್ಲವನ್ನೂ ಅನುಭವಿಸಿಯೇ ಹೋಗುತ್ತೇನೆ. ಮುಂದಿನ ಜನ್ಮಕ್ಕೆ ಇದರ ಕುಸುರು ಉಳಿಯಬಾರದು. ಆದರೆ ಇನ್ನೇನು ಮಾಡಲಿ ಎಂದು ಯೋಚಿಸುತಿದ್ದೇನೆ. ನಾನಾಗಿ ಗಂಡನ ಮನೆಗೆ ಬೆನ್ನು ಹಾಕಿ ಬಂದೆ. ಇನ್ನು ನನಗೆ ಎಲ್ಲಿ ಆಶ್ರಯ ? ತವರುಮನೆಗೆ ಹೋಗೋಣವೇ ? ಯಾಕೆ ಎಂದೆನಿಸುತ್ತದೆ. ಹಂಗಿನ ಕೂಳು. ಅವರೂ ಬೈಯ್ಯುತ್ತಾರೆ. ಊರಿನ ಜನರೂ "ಛೀ, ಛೀ'' ಎಂದನ್ನುವರು. ಅಂಥ ಪರಿಸ್ಥಿತಿಯಲ್ಲಿ ಒಮ್ಮೊಮ್ಮೆ ಮನಸ್ಸಿಗೆ ವ್ಯಥೆಯಾಗುತ್ತದೆ. ನಾನು ಏಕೆ ಬದುಕಿರಬೇಕೆಂದನ್ನಿಸುತ್ತದೆ! ಬೇರೆ ಒಂದು ದಾರಿ ಜೇಕಲ್ಲ.''

ಅರವಿಂದ ಅಳಲಾರಂಭಿಸಿದ.

ಕಾವೇರಿ ಅದನ್ನು ನಿರೀಕ್ಷಿಸಿರಲಿಲ್ಲ. ಅವನು ಅತ್ತುದುದನ್ನು ಇತ್ತೀಚಿಗೆ ಅವಳು ಕಂಡೇ ಇಲ್ಲ. ಆದುದರಿಂದ ವಜ್ರಾಘಾತವಾದಂತಾಯಿತು ಅವಳಿಗೆ. ಅವಳು ಫಕ್ಕನೇ ಎದ್ದು ಅವನ ಹತ್ತಿರ ಬಂದು "ಅಣ್ಣಾ! ಅಣ್ಣಾ! ಅಳಬೇಡ. ನಾನು ನೋಡಲಾರೆ. ಇಕೋ, ನೀನು ಹೇಳಿದ ಹಾಗೆ ಮಾಡುತ್ತೇನೆ" ಎಂದಳು.

ಅರವಿಂದ ನುಡಿದ: "ತಂಗೀ! ನೀನು ಇಷ್ಟು ಹತಾಶೆಯಿಂದ ಏಕೆ ಮಾತನಾಡುತ್ತೀ? ಬಂಗಾಡಿಗೆ ಕೂಡ ಬರುವುದಿಲ್ಲವೆಂದನ್ನುತ್ತೀಯಾ! ಬಂದರೆ ತಾಯಿ ತಂದೆ ನಿನ್ನನ್ನು ನೂಕಲಾರರು. ಏನೋ ಸಿಟ್ಟಾದಾಗ ನಾಲ್ಕು ಬೈದಿರಬಹುದು. ಅಷ್ಟೇ! ಅವರಿಗೆ ಬೇರೆ ಮಕ್ಕಳಿಲ್ಲ, ನಾವಿಬ್ಬರೇ! ಅದು ಹಂಗಿನ ಕೂಳು ಎಂದೆನಬೇಡ. ಆ ಮನೆ, ಆಸ್ತಿ, ಸಂಪತ್ತು ನನ್ನದೆಷ್ಟೋ ಅಷ್ಟೇ ನಿನ್ನದು. ನಾನು ಜೀವಂತವಿರುವ ವರೆಗೆ ನಿನ್ನನ್ನು ಬಿಟ್ಟು

ಹಾಕಲಾರೆ. ನೀನು ಸಾಯುವ ಮಾತನ್ನಾಡಬಾರದು. ಅದರ ಯೋಚನೆ ಯನ್ನೂ ಮಾಡಬೇಡ. ಅದನ್ನು ಕೇಳಿ ನನಗೆ ಅತೀವ ದುಃಖವೆನಿಸುತ್ತದೆ. ನನಗೆ ನೀನೊಬ್ಬಳೆ ತಂಗಿ ಅಲ್ಲವೇ?''

ಅದನ್ನು ಕೇಳಿ ಕಾವೇರಿ ಅಣ್ಣನ ಪಾದಗಳ ಮೇಲೆ ತನ್ನ ತಲೆಯನ್ನಿಟ್ಟು ಕಣ್ಣೀರಿನಿಂದ ಅದನ್ನು ತೊಳೆದು "ಅಣ್ಣಾ! ನನಗೆ ಅವುಗಳ ಮೇಲೆ ಆಶೆಯಿಲ್ಲ. ನಿನ್ನ ಪ್ರೀತಿ ಇದ್ದರೆ ಸಾಕು" ಎಂದು ಬಿಸುಸುಯ್ದಳು.

ಬೆಳಿಗ್ಗೆ ಇಬ್ಬರೂ ಸ್ನಾನ ಪಾನ ಮುಗಿಸಿ ನಿರ್ಮಲ ಬಟ್ಟೆಬರೆಗಳನ್ನು ಧರಿಸಿದರು. ಊರಿಗೆ ಹೊರಡುವುದೆಂದೇ ಕಾವೇರಿಯ ತಿಳುವಳಿಕೆ. ಆದರೆ ಅರವಿಂದ ಹೇಳಿದ: "ಈ ಹೊತ್ತು ಊರಿಗೆ ತೆರಳುವುದು ಬೇಡ. ಹೇಗೂ ಇಲ್ಲಿಗೆ ಬಂದಿರುತ್ತೀ! ಒಂದೆರಡು ದಿನಗಳ ವರೆಗೆ ಇಲ್ಲೇ ಇರೋಣ! ನಿನಗೆ ಈ ಮಂಗಳೂರು ಪಟ್ಟಣ ತೋರಿಸುತ್ತೇನೆ."

ಕಾವೇರಿಗೆ ಬಹಳ ಸಂತೋಷವಾಯಿತು. ಹಿಂದೊಮ್ಮೆ ಅವಳು ಸಣ್ಣವಳಿದ್ದಾಗ ಅವಳ ತಂದೆ ಈ ನಗರಕ್ಕೆ ಕರೆದುಕೊಂಡು ಬಂದಿದ್ದರು. ಆ ಮೇಲೆ ಬಂದೇ ಇರಲಿಲ್ಲ. ನಗರ ನೋಡಲು ಅವಳಿಗೂ ಆಸೆ. ಆದುದರಿಂದ ಬಿಸಿಲು ಬೀಳುವುದರೊಳಗೆ ಇಬ್ಬರೂ ಹೊರಟರು. "ಇಕೋ ಇದು ವೆಂಕಟ್ರಮಣ ದೇವಸ್ಥಾನ, ಇದು ರಥಬೀದಿ, ಇದು ಹೂವಿನ ಮಾರ್ಕೆಟ್, ಇದು ಬಾಸೆಲ್ ಮಿಶ್ಯನ್ ಹೈಸ್ಕೂಲು'' ಎಂದು ಅವನು ಹೇಳುತ್ತ, ತೋರಿಸುತ್ತ ಬಂದ. ಕೆನರಾ ಹೈಸ್ಕೂಲಿನ ಬದಿಯಿಂದ ಅವರು ಕೊಡಿಯಾಲ ಬೈಲಿಗೂ ಬಂದರು. ಅಲ್ಲಿ ಇಳಿದು ಬೆಸೆಂಟ್ ಗರ್ಲ್ಸ ಹೈಸ್ಕೂಲಿನ ದಾರಿ ಹಿಡಿದರು. ಅಷ್ಟು ಹೊತ್ತಿಗೆ ಹುಡುಗರು ಗುಂಪುಗುಂಪಾಗಿ ಶಾಲೆಗೆ ಬರುತಿದ್ದರು. ಅವರ ನಗು ನಿರ್ಭೀತಿ, ನಾನಾ ಬಣ್ಣದ ಲಂಗ, ಸೀರೆ, ಕೊಡೆ, ಜಡೆಗಳನ್ನು ಕಂಡು ಕಾವೇರಿಗೆ ಆನಂದವಾಯಿತು. "ಇಷ್ಟು ಹುಡುಗಿಯರು ಶಾಲೆಗೆ ಹೋಗುತ್ತಿರುವರಲ್ಲ!" ಎಂದು ಉದ್ಗರಿಸಿದಳು. "ಇದೊಂದೇ ಹುಡುಗಿಯರ ಶಾಲೆಯೆಂದು ತಿಳಿದೆಯೇನು.? ಪ್ರಾಥಮಿಕ ಶಾಲೆಗಳು ಬಹಳ ಇವೆ. ಹುಡುಗರ ಶಾಲೆ ಕಾಲೇಜುಗಳಲ್ಲೂ ಹುಡುಗಿಯರ ಸಂಖ್ಯೆ ಕಡಿಮೆಯಿಲ್ಲ. ಇದು ಪ್ರಮೀಳಾ ರಾಜ್ಯ!" ಎಂದು ಅವನು ಹೇಳಿ ನಕ್ಕ. ಒಳದಾರಿಯಿಂದ ಏಳೆಂಟು ಉಪಾಧ್ಯಾಯಿನಿಯರು ಬರುತಿದ್ದರು. ಕಾವೇರಿ

ಅವರನ್ನೇ ದಿಟ್ಟಿಸಿ "ಇವರು ಟೀಚರ್ಸ್ ಅಲ್ವಾ"? ಎಂದು ಪ್ರಶ್ನಿಸಿದಳು.

"ಹೌದು,"ಎಂದು ಉತ್ತರವಿತ್ತ ಅರವಿಂದ ಹೇಳಿದ."ಅಕೋ, ಅವರಲ್ಲಿ ಒಬ್ಬಿಬ್ಬರು ನಿನ್ನ ವಯಸ್ಸಿನವರು. ಈಗ ಶಾಲೆ ಕಾಲೇಜಿನಿಂದ ಹೊರಬಿದ್ದವರು. ಲಗ್ನವಾಗಿಲ್ಲ. ಈ ಕೆಲ್ಸ ಮಾಡುತಿದ್ದಾರೆ. ನಾಳೆ ಗಂಡ ಬಂದರೆ ಇದನ್ನು ಬಿಟ್ಟುಕೊಟ್ಟು ಹೊರಟರು."

"ಲಗ್ನವಾಗದವರು ಇಲ್ಲೇನು ?"

"ಇದ್ದಾರೆ. ಅಕೋ, ಆ ತಲೆ ಹಣ್ಣಾದ ಟೀಚರ್ ! ಈ ಟೀಚರ್ ಕೆಲಸದಿಂದಲೇ ಅವರು ಮುದುಕಿಯಾಗಿದ್ದಾರೆ. ಈ ಕೆಲ್ಸದಿಂದಲೇ ಅನೇಕರು ಹೊಟ್ಟೆ ಪಾಡು ನಡೆಸುತ್ತಾರೆ. ತಾಯಿ ತಂದೆಯನ್ನು ಪೋಷಿಸುತ್ತಾರೆ. ಸುಮ್ಮನೆ ಲಗ್ನವಾಗಿ, ಡಜನ್‌ಗಟ್ಲೆ ಮಕ್ಕಳು ಮರಿ ಹಡೆದು ಸಾಯುವುದಕ್ಕಿಂತ ಹಾಗೆಯೇ ಇಂಥ ಕೆಲ್ಸ ಮಾಡಿದರೆ ಒಳ್ಳೇದಲ್ವಾ? ಕೆಲವರಿಗೆ ಗಂಡನೇ ಬರುವದಿಲ್ಲ. ಮನೆಯಲ್ಲಿ ತಿಂದುಂಡು ಹಾಳುಹರಟೆ, ಜಗಳದಲ್ಲಿ ಆಯುಷ್ಯ ಹಾಳು ಮಾಡುವುದಕ್ಕಿಂತ ಇಂಥ ಸೇವೆ ಮಾಡುವುದು ಪುಣ್ಯ ಕಾರ್ಯವಲ್ವಾ ?"

"ಹೌದು" ಎಂದ ಕಾವೇರಿ ."ಲಗ್ನವಾಗಿ ಮಕ್ಕಳು ಮರಿ ಇದ್ದವರು ಇಂಥ ಕೆಲಸ ಮಾಡುವುದು ಹೆಚ್ಚಿನ ಪುಣ್ಯಕಾರ್ಯ'' ಎಂದಳು.

"ಲಗ್ನವಾದವರು ಕೆಲಸಕ್ಕೆ ಹೋದರೆ ಗಂಡ ಮನೆಯ ಅಡಿಗೆ ಮಾಡುತ್ತಾನೆ'' ಎಂದು ಅರವಿಂದ ಹೇಳಿ ನಕ್ಕ.

"ಹೋಗು, ಹೋಗು !'' ಎಂದು ಅವಳು ಮುನಿಸು ತೋರಿಸಿದಳು.

ಅರವಿಂದ ಹೇಳಿದ: "ಅಂಥವರೂ ಇದ್ದಾರೆ, ಬಿಡು, ಗಂಡನಿಗೆ ಬೇರೆ ಕೆಲಸವಿಲ್ಲದಿದ್ದರೆ ಮಾಡಬೇಕಪ್ಪಾ! ಮನೆಯಲ್ಲಿ ಮುದುಕಿಯೋ ತದಕಿಯೋ ಇಲ್ಲದಿದ್ದರೆ ಮಕ್ಕಳನ್ನು ನೋಡಿಕೊಳ್ಳಬೇಕಾಗುತ್ತದೆ. ಆದರೆ ಹೆಚ್ಚಾಗಿ ಈ ಮಂಗಳೂರು ಪೇಟೆಯಲ್ಲಿ ಹೆಂಡತಿ ಟೀಚರ್ ಕೆಲ್ಸ ಮಾಡಿದಾಗ ಗಂಡನೂ ದುಡಿಯದೆ ಇರುವುದಿಲ್ಲ. ಇಬ್ಬರೂ ಸಂಪಾದನೆ ಮಾಡಿದರೆ ಸಂಸಾರ ಸಾಗುತ್ತದೆ. ಇಲ್ಲದಿದ್ದರೆ ಈಗಿನ ಕಾಲದಲ್ಲಿ ಒಬ್ಬನು ದುಡಿದುದು ಎಲ್ಲಿಯ ವರೆಗೆ ಸಾಕು ?''

• ಕಾವೇರಿ ಉತ್ತರ ಕೊಡದೆ ಅವನನ್ನು ಹಿಂಬಾಲಿಸಿದಳು. ಅವಳು

ಮೌನವಾಗಿ ಬರುತ್ತಿದ್ದುದನ್ನು ಕಂಡುಕೊಂಡ ಅರವಿಂದ "ಏನು ಯೋಚಿಸುತ್ತಿ?" ಎಂದು ಪ್ರಶ್ನಿಸಿದ. "ಏನಿಲ್ಲ'' ಎಂದವಳು ಹೇಳಿದಳು. ಅವನ ಹಿಂದೆ ಅವಳು ಬರುತ್ತಿದ್ದುದರಿಂದ ಅವಳ ಕಣ್ಣು ತೊಯ್ದುದುದು ಅವನಿಗೆ ಕಾಣಿಸಲಿಲ್ಲ. "ಕದ್ರಿಗೆ ತೆರಳೋಣ"ವೆಂದು ಅದನ್ನು ವರ್ಣಿಸುತ್ತಾ ಮುಂದೆ ಹೆಜ್ಜೆಯಿಡತೊಡಗಿದ. ದಾರಿಯಲ್ಲಿ "ಮಹಿಳಾ ಸೇವಾಶ್ರಮ" ವಿತ್ತು. ಅರವಿಂದ ಅದನ್ನು ತೋರಿಸಿ ''ದಿಕ್ಕಿಲ್ಲದ ಅನಾಥ, ಬಡ ಹುಡುಗಿಯರ ಆಶ್ರಮ ಇದು. ಬಾಲವಿಧವೆಯರೂ ಇದ್ದಾರೆ. ಇಲ್ಲೇ ಅವರ ಊಟ ಉಡಿಗೆ. ಆಶ್ರಮದವರೇ ಅವರಿಗೆ ವಿದ್ಯಾ ಬುದ್ಧಿ ಕಲಿಸುತ್ತಾರೆ. ಇದೂ ಒಂದು ಸೇವೆಯೇ'' ಎಂದು ವಿವರಿಸಿದ.

''ವಿದ್ಯೆ ಮುಗಿದ ಮೇಲೆ?'' ಕಾವೇರಿ ಪ್ರಶ್ನಿಸಿದಳು.

''ನೌಕರಿ ಮಾಡುತ್ತಾರೆ. ಕೆಲವರು ಟೀಚರ್ಸ್, ಕೆಲವರು ನರ್ಸ್, ಕೆಲವರು ಡಾಕ್ಟರ್ ಆಗುವರು.''

ಕಾವೇರಿ ಪುನಃ ಏನನ್ನೂ ಕೇಳದೆ ಯೋಚನಾಮಗ್ನಳಾದಳು.

ಕದ್ರಿಯ ದಾರಿಯಲ್ಲಿ ನಖಶಿಖಾಂತ ಬಿಳಿ ಗವನ್ ಧರಿಸಿದ ಸ್ತ್ರೀಯರ ಗುಂಪೊಂದು ಇದಿರಾಯಿತು. ''ಅಣ್ಣಾ! ಅವರು ಯಾರು?'' ಎಂದು ಕಾವೇರಿ ಕುತೂಹಲದಿಂದ ಕೇಳಿದಳು.

''ನನ್ಸ್!''

''ಅಂದರೆ?''

''ಕಥೋಲಿಕ್ ಸನ್ಯಾಸಿನಿಯರು"

''ಸನ್ಯಾಸಿನಿಯರು?''

''ಹೌದು! ಸಣ್ಣ ವಯಸ್ಸಿನಲ್ಲೇ ಕಥೋಲಿಕ ಜಾತಿಯಲ್ಲಿ ಅವರನ್ನು ಈ ಗುಂಪಿಗೆ ಸೇರಿಸುತ್ತಾರೆ. ಬಡವರು, ಅನಾಥರು, ಲಗ್ನವಾಗಲು ಇಷ್ಟವಿಲ್ಲದವರು ನನ್ಸ್ ಆಗುತ್ತಾರೆ''

''ಅವರ ಕೆಲಸ?''

''ಕೆಲವರು ಟೀಚರ್ ಆಗುತ್ತಾರೆ. ಕೆಲವರು ಸಮಾಜದ ಸೇವೆ ಮಾಡುತ್ತಾರೆ. ಅವರದು ವೈರಾಗ್ಯ ಜೀವನ!''

''ನಮ್ಮ ಹಿಂದೂ ಸಮಾಜದಲ್ಲಿ ಈ ಪದ್ಧತಿ ಇಲ್ಲವಲ್ಲ!''

"ಇಲ್ಲ!"

"ಮದುವೆಯಾದ ಮೇಲೆ ವೈರಾಗ್ಯ ಬಂದವರು, ವಿಧವೆಯರು ಆ ರೀತಿ ಸನ್ಯಾಸಿಗಳಾಗಲು ಬರುವುದಿಲ್ಲವೇ, ಅಣ್ಣಾ?"

"ಅವರಲ್ಲಿ ಆ ಪದ್ಧತಿ ಇಲ್ಲ. ಅದು ಅವರ ಸಮಾಜದಲ್ಲಿರುವ ಒಂದು ದೋಷ. ವೈರಾಗ್ಯವೆಂದರೇನೆಂದು ತಿಳಿಯದ ವಯಸ್ಸಿನಲ್ಲಿ ಪರಿಸ್ಥಿತಿಯ ಒತ್ತಡ, ದಾರಿದ್ರ್ಯ, ಹಿರಿಯರ ಒತ್ತಾಯಕ್ಕೆ ಸೇರಿಕೊಳ್ಳಬೇಕಾಗುತ್ತದೆ. ಇಷ್ಟವಿರಲಿ ಇಲ್ಲದಿರಲಿ ಮುಂದೆ ಅದೇ ರೀತಿಯ ಜೀವನ ಸಾಗಿಸಬೇಕಾಗುತ್ತದೆ. ಅದರಿಂದ ಹಿತವೂ ಇದೆ. ಅಹಿತವೂ ಇದೆ"

ಮಾತಿನಲ್ಲಿ ದಾರಿ ನಡೆದುದೇ ತಿಳಿಯಲಿಲ್ಲ. ಇಬ್ಬರೂ ಕದಿರೆ ದೇವಸ್ಥಾನಕ್ಕೆ ಬಂದರು. ಕೆರೆಗಳಲ್ಲಿ ಕೈಕಾಲು ತೊಳೆದು ಗೋಮುಖದ ಗಂಗಾವತರಣ ಕಂಡು, ದೇವರಿಗೆ ಹಣ್ಣು ಕಾಯಿ ಮಾಡಿಸಿದರು. "ಒಂದು ದಿನ ಸಂಜೆ ಇಲ್ಲಿಗೆ ಕರೆದುಕೊಂಡು ಬರುತ್ತೇನೆ. ಅಕೋ, ದೇವಸ್ಥಾನದ ಆಚೆ ಗುಡ್ಡದಲ್ಲಿ ಗೋರಖನಾಥನ ಗೋರಿಯಿದೆ. ಅದನ್ನು ನೋಡುವಾ. ಗುಡ್ಡದಲ್ಲಿ ನಿಂತರೆ ಇಡೀ ಮಂಗಳೂರಿನ ಸೊಬಗು ಗೊತ್ತಾಗುತ್ತದೆ. ಈಗ ಹೋಗುವಾ!" ಎಂದವನು ಹೇಳಿ ಮರಳಿದ. ಬಿಸಿಲಿಗೆ ಡಾಮರ್ ಹಾಕಿದ ರಸ್ತೆಯಲ್ಲಿ ನಡೆಯುವಂತಿಲ್ಲ. ಆದುದರಿಂದ ಅವರು ಸಿಟಿ ಬಸ್ಸಿನಲ್ಲಿ ಹೋಟೆಲಿಗೆ ಪ್ರಯಾಣ ಮಾಡಿದರು. ಮಧ್ಯಾಹ್ನ ಊಟವಾದ ಮೇಲೆ ಸ್ವಲ್ಪ ವಿಶ್ರಮಿಸಿ ಅರವಿಂದ ಜಟ್ಕಾದಲ್ಲಿ ತಂಗಿಯನ್ನು ಕರೆದೊಯ್ದ. ಮೊದಲು ಒಂದು ಛಾಪಖಾನೆ ತೋರಿಸಿ ಅಲ್ಲಿ ಮುದ್ರಿತವಾಗುತ್ತಿರುವ ಪತ್ರಿಕೆಯನ್ನು ವಿವರಿಸಿದ. ಅಲ್ಲಿಂದ ಬೀಡಿ ಕಾರಖಾನೆ ಕಂಡರು. ಹಂಚಿನ ಕಾರಖಾನೆಗೆ ತೆರಳಿ ಹಂಚನ್ನು ತಯಾರಿಸುವ, ಬೇಯಿಸುವ ವಿಧಾನವನ್ನು ಅರಿತರು. ಗೇರುಬೀಜ ಕಾರಖಾನೆಯನ್ನು ಅರವಿಂದ ಬಿಡಲಿಲ್ಲ. ಅಲ್ಲಿ ದುಡಿವವರೆಲ್ಲ ಹೆಣ್ಣಾಳುಗಳೇ! "ಇಲ್ಲಿ ಇಷ್ಟು ಸ್ತ್ರೀಯರು ಕೆಲಸ ಮಾಡುತ್ತಿದ್ದಾರಲ್ಲ!" ಎಂದು ಕಾವೇರಿ ಮೂಗಿಗೆ ಬೆರಳಿಟ್ಟಳು. ಕೂಲಿಯಾಳುಗಳಾದರೂ ಅವರ ರೂಪ, ಶೃಂಗಾರ ಕಂಡು ಬೆರಗಾದರು.

ಬಿಸಿಲಿನ ತಾಪ ಕಡಿಮೆಯಾಗಿ ಸಮುದ್ರದ ಗಾಳಿ ಬೀಸಲಾರಂಭಿಸಿತು. ಅರವಿಂದ ಜಟ್ಕಾದವನಿಗೆ ಬಾಡಿಗೆ ಕೊಟ್ಟು ಕಳಿಸಿ ಕಾವೇರಿಯೊಂದಿಗೆ

ಬಂದರಕ್ಕೆ ಹೋದ. ಬಂಗಾಡಿಯಲ್ಲಿ ಹರಿವ ನೇತ್ರಾವತಿ ಇಲ್ಲಿ ಸಮುದ್ರ ದೊಡನೆ ಸಂಗಮವಾಗಿರುವಳು. ಅದನ್ನು ತಿಳಿಸುತ್ತ ಅರವಿಂದ ದಂಡೆಯಲ್ಲಿ ಅಲೆದ. ಅನೇಕ ಹಾಯಿಹಡಗಗಳನ್ನು ಸಣ್ಣ ದೊಡ್ಡ ದೋಣಿಗಳನ್ನು ದಂಡೆಯಲ್ಲಿ ಗೂಟ ಬಡಿದು ಕಟ್ಟಿರುವರು. ನದಿ ಸಮುದ್ರಕ್ಕೆ ಕೂಡುವ ಅಳಿವೆಯೂ ಕಾಣಿಸುತ್ತಿದೆ. ಭೋರ್ಗರೆವ ಸಮುದ್ರದ ಗರ್ಜನೆ ಕೇಳಿಸು ತ್ತಿದೆ. ನದಿಯ ನೀರು ಸಮುದ್ರಕ್ಕೆ ಹರಿವಂತೆ ತೋರುವುದಿಲ್ಲ. ಆದರೆ ಸಮುದ್ರದ ತೆರೆಗಳೇ ಈಚೆ ಕೊಚ್ಚಿ ಬರುತ್ತಿವೆ. ಸಮುದ್ರದ ದಂಡೆಯಲ್ಲಿ ಅನೇಕ ಗುಡಿಸಲುಗಳೂ ಇವೆ. ತೆಂಗಿನ ಸೋಗೆಗಳನ್ನು ಅವುಗಳಿಗೆ ಹೊದೆ ಸಿರುವರು. ಅಣ್ಣ ತಂಗಿ ಉಸುಕಿನ ಮೇಲೆ ಕುಳಿತು ಸಮುದ್ರವನ್ನೇ ನೋಡ ಲಾರಂಭಿಸಿದರು. ''ಎಷ್ಟು ಚೆಲುವಾಗಿದೆ'' ಎಂದು ಕಾವೇರಿಯ ಬಾಯಿ ಯಿಂದಲೂ ಮಾತುಗಳು ಉದುರಿದವು.

ಸಂಜೆಯಾಗುತ್ತ ಬಂದಂತೆ ಏನೋ ಒಂದು ಅವರ್ಣನೀಯ ಶೋಭೆ ಕಂಡಿತು. ಕಡಲು ಕಾಗೆಗಳು ಅತ್ತಿತ್ತ ಹಾರಿದುವು. ಹುಡುಗರೂ ದಂಡೆಯ ಉಸುಕಿನ ಮೇಲೆ ಓಡಾಡತೊಡಗಿದರು. ಮುದುಕರು ಊರುಗೋಲು ಹಿಡಿದುಕೊಂಡು ಬಂದರು. ಶಾಲೆ ಕಾಲೇಜಿನ ಹುಡುಗಿಯರ ಗುಂಪೊಂದು ಬಂದಿತು. ಗಂಡ ಹೆಂಡತಿ ತಮ್ಮ ಮಕ್ಕಳೊಂದಿಗೆ ಕಾಣಿಸಿದರು. ದಂಪತಿ ಗಳೋ ಪ್ರಣಯಿಗಳೋ ಏನೋ,ಕೈಮೇಲೆ ಕೈ ಸಿಕ್ಕಿಸಿ ನಗುತ್ತ ಕೆಲೆಯುತ್ತ ನಲಿಯುತ್ತ ಆಗಮಿಸಿದರು. ಇನ್ನೊಂದೆಡೆ ಒಬ್ಬ ತನ್ನ ಪ್ರೇಯಸಿಯ ತೊಡೆಯ ಮೇಲೆ ತಲೆಯನ್ನಿಟ್ಟು ಒರಗಿದ ! ಜನರಿದ್ದಾರೆಂಬ ಲಜ್ಜೆಯೂ ಇಲ್ಲ! ಅದನ್ನು ಕಂಡ ಕಾವೇರಿ ತನ್ನ ಮೋರೆಯನ್ನು ಬೇರೊಂದು ಕಡೆ ತಿರುಗಿಸಿದಳು. ಆದರೂ ಅವಳೆದೆಯಲ್ಲಿ ತೆರೆಗಳೆದ್ದುವು. ''ಅಣ್ಣಾ ಹೋಗೋಣ. ಕತ್ತಲಾಗುತ್ತ ಬಂತು !" ಎಂದು ಹೇಳಿದಳು.

''ಕತ್ತಲಾಗಲಿ ! ಸೂರ್ಯಾಸ್ತ ಎಷ್ಟು ಚೆಂದ ಕಾಣಿಸುತ್ತದೆಂತೀ ! ನೋಡಿಯೇ ಹೋಗೋಣ. ಇಲ್ಲೇನೂ ಹೆದರಿಕೆ ಇಲ್ಲ."

"ನಿನಗಿಲ್ಲ; ಆದರೆ ನನಗಿದೆ" ಎಂದವಳು ಎದ್ದಳು.

ಅರವಿಂದನೂ ಎದ್ದು ಮೈಮುರಿದ. ಇಬ್ಬರೂ ಬೇರೊಂದು ರಸ್ತೆ ಯಿಂದ ಮೈದಾನಿನ ಮೇಲೆ ಹಾಯ್ದರು. ಅರವಿಂದ ಕಾಲೇಜನ್ನು

ತೋರಿಸಿದ. ಅದರ ಬಳಿ ಹುಡುಗರ ತಂಡವೊಂದು ನಿಂತಿತ್ತು. ಅರವಿಂದ ತನ್ನ ತಂಗಿಯೊಡನೆ ಅಷ್ಟು ದೂರದಲ್ಲಿ ಬರುತ್ತಿದ್ದಾಗಲೇ ಅವರು "ಏ, ಏ, ಅಲ್ಲಿ ನೋಡೋ! ಒಂದು ಹೊಸ ಹಕ್ಕಿ! ಅರವಿಂದ ಹೊಡೆದುಕೊಂಡು ಬಂದಿದ್ದಾನೆಂತ ತೋರುತ್ತದೆ. ಬ್ಯೂಟಿ!'' ಎಂದು ಹೇಳಿ ನಗತೊಡಗಿದರು. ಅರವಿಂದ ಸಮೀಪ ಬಂದೊಡನೆಯೇ "ಹಲೋ! ಹಲ್ಲೋ, ಮಿಸ್ಟರ್ ಯಾವಾಗ ಬಂದೆ?" ಎಂದು ಹೇಳುತ್ತ ಕೈಕುಲುಕಿದರು. ಅವನು ಉತ್ತರ ಕೊಡುವ ಮೊದಲೇ "ಏನು ದೀಪಾವಳಿಗೆ ಹೋದವನು ಮದುವೆ ಮಾಡಿಕೊಂಡೇ ಬಂದೆಯೇನು? ಯಾರದು, ನಿನ್ನ ವೈಫ್?" ಎಂದು ಕೇಳಿದರು.

"ಅಲ್ಲ! ನನ್ನ ಸಿಸ್ಟರ್!"

"ಸ್ಸಾರಿ ಮಿಸ್ಟರ್ ! ಯಾರೋ ಹೇಳಿದರು ಅರವಿಂದ ಲಗ್ನವಾಗಿದ್ದಾನಂತ! ನಮಗೆ ಗೊತ್ತಾಗಲಿಲ್ಲ. ಎಕ್ಸ್‌ಕ್ಯೂಸ್"

"ಯಾರು ಹೇಳಿದರು? ನಿಮ್ಮನ್ನೆಲ್ಲ ಬಿಟ್ಟು ನಾನು ಲಗ್ನವಾಗುವದಿದೆಯೇ? ಇಂಪೊಸಿಬ್ಲ್! ಅಲ್ಲದೆ ನಾನು ಅಂಥಿಂಥ ಹುಡುಗಿಯರನ್ನು ಮಾಡಿಕೊಳ್ಳುತ್ತೇನೆಂತ ತಿಳಿದೆಯೇನು? ಡ್ಯಾಂ ಇಟ್! ಈ ಯುದ್ಧದಲ್ಲಿ ಯುರೋಪಿನಲ್ಲಿ ಲಕ್ಷಗಟ್ಟಲೆ ಜನ ಸಾಯುತ್ತಿದ್ದಾರೆ. ಅಲ್ಲಿಯ ಹುಡುಗಿಯರಿಗೆ ಯಾರು ಗತಿ? ಯುದ್ಧ ಮುಗಿಯಲಿ. ಆ ಮೇಲೆ ಪ್ಯಾರಿಸಿಗೆ ಹೋಗಿ ಒಂದು ತರೋಣ. ಬ್ಯೂಟಿಫುಲ್ ಫ್ರೆಂಚ್ ಗರ್ಲ!'' ಎಂದ ಅರವಿಂದ.

"ಹುರ್ರೇ! ಹಿಪ್ ಹಿಪ್ ಹುರ್ರೆ!'' ಎಂದು ಹುಡುಗರು ಹಾರಾಡಿದರು. ಒಬ್ಬ ಸುಯಿಲ್ ಹಾಕಿದ! ಇನ್ನೊಬ್ಬ ತಲೆಯ ಮೇಲಿನ ಹ್ಯಾಟು ತೆಗೆದು ಆಕಾಶಕ್ಕೆ ತೂರಿದ. ಮತ್ತೊಬ್ಬ ''ಪಿಯಾ ಮಿಲನಕೋ ಜಾನಾ" ಎಂದು ಗುಂಯಿಗುಟ್ಟತೊಡಗಿದ. ''ಓಕೆ" ಎಂದು ಅರವಿಂದ ಕೈಎತ್ತಿ ಹಿಟ್ಲರ್ ವಂದನೆ ಮಾಡಿ ಹೊರಟ. ಆಚೆ ನಗುತ್ತಿದ್ದ ಕಾವೇರಿಯೂ ಅಣ್ಣನ ಹೆಜ್ಜೆಯಲ್ಲಿ ಹೆಜ್ಜೆ ಹಾಕಿದಳು. ಮೊದಲು ಹುಡುಗರ ಮಾತಿನಿಂದ ಅವಳಿಗೆ ಕೋಪ ಬಂದಿತ್ತು. ಆದರೆ ಮುಂದೆ ಅವರ ಹುಚ್ಚಾಟ ನೋಡಿ ನಗು ಉಕ್ಕೇರಿತು. ಅವಳು ಆಚೆ ಮೋರೆ ತಿರುವಿ ಒಳಗೊಳಗೆ ನಗುತ್ತಿದ್ದಳು. ಅಲ್ಲಿಂದ ಸ್ವಲ್ಪ ದೂರ ಬಂದ ಮೇಲೂ ''ಬಣ್ಣ ನೋಡು. ಜಡೆ ನೋಡು. ಬ್ಯೂಟಿಫುಲ್ ಗರ್ಲ್!'' ಎಂದು ಕೇಳಿಸುವ ಹಾಗೆ ಅವರು ಕೂಗುತ್ತಿದ್ದುದ

ರಿಂದ ಅವಳಿಗೆ ನಗುವನ್ನು ತಡೆಯಲಾಗಲಿಲ್ಲ. "ಅಣ್ಣಾ! ಇವರು ನಿನ್ನ ಕಾಲೇಜ್ ಹುಡುಗರಾ? ಅಬ್ಬಾ ದೇವರೆ, ಏನು ಮಾತನಾಡುತ್ತಾರೆ! ಏನು ನಗಿಸುತ್ತಾರೆ! ಒಬ್ಬೊಬ್ಬರೇ ಅವರ ಕಣ್ಣಿಗೆ ಬಿದ್ದರೆ ಮಾತಿನಿಂದಲೇ ಕೊಂದಾರು" ಎಂದು ನುಡಿದಳು.

ಅರವಿಂದ ನುಡಿದ: "ಹಾಗೆಯೇ ತಮಾಷೆ ಮಾಡುತ್ತಾರೆ. ಕೇಡು ಬಗೆಯುವವರಲ್ಲ. ಜಗತ್ತಿನಲ್ಲಿ ಹೀಗೆ ವಿನೋದಪ್ರಿಯರಾಗಿದ್ದರೆ ಲೇಸು. ಕಷ್ಟಗಳನ್ನೆಲ್ಲ ನಗೆಯಲ್ಲಿ ತೇಲಿಸಿ ಬಿಡಲಾಗುತ್ತದೆ."

ಕಾವೇರಿ ಹೇಳಿದಳು: "ಎಲ್ಲರಿಗೂ ಅದು ಶಕ್ಯವಿಲ್ಲ. ಎಲ್ಲ ಕಾಲದಲ್ಲೂ ಅದು ಸಾಧ್ಯವಾಗಲಾರದು. ದುಃಖ ಜೀವಕ್ಕೆ ಅಂಟಿಕೊಂಡಾಗ ಅದರ ಅನುಭವವಾಗುತ್ತದೆ."

ಅರವಿಂದ ಕೂಡಿಸಿದ: "ದುಃಖ ಯಾರಿಗಿಲ್ಲ? ಈ ಜಗತ್ತಿನಲ್ಲಿ ಹುಟ್ಟಿ ಬಂದ ಪ್ರತಿಯೊಂದು ಜೀವಿಗೂ ಇದ್ದೇ ಇದೆ. ದೇವರೇ ಈ ಲೋಕಕ್ಕೆ ಇಳಿದು ಬಂದರೂ ಇಲ್ಲಿಯ ಸುಖ ದುಃಖವನ್ನು ಅನುಭವಿಸಬೇಕಾಗುತ್ತದೆ. ಅದರಿಂದ ತಪ್ಪಿಸಿಕೊಳ್ಳಲಿಕ್ಕಾಗದು. ಬಾಳಲಾರೆನೆಂದು ಓಡಿಹೋಗಲಿಕ್ಕಾಗುತ್ತದೆಯೇ? ಹೆದರಿ ಪ್ರಾಣ ತೆಗೆದುಕೊಳ್ಳುವವರಿದ್ದಾರೆ. ಆದರೆ ಅದು ಹೇಡಿತನ!"

"ಹೇಡಿತನವೋ ಶೂರತನವೋ ಒಮ್ಮೆ ಈ ಲೋಕದ ಕಷ್ಟಗಳು ಮುಗಿಯುತ್ತದಲ್ಲ!"

"ಬರಿ ಹುಚ್ಚು! ಈ ಲೋಕದ್ದು ಮುಗಿಯುತ್ತದೆ. ನಿಜ. ಆದರೆ ಮತ್ತೆ ಏನನ್ನು ಅನುಭವಿಸಲಿದೆಯೆಂದು ಯಾರಿಗಾದರೂ ಗೊತ್ತಿದೆಯೇ? ಈ ಲೋಕದಲ್ಲಿ ಈ ರೀತಿ ಬಾಳುತ್ತೇವೆ ಈ ಜೀವ ತೊರೆದ ಮೇಲೆ ಬೇರೆ ಯಾವ ಲೋಕದಲ್ಲಿ ಯಾವ ರೀತಿ ಬಾಳಬೇಕೋ ಏನೋ?"

"ಅಣ್ಣಾ! ನನಗೆ ಇದೆಲ್ಲ ಅರ್ಥವಾಗುವುದಿಲ್ಲ."

"ಬೇಡ. ಅದನ್ನು ನೀನು ಚಿಂತಿಸುವುದೂ ಬೇಡ. ಏನೋ ಮಾತನಾಡುತ್ತ ಅದು ಬಂದುಬಿಟ್ಟಿತು. ಆದರೆ ಇಷ್ಟು ಹೇಳಬೇಕೆಂದು ನಾನು ಅಪೇಕ್ಷಿಸುತ್ತೇನೆ:- ನೀನು ಪ್ರಾಣ ತೆಗೆದುಕೊಳ್ಳುವ ವಿಚಾರವನ್ನೆಂದಿಗೂ ಮಾಡಕೂಡದು."

"ಇಲ್ಲ ಅಣ್ಣಾ, ಇಲ್ಲ. ನನ್ನನ್ನು ಆಶ್ರಮಕ್ಕೆ ಸೇರಿಸಿಬಿಡು. ನನಗೂ ಕಲಿಯಬೇಕೆಂದು ಆಸೆಯಾಗಿದೆ. ನಾನು ಟೀಚರೋ, ಡಾಕ್ಟರರೋ ಆಗ ಬೇಕೆಂದು ಬಯಸುತ್ತೇನೆ".

ಕಾವೇರಿಯ ಈ ನೂತನ ವಿಚಾರವನ್ನು ಕೇಳಿ ಅರವಿಂದ ದಂಗು ಬಡೆದಂತವನಾದ. ರಸ್ತೆಯಲ್ಲಿ ನಡೆಯುತ್ತಿದ್ದವನು ಗಕ್ಕನೆ ನಿಂತುಬಿಟ್ಟ. ಅವನು ಹೊಟ್ಟೆಯೊಳಗೆ ಬಚ್ಚಿಟ್ಟುಕೊಂಡಿದ್ದ ಮಾತುಗಳು ಥಕ್ಕನೆ ಹೊರಗೆ ಹಾರಿ ಉದುರಿದವು:

"ತಂದೆಯವರು ನಾಳೆ ಬಂದಾರು ಅವರು ಬಂದ ಮೇಲೆ ನೀನು ಏನು ಬೇಕಾದರೂ ಮಾಡು''.

# ೧೮ ನೇಯ ಅಧ್ಯಾಯ

ಬಾಲಕೃಷ್ಣನಿಗೆ ಬೆಳಿಗ್ಗೆ ಚೀಟಿ ದೊರೆಯಿತು. ತಕ್ಷಣ ಅವನು ಪೇಟೆ, ಕೋರ್ಟು, ಕಚೇರಿ ತಿರುಗಿ ಬಂಗಾಡಿಗೆ ಹೋಗುವವರು ಯಾರಾದರೂ ಇದ್ದಾರೋ ಎಂದು ಹುಡುಕಿದ. ಆದರೆ ಯಾರೂ ಇರದಿದ್ದುದನ್ನು ಕಂಡು ಸೈಕಲ್ ಮೇಲೆ ತಾನೇ ಧಾವಿಸಿದ. ಅರವಿಂದನ ಪತ್ರ ಓದಿ ಗೋಪಾಲರಾಯರಿಗೆ ಕೋಪ ಕೆರಳಿತು. ಆ ಉರಿಬಿಸಿಲಲ್ಲೇ ಹೊರಡಲು ಅವರು ಸಿದ್ಧರಾದರು. ಆದರೆ ಜಲಜಮ್ಮ ಬಿಡಲಿಲ್ಲ. "ದೇವರ ಪೂಜೆ ಮಾಡಿಲ್ಲ. ಊಟ ಆಗಿಲ್ಲ. ಈಗಲೇ ಹೊರಡುವುದೆಂದರೇನು ? ಈಗ ನೀವು ಹೋದರೂ ಬೆಳ್ತಂಗಡಿ ಮುಟ್ಟುವಾಗ ಸಾಯಂಕಾಲವೇ ಆಗುತ್ತದೆ. ಮತ್ತೆ ಬಸ್ ಸಿಗುವುದೂ ಕಷ್ಟ. ಯಾಕಿಷ್ಟು ಅವಸರ? ಸ್ವಲ್ಪ ತಾಳಿ ಸಂಜೆ ಊಟಮಾಡಿ ಹೊರಡಿ. ರಾತ್ರಿ ಬೆಳ್ತಂಗಡಿಯಲ್ಲಿದ್ದು ಬೆಳಿಗ್ಗೆ ಅಲ್ಲಿಂದ ಹೋಗಬಹುದು'' ಎಂದರು.

"ಯಾವುದಾದರೂ ಒಂದು ಕೆಲಸಕ್ಕೆ ಹೊರಟಾಗ ನಿನ್ನದು ಅಡ್ಡಿ. ಅಪಶಕುನಾ ಅಂದರೆ ಅಪಶಕುನ. ! ಬಾಯಿ ಮುಚ್ಚಿ ಸುಮ್ಮನೆ ಇರಲಿಕ್ಕೆ ನಿನ್ನಿಂದಾಗುವುದಿಲ್ಲ !'' ಎಂದು ಅವರು ಗದರಿಸಿದರು.

"ಮಧ್ಯಾಹ್ನದ ಹೊತ್ತು. ಅಡಿಗೆ ಆಗಿದೆ. ಊಟ ಮಾಡಿ ಹೋಗಿ ಎಂದೆ ಹೊರತು ಹೋಗಬೇಡಿ ಅನ್ನಲಿಲ್ಲ. ಬರಿ ಹೊಟ್ಟೆಯಲ್ಲಿ ಹೊರಟರೆ ಅಷ್ಟು

ದೂರ ನಡೆಯಲು ನಿಮ್ಮಿಂದ ಆದೀತಾ ? ಆತನೂ ಊಟ ಮಾಡಿರಲಿಕ್ಕಿಲ್ಲ. ಅಲ್ಲಿಂದ ಅವನು ಇಲ್ಲಿಯ ವರೆಗೆ ಓಡಿ ಬಂದಿದ್ದಾನೆ. ಅವನಿಗೊಂದು ಮುಷ್ಟಿ ಅನ್ನ ಕಾಣಿಸುವುದು ಬೇಡ್ವಾ?" ಎಂದು ಜಲಜಮ್ಮ ಅನುನಯದಿಂದ ಹೇಳಿದರು.

ಅದು ಹೌದೆಂದನ್ನಿಸಿತು ಅವರಿಗೆ. ಚಾವಡಿಗೆ ಬಂದು ಊಟ ಮಾಡಿ ಹೋಗಲು ಬಾಲಕೃಷ್ಣನಿಗೆ ಹೇಳಿ ತಾವು ಸ್ನಾನಕ್ಕೆದ್ದರು. ತಾಸು ತಾಸು ಬಿಸಿ ನೀರು ಮೈ ಮೇಲೆ ಹೊಯ್ದುಕೊಳ್ಳುತ್ತಿದ್ದ ಗೋಪಾಲರಾಯರ ಸ್ನಾನ ನಾಲ್ಕು ತಂಬಿಗೆಯಲ್ಲಿ ಮುಗಿಯಿತು. ಹರಿವಾಣ ತುಂಬ ತುಳಸಿ ಪುಷ್ಪ ಕೊಯ್ಯುತ್ತಿದ್ದ ಅವರು ಈಗ ಬಾವಿಕಟ್ಟೆಯ ಬಳಿಯಲ್ಲಿದ್ದ ನಾಲ್ಕು ದಳಗಳನ್ನು ಚಿವುಟಿಕೊಂಡು ಬಂದರು. ಮನೆ ತುಂಬ ಘನಸಿನಾದವಾಗಿ ಪ್ರತಿಧ್ವನಿಸುತ್ತಿದ್ದ ಮಂತ್ರೋಚ್ಚಾರ ಅವರ ಬಾಯಿಂದಲೇ ಹೊರಗುದುರಲಿಲ್ಲ. ಈ ದಿನ ಗೋಪಾಲರಾಯರೇ ಅದರ ಶಾಸ್ತ್ರ ಮುಗಿಸಿದರು. ದೇವರ ಕೋಣೆಗೆ ಹೇಗೆ ಹೋದರೋ ಹೇಗೆ ಹೊರಬಂದರೋ ಜಲಜಮ್ಮನವರಿಗೆ ಗೊತ್ತಾಗಲಿಲ್ಲ. ಎಲ್ಲ ಒಂದು ಚಿಟಕಿನ ಹೊತ್ತಿನಲ್ಲಿ ಮುಗಿಯಿತು. ಊಟವಾದ ಮೇಲೆ ಅವರು ಬಾಲಕೃಷ್ಣನಿಗೆ ಬಡಿಸಿದರು. "ಬಿಸಿಲಿಗೆ ಹೋಗಬೇಡ. ಸಂಜೆ ಕಾಫಿ ಕುಡಿದೇ ಹೋಗು'' ಎಂದು ಅವನಿಗೆ ಕಟ್ಟಪ್ಪಣೆ ಮಾಡಿ, "ಸ್ವಲ್ಪ ಮೈ ಹೊರಳಿಸು" ಎಂದು ಈಚಲ ಚಾಪೆಯಿತ್ತರು. ಆದರೆ ಸ್ವತಃ ತಾವು ಅನ್ನದ ಆಲಸ್ಯ ಕಳೆಯಲು ಒರಗದೆ, ಬಿಸಿಲೆಂದು ಗಮನಿಸದೆ ರಾಮಗೌಡನ ಮನೆಯ ಕಡೆ ಹೊರಟರು.

ಧನಿ ತನ್ನ ಗುಡಿಸಲಿಗೆ ಬಂದುದನ್ನು ಕಂಡು ರಾಮಗೌಡ ಅತ್ಯಾಶ್ಚರ್ಯ ಚಕಿತನಾಗಿ ಹೊರಗೆ ಬಂದ. "ಅಯ್ಯಾ ! ಏನು ಬಿಸಿಲಿಗೆ ಬಂದಿರಿ ? ಏನು ಕಥೆ" ಎಂದು ಕೇಳಿದ.

"ಕಥೆ ಮಾಭಾರತ. ಅಂಗಿ ಹಾಕಿಕೊಂಡು ಬಾ".

"ಊಟ ಆಗಿಲ್ಲಯ್ಯಾ !''

"ನಮ್ಮಲ್ಲಿ ಮಾಡು. ಬೆಳ್ತಂಗಡಿ ವರೆಗೆ ಹೋಗಬೇಕು. ನಾನೂ ಬರುತ್ತೇನೆ.''

ಏನೋ ವಿಶೇಷವಿದೆಯೆಂದು ಊಹಿಸಿದ ರಾಮ ಮರುಮಾತನಾಡದೆ

ಅವರ ಬೆನ್ನ ಹಿಂದೆ ಹೊರಟ. ಅವನ ಊಟ ಮುಗಿದಾಗ ಅವರ ಕಾಫಿಯೂ ಆಯಿತು. ಬಾಲಕೃಷ್ಣ ಬೈಸಿಕಲ್‌ನಲ್ಲಿ ಮುಂದೆ ಹೋದ. ಇವರಿಬ್ಬರೂ ಕಾಲುದಾರಿ ಹಿಡಿದರು. ಬೆಳ್ತಂಗಡಿಯಲ್ಲಿ ಬಾಲಕೃಷ್ಣ ಅವರನ್ನು ಇದಿ ರ್ಗೊಂಡು ತನ್ನಂಗಡಿಗೆ ಕರೆದೊಯ್ದು. ಬೇಡವೆಂದರೂ ಕೇಳದೆ ಕಾಫಿ ತರಿಸಿದ. ಹೋಟೇಲಿನಲ್ಲಿ ಅವರು ತಂಗಿದರು. "ನಾನು ಬರುವವರೆಗೆ ನೀನು ಇಲ್ಲೇ ಇರು" ಎಂದು ಹೇಳಿ ಗೋಪಾಲರಾಯರು ಬೆಳಿಗ್ಗೆ ಮೊದಲನೇ ಮೋಟಾರನ್ನು ಹಿಡಿದು ಮಂಗಳೂರಿಗೆ ಪ್ರಯಾಣ ಬೆಳೆಸಿದರು.

ಹೋಟೇಲಿನ ವೆರಂಡಾದಲ್ಲಿ ಒಂದು ಬನಿಯನ್ ಮೇಲೆ ಟೈರಾಸ್ ಹಾಕಿಕೊಂಡು ಅತ್ತಿತ್ತ ಸುಳಿಯುತ್ತಿದ್ದ ಅರವಿಂದ ಅವರನ್ನು ದೂರದಿಂ ದಲೇ ಕಂಡು ಕೆಳಗಿಳಿದು ಬಂದು "ಚೀಟಿ ಯಾವಾಗ ಸಿಕ್ಕಿತು?" ಎಂದು ಮಾತನಾಡಿಸಿದ.

"ನಿನ್ನೆಯೇ ಬಾಲಕೃಷ್ಣ ತಂದ. ಆದರೆ ನನಗೆ ಸರಿ ಅರ್ಥವಾಗಲಿಲ್ಲ. ಯಾಕೆ ನೀನು ಅವಳನ್ನು ಮನೆಗೆ ಕರೆದುಕೊಂಡು ಹೋಗಲಿಲ್ಲೇನು ? ಅವನಿಲ್ಲೇನು ಊರಿನೊಳಗೆ? ಏನು ಕಥ?" ಎಂದು ಅವರು ಕೇಳಿದರು.

"ಇಲ್ಲಿ ಬೇಡ. ಮೇಲೆ ಕೋಣೆಗೆ ಹೋಗೋಣ. ಆ ರಾಮಾಯಣ ಹೇಳುತ್ತೇನೆ" ಎಂದು ಅರವಿಂದ ಕರೆದುಕೊಂಡು ಹೋದ.

ತಂದೆಯನ್ನು ಕಂಡೊಡನೆಯೇ ಕಾವೇರಿ ಮಗುವಿನಂತೆ ಅಳಲಾ ರಂಭಿಸಿದಳು.

ಹೃದಯವನ್ನು ತಿವಿದಷ್ಟು ವೇದನೆಯಾದರೂ ಅವರು ಅವನ್ನು ತೋರಿಸದೆ "ಯಾಕಳುತಿದ್ದೀಯಮ್ಮ! ನಿನಗೆ ಅಂಥ ಕಷ್ಟ ಈಗ ಏನು? ನಾವೆಲ್ಲ ಇಲ್ವಾ? ಸ್ವಲ್ಪ ಧೈರ್ಯದಿಂದಿರು ನೋಡೋಣ" ಎಂದು ಅಂತಃ ಕರುಣದಿಂದ ನುಡಿದರು.

ಆ ಮೇಲೆ ಅರವಿಂದ ಸವಿಸ್ತಾರ ವಿವರಿಸಿದ. ಆನಂದರಾಯ ಮನೆ ಮಾಡಿ ವಾಸಂತಿಯೊಡನೆ ವಾಸಿಸುತಿದ್ದಾನೆಂದು ಅವರಿಗೂ ತಿಳಿದಿರಲಿಲ್ಲ. "ಅದು ಗೊತ್ತಿದ್ದರೆ ನಾನು ಕಳಿಸುತಿದ್ದೇ ಇಲ್ಲ" ಎಂದವರು ಹೇಳಿದರು. ಆದರೆ "ಆಶ್ರಮ ಸೇರುತ್ತೇನೆ. ಹಾಗೆ ಹೀಗೆ" ಎಂದು ಕಾವೇರಿ ಹೇಳಿದು ದನ್ನು ಕೇಳಿ ಅವರು ವ್ಯಥೆಪಟ್ಟರು. "ಆಶ್ರಮ ಯಾಕೆ ಮಗಳೇ? ನಮ್ಮ

ಹೊಟ್ಟೆಯಲ್ಲಿ ಹುಟ್ಟಿದವಳು ನೀನು ಅನ್ನ ನೀರಿಗಾಗಿ ಅವರ ಕೈ ಬಾಯಿ ಕಾದು, ಬೈಸಿಕೊಂಡು ಆಶ್ರಮದಲ್ಲಿ ಯಾಕಿರಬೇಕು? ನಾನು ಜೀವಂತವಿರುವ ವರೆಗೆ ಅಂಥ ವಿಚಾರ ಮಾಡಬೇಡ. ಹಾಗೆ ನೋಡಿದರೆ ನಮ್ಮ ಊರೇ ಒಂದು ತಪೋವನ ಇದ್ದಂತಿದೆ.'' ಎಂದವರು ಹೇಳಿ ಪುನ: ಯೋಚಿಸಿ ನುಡಿದರು: "ಲಗ್ನವಾದ ಮೇಲೆ ಆಶ್ರಮದಲ್ಲಿರುತ್ತೇನೆಂದು ಹೇಳಿದರೆ ಹೇಗಮ್ಮ! ನಮ್ಮಂಥ ಜನರು ಸಂಸಾರ ಬಿಟ್ಟಿರಲಿಕ್ಕಾಗಲಿಕ್ಕಿಲ್ಲ. ಕೊನೆಯ ವರೆಗೂ ಹೀಗೇ ಇರುವುದು ಕಠಿನ. ಇದ್ದರೂ ಕೇಡಿಗಳು ನಿಂದಿಸದೆ ಬಿಡುವುದಿಲ್ಲ. ನಿನ್ನ ತಪ್ಪಿಲ್ಲದಿದ್ದರೂ ನಿನ್ನ ಮೇಲೆ ಅಪವಾದ ಹೊರಿಸುತ್ತಾರೆ. ನೀನು ಇನ್ನೂ ಸಣ್ಣವಳು. ನಿನಗದು ಗೊತ್ತಿಲ್ಲ. ಅದನ್ನು ಹೇಳಿದರೂ ನಿನಗೆ ಪೂರ್ಣ ಅರ್ಥವಾಗಲಿಕ್ಕಿಲ್ಲ. ಆದುದರಿಂದ ಹಾಗೆಲ್ಲ ಯೋಚಿಸಿ ತಲೆ ಕೆಡಿಸಿಕೊಳ್ಳಬೇಡ. ಏನೋ, ಈಗ ದೆಸೆ ಒಳ್ಳೇದಿಲ್ಲ. ಒಳ್ಳೇಕಾಲ ಬಂದೀತು. ಅಷ್ಟರವರೆಗೆ ಧೈರ್ಯಗೆಡಬಾರದು.''

ಗೋಪಾಲರಾಯರು ಕುರ್ಚಿಯನ್ನು ಮಗಳ ಸಮೀಪ ಎಳೆದುಕೊಂಡು ಹೇಳಿದರು: "ಮದುವೆ ಆದ ಮೇಲೆ ಆಗಿ ಹೋಯ್ತು! ಒಬ್ಬರು ಒಳ್ಳೆಯವರಿರುತ್ತಾರೆ, ಒಬ್ಬರು ಕೆಟ್ಟವರಿರುತ್ತಾರೆ. ಕೆಲವರು ಪ್ರೇಮದಿಂದ ನಡೆಸಿಕೊಳ್ಳುತ್ತಾರೆ. ಕೆಲವರು ಅತ್ತೆ ಕಾಟಕ್ಕೂ ಒಳಗಾಗುತ್ತಾರೆ. ಅವೆಲ್ಲ ಅವರವರ ಪೂರ್ವ ಕರ್ಮಾನುಸಾರ. ಅದೃಷ್ಟ! ನಾವು ಏನು ಮಾಡಲಿಕ್ಕಾಗುತ್ತದೆ ಹೇಳು. ಆದರೆ ಅಷ್ಟರಿಂದಲೇ ಹೆದರಿ ಓಡುವುದಲ್ಲ. ಇದ್ದು ಜೈಸಬೇಕು ಎಂದು ಪುರಂದರ ದಾಸರು ಹೇಳಿದುದನ್ನು ಕೇಳಿದ್ದೀಯಾ! ಮದುವೆಯಾದ ಮೇಲೆ ಗಂಡನ ಮನೆಗೆ ಹೋಗದಿದ್ದರೆ ಹೇಗಮ್ಮಾ?"

ಕಾವೇರಿ ಉತ್ತರ ಕೊಟ್ಟಳು: "ನಾನು ಹೋಗುವುದಿಲ್ಲ ಎಂದಿಲ್ಲ. ಗಂಡನೊಡನೆ ಬಾಳಬೇಕೆಂದೇ ಬಂದಿದ್ದೇನೆ. ಆದರೆ ಅವಳಿರುವ ಮನೆಯಲ್ಲಿ ಹೇಗಿರಲಿ, ಅಪ್ಪಯ್ಯಾ?"

ಗೋಪಾಲರಾಯರು ಸ್ವಲ್ಪ ಯೋಚಿಸಿ ಹೇಳಿದರು: "ಬೇರೆ ಮನೆ ಮಾಡಿಕೊಟ್ಟರೆ ಇರುತ್ತೀ?"

ಕಾವೇರಿ ತಲೆ ಅಲ್ಲಾಡಿಸಿದಳು.

"ಒಳ್ಳೇದು. ನಾನು ಅವನನ್ನು ಕಂಡು ಮಾತನಾಡಿ ಬರುತ್ತೇನೆ. ಏನ

ನ್ನು ತ್ತಾನೆ ನೋಡೋಣ” ಎಂದು ಗೋಪಾಲರಾಯರು ನುಡಿದು ಅರವಿಂದ ನೊಂದಿಗೆ ಆನಂದರಾಯನ ಭೆಟ್ಟಿಗೆ ತೆರಳಿದರು.

ಗೋಪಾಲರಾಯರನ್ನು ಕಂಡೊಡನೆಯೇ ಅವನ ಮೋರೆ ಒಣಗಿತು. ತಲೆ ಎತ್ತಿ ನೋಡದೆ “ಯಾವಾಗ ಬಂದಿರಿ?” ಎಂದು ಪ್ರಶ್ನಿಸಿದ. “ಈ ಹೊತ್ತೇ” ಎಂದವರು ಉತ್ತರವಿತ್ತ ಮೇಲೆ ಅವನು ಮುಂದೆ ಮಾತನಾಡಿಸ ಲಿಲ್ಲ. ಒಬ್ಬಿಬ್ಬರು ರೋಗಿಗಳಿದ್ದುದರಿಂದ ಅವರೊಡನೆ ಅವನ ಮಾತು ನಡೆ ದಿತ್ತು. ಗೋಪಾಲರಾಯರು ಕುರ್ಚಿಯಲ್ಲಿ ಕುಳಿತು ಸುಮ್ಮಗೆ ಗೋಡೆ, ಅಟ್ಟ, ಕಿಟಕಿಯ ಸರಳುಗಳ ಎಡೆಯಿಂದ ಆಚೆ ಕಾಣುವ ತೆಂಗಿನ ಮರಗ ಳನ್ನು ನೋಡತೊಡಗಿದರು. ಆ ರೋಗಿಗಳು ಹೊರಟು ಹೋದ ಮೇಲೆ ಗೋಪಾಲರಾಯರು “ಹುಡುಗಿಯನ್ನು ಕರೆದುಕೊಂಡು ಬಾ ಎಂದು ಅರ ವಿಂದನಿಗೆ ತಿಳಿಸಿದ್ದಿರಂತೆ. ಅದರಂತೆ ನಾವು ಮೊನ್ನೆ ಕಳಿಸಿದ್ದೆವು” ಎಂದರು.

“ಹೌದು. ಆದರೆ ಮನೆಗೆ ಬಂದಿಲ್ಲ.”

“ಹೋಗಿದ್ದರಂತೆ”

“ಹೌದು, ಹೋದವರು ವಾಪ್ಸು ತಿರುಗಿದರಂತೆ! ಅಲ್ರೀ, ನಿಮ್ಮ ಹುಡುಗಿಗೆ ಅಷ್ಟು ಸಿಟ್ಟು, ಸೊಕ್ಕು ಏನ್ರೀ?”

“ಏನು ಸೊಕ್ಕಿದಳು? ಏನು ಮಾತನಾಡುತ್ತೀರಿ ನೀವು? ಏನು ನಿಮ್ಮಂತೆ ಯಾರನ್ನಾದರೂ ಕಟ್ಟಿಕೊಂಡು ಹೋದಳೇನು?” ಸ್ವಲ್ಪ ಬಿರು ಸಾಗಿಯೇ ಉತ್ತರವಿತ್ತರು ಅವರು.

ಅವನು ರೇಗಿ ನುಡಿದ: “ನೀವು ಅದನ್ನೆಲ್ಲ ತೆಗೆಯ ಬೇಡಿ. ನಿಮಗೆ ಕೇಳುವ ಅಧಿಕಾರವಿಲ್ಲ.”

“ಯಾಕಿಲ್ಲ ಅಧಿಕಾರ? ನಾವು ಪರಭಾರಿಯಲ್ಲ, ಒಂದು ಹುಡುಗಿ ಯನ್ನು ಕೊಟ್ಟಿದ್ದೇವಲ್ಲ! ಅದರಿಂದ ಸಂಕಟಪಟ್ಟು ಕೇಳುತ್ತೇವೆ. ಇಲ್ಲದಿದ್ದರೆ ನಿಮ್ಮ ಉಸಾಬರಿಗೆ ಯಾರು ಬರುತ್ತಿದ್ದರು? ನೀವು ಯಾರೋ, ನಾವು ಯಾರೋ? ನೀವು ಹೀಗಿದ್ದೀರೆಂತ ಗೊತ್ತಿದ್ದರೆ ಕೊಡುತಿದ್ದುದೂ ಇಲ್ಲ.”

“ನಾನೂ ಲಗ್ನವಾಗುತಿದ್ದಿಲ್ಲ ಬಿಡಿ”

“ನಾವು ಒತ್ತಾಯ ಮಾಡಿದೆವೇನು? ನೀವೇ ಮೈಮೇಲೆ ಬಂದ ಹಾಗೆ ಬಂದಿರಪ್ಪಾ. ನಿಮಗೆ ಆ ಸೂಳೆಯ ಮೇಲೆ ಅಷ್ಟು ಮೋಹ ಇದ್ದರೆ

ಲಗ್ನ ಯಾಕೆ ಮಾಡಿಕೊಳ್ಳಬೇಕಾಗಿತ್ತು ?"

"ನನ್ನಿಷ್ಟ. ನೀವು ಯಾರು ಕೇಳಲಿಕ್ಕೆ ? ಒಂದಲ್ಲ, ಇನ್ನೂ ಒಂದು ಮದುವೆ ಮಾಡಿಕೊಳ್ಳುತ್ತೇನೆ.''

"ಇನ್ನೊಂದಲ್ಲ, ಇನ್ನೂ ಹತ್ತು ಮಾಡಿಕೊಳ್ಳಿ. ದೊಡ್ಡ ಅಕ್ಬರ್ ಬಾದಶಹ! ಆ ಮಹಾರಾಯನ ಹಾಗೆ ಒಬ್ಬೊಬ್ಬರಿಗೆ ಒಂದೊಂದು ಅರಮನೆಯನ್ನಾದರೂ ಕಟ್ಟಿಸಿ ಕೊಡಿ.''

ಆನಂದರಾಯ ನಿರುತ್ತರನಾದ.

ಗೋಪಾಲರಾಯರೇ ಹೇಳಿದರು: "ಹೀಗೆ ಮಾತಾಡಬಾರದು. ಇದು ಒಳ್ಳೇಯದಲ್ಲ. ನಾವು ನಿಮಗೆ ಕೆಟ್ಟದುದಕ್ಕೆ ಹೇಳುವುದಿಲ್ಲ. ನಮ್ಮ ಹಿತ ವಚನ ಕೇಳಿ. ಬೇರೆ ಒಂದು ಮನೆ ಮಾಡಿ. ಮತ್ತು ನಮ್ಮ ಹುಡುಗಿಯನ್ನು ಕರೆಸಿಕೊಳ್ಳಿ. ನೀವು ಸುಖದಿಂದಿದ್ದರೆ ನಮಗೂ ಸಂತೋಷ.''

ಅವನು ಸಟಕ್ಕನೇ ನುಡಿದ: "ಬೇರೆ ಮನೆ ಮಾಡುವಂತಿಲ್ಲ. ಇಷ್ಟವಿದ್ದರೆ ಅದೇ ಮನೆಗೆ ಬರಲಿ".

"ಅವಳು ಅಲ್ಲಿಗೆ ಬರಲಾರಳು. ನಾನೂ ಕಳಿಸುವುದಿಲ್ಲ.''

"ಅವಳು ಬರುವುದೂ ಬೇಡ. ನೀವು ಕಳಿಸುವುದೂ ಬೇಡ. ಇಷ್ಟು ವರುಷ ಹೆಂಡತಿ ಇಲ್ಲದೆ ಇದ್ದೆ. ಇನ್ನೂ ಇರಬಲ್ಲೆ."

ಗೋಪಾಲರಾಯರು ಕುರ್ಚಿಯಿಂದೆದ್ದು ಕೂಗಿ ನುಡಿದರು. "ಏನು ಮಾತನಾಡುತ್ತೀರಿ ? ಏನೆಂತ ತಿಳಿದಿದ್ದೀರಿ ನೀವು ನಮ್ಮನ್ನು ? ನಮ್ಮ ಕೈ ಬೆರಳನ್ನು ಕಣ್ಣಿಗೆ ಚುಚ್ಚಿಕೊಂಡರೆ ನಮ್ಮ ಕಣ್ಣೆ ನೋವಾಗುತ್ತದೆಂದು ಸುಮ್ಮನಿದ್ದೇವೆ. ಆ ರಂಭೆಯೊಂದಿಗೆ ನೀವು ಮೆರೆಯುವುದನ್ನು ನೋಡಿಯೇ ಬಿಡುತ್ತೇವಲ್ಲ".

ಜಗಳ ದೀರ್ಘಕ್ಕೆ ಹೋಗುವ ಲಕ್ಷಣ ಕಂಡ ಅರವಿಂದ ತಂದೆಯ ಬಳಿ ಬಂದು "ಬೇಡ ಅಪ್ಪಯ್ಯ! ಅವರೊಡನೆ ಮಾತನಾಡಿ ಫಲವಿಲ್ಲ. ಹೋಗೋಣ ನಾವು'' ಎಂದು ಹೇಳಿ ಅವರ ಕೈ ಹಿಡಿದು ಎಳೆದುಕೊಂಡು ಹೋದ. ಹೋಟೇಲಿನ ವರೆಗೂ ಅವರು ಮಾತನಾಡಲಿಲ್ಲ. ಅಲ್ಲಿ ಹೋದ ಮೇಲೆ ಕೂಡ ಸುಮ್ಮನೆ ಕುಳಿತರು. ಯಾರಿಗೂ ಅವರನ್ನು ಕೇಳುವ ಧೈರ್ಯವಾಗಲಿಲ್ಲ. ಊಟವಾದ ಮೇಲೆ ಅವರು ಮಲಗಿಕೊಂಡರು. ತಂದೆಯ ಮುಖ

ಚರ್ಯೆಯನ್ನು ಕಂಡು ಕಾವೇರಿ ಊಹಿಸಿದ್ದರೂ ಅಣ್ಣನನ್ನು ಹೊರಗೆ ಕರೆದು ಕೇಳಿ ತಿಳಿದುಕೊಂಡಳು. "ಅಪ್ಪಯ್ಯ ಬರಲೇ ಬಾರದಿತ್ತು. ಅವರನ್ನು ಕರೆಸುವ ಮೊದಲು ನೀನು ನನಗೆ ತಿಳಿಸಲಿಲ್ಲ. ಈಗ ನೋಡು, ಅವರ ಮನಸ್ಸಿಗೆ ಎಷ್ಟು ದುಃಖವಾಗಿದೆ!" ಎಂದು ಅವಳು ನುಡಿದಳು.

"ಆಗುವುದನ್ನು ತಪ್ಪಿಸಲಿಕ್ಕಾಗುವುದಿಲ್ಲ. ನಾನು ನಿನ್ನನ್ನು ಬಂಗಾಡಿಗೆ ಮುಟ್ಟಿಸಿದಾಗಲೂ ಅವರು ವ್ಯಸನಪಡುತಿದ್ದರು.''

"ಹೌದು. ಆದರೆ ಈ ಜಗಳ ತಪ್ಪುತಿತ್ತಲ್ಲ."

ಅರವಿಂದ ಆಕಾಶದ ಕಡೆ ನೋಡಲಾರಂಭಿಸಿದ. ಕಾವೇರಿಯೇ ಕೇಳಿದಳು: "ಅಪ್ಪಯ್ಯ ಏನು ಹೇಳಿದರು ?"

"ಏನೂ ಹೇಳಿಲ್ಲ."

"ನಿನ್ನ ವಿಚಾರವೇನು ?"

"ನನ್ನ ವಿಚಾರವೇನಿದೆ ? ಅಪ್ಪಯ್ಯ ಬಂದ ಮೇಲೆ ನನ್ನ ಜವಾಬ್ದಾರಿ ಇಲ್ಲ. ಅವರು ನಿನ್ನನ್ನು ಕರೆದುಕೊಂಡು ಹೋಗುತ್ತಾರೆ. ನಾನು ಸಂಜೆ ಹೋಸ್ಟೇಲಿಗೆ ಹೋಗುತ್ತೇನೆ. ಒಂದು ದಿನ ಕಾಲೇಜ್ ತಪ್ಪಿತು.''

"ನಾನು ಬಂಗಾಡಿಗೆ ಹೋಗುವುದಿಲ್ಲವೆಂದು ನಿನ್ನೆ ನಿನ್ನೊಡನೆ ಹೇಳಿದ್ದೆನಲ್ಲ.''

"ಹೌದು. ಆದರೆ ಇಲ್ಲಿ ಇರುವುದೆಲ್ಲಿ ? ಇದ್ದು ಏನು ಮಾಡುವವಳು ?''

"ಅಣ್ಣಾ, ನಾನು ತುಂಬ ಯೋಚಿಸಿದ್ದೇನೆ. ನಿನ್ನೆ ನಾವು ತಿರುಗಾಡಲು ಹೋದಾಗ ಎಷ್ಟೆಲ್ಲ ಹುಡುಗಿಯರನ್ನು ಕಂಡೆ. ಗುಂಪುಗುಂಪಾಗಿ ಅವರು ಶಾಲೆಯಿಂದ ಬರುತಿದ್ದರು. ಎಲ್ಲೆಲ್ಲಿ ನೋಡಿದರೂ ಅವರೇ. ಎಷ್ಟು ಹಸನ್ಮುಖಿಗಳಾಗಿದ್ದಾರೆ ಅವರು! ಅವರಂತೆ ಶಾಲೆಗೆ ತೆರಳಲು ನನಗೂ ಆಸೆಯಾಗಿದೆ.''

"ನೀನು ಸಣ್ಣವಳಲ್ಲ."

"ಸಣ್ಣವಳಲ್ಲದಿದ್ದರೇನಾಯಿತು? ನನಗಿಂತಲೂ ದೊಡ್ಡ ಹುಡುಗಿಯರು ಶಾಲೆಗೆ ಹೋಗುತಿದ್ದಾರಲ್ಲ. ನಿನ್ನೆ ಅಂಥ ಅನೇಕ ಹುಡುಗಿಯರನ್ನು ನೋಡಿದ್ದೇನೆ.''

"ಅವರು ಹೈಸ್ಕೂಲು, ಕಾಲೇಜುಗಳಲ್ಲಿ ಕಲಿಯುತಿದ್ದಾರೆ. ನೀನು ಮತ್ತೆ ಓಂ ಪ್ರಥಮದಿಂದ ಆರಂಭಿಸಬೇಕು."

"ಓಂ ಪ್ರಥಮ ಯಾಕೆ? ಐದನೇ ದರ್ಜೆ ನಾನು ಮುಗಿಸಿದ್ದೇನೆ. ಯಾರಾದರೂ ನೀನು ಎಷ್ಟನೇ ತರಗತಿಯೆಂದು ಕೇಳುವುದಿಲ್ಲವಲ್ಲ! ಶಾಲೆ ಕಾಲೇಜಿಗೆ ಹೋಗುವವಳೆಂದು ತಿಳಿದುಕೊಳ್ಳುತ್ತಾರೆ. ನಮ್ಮ ಒಳಗಿನ ಗುಟ್ಟು ಅವರಿಗೆ ಹೇಗೆ ಗೊತ್ತಾಗುತ್ತದೆ?"

"ಅದೆಲ್ಲ ನಿಜ. ನೀನು ಎಲ್ಲಿರುವವಳು? ನಮ್ಮ ಹಾಗೆ ಹುಡುಗಿಯರ ಹೋಸ್ಟೆಲಿನಲ್ಲಿರುತ್ತೀ?''

"ಓಹೋ! ಓಹೋ!"

"ಅಪ್ಪಯ್ಯ ಒಪ್ಪಬೇಕಲ್ಲ!"

"ಅಣ್ಣಾ, ನೀನು ಹೇಳು. ಅಪ್ಪುಗೆ ದಯೆ ತೋರಿಸು".

ಅರವಿಂದ ಆಗಲೆ ಈ ಮಾತನ್ನು ತೆಗೆಯಲಿಲ್ಲ. ಸಾಯಂಕಾಲ ಅವರನ್ನು ತಿರುಗಾಟಕ್ಕೆ ಕರೆದುಕೊಂಡು ಹೋದಾಗ ಇಂಗ್ಲೀಷಿನಲ್ಲಿ ತಂದೆಯೊಡನೆ ಮಾತನಾಡಿದ. ಕಾವೇರಿಯ ನೂತನ ವಿಚಾರ, ನಿರ್ಧಾರಗಳನ್ನು ಕೇಳಿ ಅವರು ಚಕಿತರಾದರು. ಅವಳಿಂದ ಅದು ಆದೀತೇ, ಚಿಕ್ಕ ಹುಡುಗಿಯಲ್ಲಾ, ಆ ಹೋಸ್ಟೇಲಿನಲ್ಲಿ ಹೇಗಿರುತ್ತಾಳೆ, ಎಂದು ಅವರು ತಮ್ಮ ಸಂಶಯ ತಿಳಿಸಿದರು. ಅರವಿಂದ ಅವಕ್ಕೆ ಉತ್ತರವಿತ್ತು ಸಂತೈಸಿದರೂ ಏನೋ, ಎಂತೋ ಎಂಬ ವ್ಯಸನ ಅವರ ಮನಸ್ಸನ್ನು ಮುತ್ತಿತು. "ನನ್ನ ಮಗಳಿಗೆ ಕೊನೆಗೆ ಈ ಅವಸ್ಥೆ ಬಂತಲ್ಲ" ಎಂದು ಅವರು ಮರುಗಿದರು. ಅವರ ಚಿಂತೆಯನ್ನು ಕಂಡು ಕಾವೇರಿ ಪರಿಹರಿಸಲು ಯತ್ನಿಸಿದಳು. ರಾತ್ರಿ ಊಟವಾದ ಮೇಲೆಕೂಡ ಈ ವಿಷಯದ ಬಗ್ಗೆ ಅವರು ಬಹಳ ಹೊತ್ತಿನ ವರೆಗೆ ಅನ್ಯೋನ್ಯ ಚರ್ಚಿಸಿದರು. ಕೊನೆಗೆ ಗೋಪಾಲರಾಯರು ಹೇಳಿದರು: "ಆಗಲಿ. ನಿನ್ನಿಷ್ಟವಿದ್ದಂತೆ ಆಗಲಿ. ದೇವರು ನಡೆಸಿದಂತಾಗುತ್ತದೆ. ಆದರೆ ನೀನು ಹೋಸ್ಟೇಲಿನಲ್ಲಿರುವುದು ಬೇಡ. ಇಬ್ಬರ ಹೋಸ್ಟೆಲ್ ವೆಚ್ಚದಲ್ಲಿ ಒಂದು ಮನೆ ನಡೆದೀತು. ಆದುದರಿಂದ ಇಲ್ಲಿ ಒಂದು ಬಿಡಾರ ಮಾಡೋಣ. ಅಡಿಗೆಗೆ ಮುದುಕಿಯೊಬ್ಬಳನ್ನು ಗೊತ್ತು ಮಾಡುತ್ತೇನೆ. ಕಲಿ. ನಿನಗೆ ಇಷ್ಟವಿರುವ ವರೆಗೆ ಕಲಿ. ಅರವಿಂದನ ಹಾಗೆ ನೀನೂ ಇನ್ನೊಬ್ಬ ಹುಡುಗನೆಂದೇ ಭಾವಿಸುತ್ತೇನೆ."

ಮಾತು ಮುಗಿಸಿದಾಗ ಅವರ ಕಣ್ಣು ಹನಿಗೂಡಿತು.

ಅರವಿಂದ ನೊಂದು ನುಡಿದ: "ಈ ವರುಷ ಆಗಲಿಲ್ಲ. ಮುಂದಿನ

ಜೂನ್ ತಿಂಗಳಿನಿಂದ ಶಾಲೆಗೆ ಸೇರಲಾಯ್ತು.''

"ಆಗಲಿ! ಹಾಗೇ ಆಗಲಿ!" ಎಂದವರು ಹೇಳಿದರು: "ನೀನು ಬೇಗನೇ ಒಂದು ಬಿಡಾರ ಹುಡುಕು. ನಮಗೆ ಪತ್ರ ಬರೆ. ಆ ಮೇಲೆ ನಾನು ಗ್ರಾಮ ಗೌಡನ ಗಾಡಿಯಲ್ಲಿ ಪಾತ್ರೆ ಪರಡಿಗಳನ್ನು ರವಾನಿಸುತ್ತೇನೆ. ಆ ಮೇಲೆ ಕಾವೇರಿ ಬಂದರೆ ಸಾಕು. ಹೇಗಮ್ಮಾ, ಇದು ನಿನಗೆ ಇಷ್ಟವೋ?"

ಕಾವೇರಿ ಮಿಕಿ ಮಿಕಿ ತಂದೆಯನ್ನೇ ನೋಡಿದಳು.

ಬೆಳಿಗ್ಗೆ ಅವರು ಹಂಪನಕಟ್ಟೆ ನಿಲ್ದಾಣಕ್ಕೆ ಹೋದರು. ಮೋಟಾರು ನಿಲ್ಮನೆಯ ಸ್ವಲ್ಪ ಆಚೆ, ಒಂದು ಕೂಗಳತೆ ದೂರದಲ್ಲಿ ಆನಂದರಾಯನ ಆಸ್ಪತ್ರೆಯಿದೆಯೆಂದು ಕಾವೇರಿ ನೆನಸಿದಳು. ಇಷ್ಟು ದೂರ ಬಂದ ಬಳಿಕ ಒಮ್ಮೆಯೂ ಅವನನ್ನು ನೋಡಲಿಲ್ಲ. ಬಂದ ಹೆಂಡತಿಯನ್ನು ನೋಡಲು ಅವರಾದರೂ ಆಸ್ಪತ್ರೆಯಿಂದ ಇಳಿದು ಬರಲಿಲ್ಲ; ಮಾತನಾಡಿಸಲಿಲ್ಲ. ಅಬ್ಬ, ಪುರುಷ ಹೃದಯವೇ! ಲಾವಣ್ಯವತಿಯಾದ ತನ್ನ ತರುಣಿಯ ಸಾನ್ನಿಧ್ಯ ಒತ್ತಟ್ಟಿಗಿರಲಿ, ಅವಳ ಹೆಸರನ್ನು ಕೇಳಿದರೆ ಪುರುಷರ ಮನಸ್ಸು ಚಂಚಲ ವಾಗುತ್ತದೆ ಮತ್ತು ತವಕಗೊಳ್ಳುತ್ತದೆಯೆಂದು ಅವಳು ಓದಿದ್ದಳು. ಆದರೆ ಅದು ಸತ್ಯವೇ ಎಂದು ಅವಳು ಈಗ ವಿಚಾರ ಮಾಡುವಂತಾಗಿದೆ. ಅವಳ ಮೇಲೆ ಇಷ್ಟು ಅಪ್ರೀತಿ, ಅಸಂತೋಷ, ಅನಾದರ ಉಂಟಾಯಿತಲ್ಲ! ಮಾನವ ಸಹಜವಾದ ಈ ಹತಾಶೆ ಮತ್ತು ವ್ಯಸನದಿಂದ ಅವಳು ಮ್ಲಾನವ ದನಳಾದಳು. ಪರಿತ್ಯಜಿಸಲ್ಪಟ್ಟ ಶಕುಂತಲೆಯಂತೆ ದುಃಖಾವೇಶದಿಂದ ಪರಿತಪ್ತಳಾದಳು. ಮೋಟಾರಿನಲ್ಲಿ ಕುಳಿತ ಮೇಲೆ ಕೂಡ ಅವಳು ಕಣ್ಣೀರು ಸುರಿಸಿದಳು.

ಕಾವೇರಿಯ ಈ ಕಣ್ಣೀರು ಆನಂದರಾಯನಿಗೆ ತಟ್ಟಿದೆ. ಅವಳು ಮಂಗಳೂರಿಗೆ ಬಂದಂದಿನಿಂದ ಅವನ ಸ್ಥಿತಿಯನ್ನು ದೇವರೇ ಬಲ್ಲ. ವಾಸಂತಿ ಯೊಂದಿಗೆ ಜಗಳವಾಡಿ ಹಿಂತಿರುಗಿದವನು ಹೋಟೇಲಿನಲ್ಲಿ ಊಟ ಮಾಡಿದ. ಆಸ್ಪತ್ರೆಯಲ್ಲಿ ಮಲಗಿದ. ಒಂದೆರಡು ದಿನ ಅವನು ಮನೆಯ ಕಡೆ ಹಾಯ ಲಿಲ್ಲ. ಕಾವೇರಿಯ ಮೇಲೆ ಸಿಟ್ಟು. ವಾಸಂತಿಯೊಡನೆ ನಿಷ್ಠುರ ಮಾತು. ತಾನು ಲಗ್ನವಾದುದೇ ಆಗಲಿಲ್ಲ ಎಂದು ಒಮ್ಮೆ ಅವನು ಯೋಚಿಸು ತ್ತಾನೆ. ಆಗುತಿದ್ದರೂ ಬಡ ಹುಡುಗಿಯನ್ನು ಆಗಬೇಕಿತ್ತು. ಗಂಜಿಗೆ ಗತಿ

ಯಿಲ್ಲದವರು ಎಷ್ಟೋ ಇರುತಿದ್ದರು. ಅವರು ನಾನು ಹೇಳಿದಂತೆ ಕೇಳಿರುತಿದ್ದರು. ಹೀಗಾಗುತಿದ್ದಿಲ್ಲ. ಈ ಕಾವೇರಿಯ ಕೋಪ, ಬಿಂಕ ಇರುತಿದ್ದಿಲ್ಲ. ಇಷ್ಟೆಲ್ಲ ದುಃಖಗಳನ್ನು ಅನುಭವಿಸಬೇಕಾಗುತ್ತಿರಲಿಲ್ಲ. ಇದು, ದೋಣಿಗೆ ದುಡ್ಡು ಕೊಟ್ಟು ಹೊಳೆಯಲ್ಲಿ ಬೀಳುವಂತಾಯಿತು!

ಆದರೂ ವಾಸಂತಿಯ ಮನಸ್ಸನ್ನು ಅವನು ಬಲ್ಲ. ಅವಳ ಗುಣ ಸ್ವಭಾವ ಗೊತ್ತು. ಒಂದು ಕ್ಷಣ ಸಿಟ್ಟಿನಿಂದ ಗೊಣಗಿದರೆ ಇನ್ನೊಂದು ಕ್ಷಣ ಅಟ್ಟಹಾಸದಿಂದ ಗುಣುಗುಣು ಮಾತನಾಡಲೆಳಸುತ್ತಾಳೆ. ಆದುದರಿಂದ ಉರ್ವಕ್ಕೆ ಹೋಗಲು ಆತುರ ಪಟ್ಟ. ಕಾವೇರಿಯನ್ನು ಅಲ್ಲಿ ಬಿಟ್ಟು ಹೋಗಿರಲು ಸಾಕೆಂದು ಒಂದು ಸಂಶಯ. ಆದರೆ ಹಗಲಿಗೆ ಮೋರೆ ತೋರಿಸಲು ತುಸು ಲಜ್ಜೆ. ಹೀಗಾಗಿ ಕತ್ತಲೆ ಪಸರಿಸಿದ ಮೇಲೆ ಮನೆಯ ದಾರಿ ಹಿಡಿದ. ಮನೆಯಲ್ಲಿ ದೀಪದ ಬೆಳಕಿಲ್ಲ. ಎಲ್ಲ ನಿಶ್ಶಬ್ದ. ಅವನಿಗೇನೋ ಒಂದು ರೀತಿಯ ಕಳವಳವಾಯಿತು. ಬಾಗಿಲು ತಟ್ಟಿದ. ವಾಸಂತಿಯ ಉಸಿರಿಲ್ಲ. ಕಿಟಕಿಯ ಬಳಿ ಬಂದು ಕರೆದ. ಉತ್ತರವಿಲ್ಲ. ಆವನ ಎದೆ ತಲ್ಲಣಿಸಿತು. ಕೈ ಕಾಲುಗಳು ನಡುಗಿದುವು. ಏನೋ ಒಂದು ಭೀಕರ ದೃಶ್ಯ ಕಂಡವನಂತೆ ಭೀತನಾದ. ಕಿಸೆಯಲ್ಲಿದ್ದ ಬೆಂಕಿಪೆಟ್ಟಿಗೆ ತೆಗೆದು ಕೊರೆದು ನೋಡಿದ- ಬಾಗಿಲಿಗೆ ಬೀಗ ಹಾಕಿತ್ತು. ಅಯ್ಯಯ್ಯ! ಎಂದು ಬಲವಾದ ನಿಟ್ಟುಸಿರು ಬಿಟ್ಟ. ಮತ್ತು ಮುಖಮಂಟಪಕ್ಕೆ ಏರುವ ಮೆಟ್ಟಲುಗಳ ಮೇಲೆ ಕಾಲುಗಳನ್ನಿಟ್ಟು ಆ ಕತ್ತಲೆಯಲ್ಲೇ ಕುಳಿತುಕೊಂಡು "ಎಲ್ಲಿಗೆ ಹೋದಳು? ಪೇಟೆಗೆ ಹೋಗಿದ್ದರೆ ಇಷ್ಟರೊಳಗೆ ಬರಬೇಕಾಗಿತ್ತು" ಎಂದು ಯೋಚಿಸಿದ.

ಅದೇ ಕಂಪೌಂಡಿನ ಇನ್ನೊಂದು ಮೂಲೆಯಲ್ಲಿ ನೆರೆ ಮನೆಯದೆ. ಆನಂದರಾಯ ಬೆಂಕಿಕಡ್ಡಿ ಗೀರುತ್ತ ಅವರ ಮನೆಗೆ ತೆರಳಿದ. "ಯಾರು? ಯಾರು?" ಎಂದು ಒಳಗಿಂದ ಗಂಡಸರೂ ಹೆಂಗಸರೂ ಕೇಳುತ್ತ ಜಗಲಿಗೆ ಬಂದರು. "ನಾನು ಡಾಕ್ಟರ್! ನಮ್ಮ ಮನೆಯವರು ಸಿನಿಮಾ ಗಿನಿಮಾಕ್ಕೆ ತೆರಳಿದ್ದಾರೋ ಏನೋ! ಮನೆಗೆ ಬೀಗ ಹಾಕಿದೆ. ಬೀಗದ ಕೈ ನಿಮ್ಮಲ್ಲಿ ಕೊಟ್ಟಿದ್ದಾರೇ ಹೇಗೆ?" ಎಂದು ಪ್ರಶ್ನಿಸಿದ.

"ಹೌದು. ಬೀಗದ ಕೈ ಕೊಟ್ಟಿದ್ದಾರೆ. ಅವರು ಸಿನಿಮಾಕ್ಕೆ ಹೋಗಿಲ್ಲ. ಅವರ ತಾಯಿಗೆ ಪ್ರಾಣಾಂತಿಕ ಕಾಯಿಲೆಯಂತೆ! ನಿನ್ನೆ ಸಂಜೆ ಯಾರೋ

ಕರೆಯಲು ಬಂದಿದ್ದರು. ನಿನ್ನೆಯೇ ಅವರು ಹೋದರು” ಎಂದು ಉತ್ತರ ವಿತ್ತು ಬೇಗದ ಕೈ ಕೊಟ್ಟರು.

ಸಿಟ್ಟಾದ ವಾಸಂತಿ ಈ ನೆವ ಹೂಡಿ ಹೋದಳೇ? ಹಾಗಿದ್ದರೆ ಕರೆಯಲು ಬಂದವರು ಯಾರು? ನಾರಾಯಣನೋ ಏನೋ? ಎಂದು ಆನಂದರಾಯ ಯೋಚಿಸಿದ.

ಅವನ ಊಹೆಯಂತೆ ನಾರಾಯಣ ಕರೆದೊಯ್ದುದು ನಿಜ. ಆದರೆ ಅವನ ತಾಯಿಗೆ ಮುಂಡೆಮಾರಿ ರೋಗವೂ ಬಡಿದಿಲ್ಲ. ಅವನು ಆ ನೆವಹೇಳಿ ವಾಸಂತಿಯನ್ನು ನಂಬಿಸಿ, ಜೋರೇಗೌಡರ ಟ್ಯಾಕ್ಸಿಯಲ್ಲಿ ಮೂಡುಗೆರೆಗೆ ಹಾರಿಸಿದ.

## ೧೯ ನೇಯ ಅಧ್ಯಾಯ

ವಾಸಂತಿ ನಾರಾಯಣನ ಮಾತನ್ನು ನಂಬಿ ಮೋಟಾರಿನಲ್ಲಿ ಬಂದು ಕುಳಿತಳು. ಪ್ರಾಣ ಹೋಗುವ ಕಾಲಕ್ಕೆ ತಾಯಿಯನ್ನು ಕಾಣಲು ಇಷ್ಟಪಡದವರು ಯಾರು? ಎಷ್ಟೇ ಕಷ್ಟವಿರಲಿ, ಜಗಳವಿರಲಿ, ಕೊನೆಗಾಲದಲ್ಲಿ ಅದನ್ನು ಯೋಚಿಸುವವರು ವಿರಳ. ಒಮ್ಮೆ ಮೋರೆ ನೋಡಲು ಹವಣಿಸುತ್ತಾರೆ. “ನನ್ನ ಹಣೆಯಲ್ಲಿ ಆ ಭಾಗ್ಯವಿದೆಯೋ ಇಲ್ಲವೋ'' ಎಂದು ವಾಸಂತಿ ಚಿಂತಿಸುತ್ತಲೇ ಇದ್ದಳು. ಟ್ಯಾಕ್ಸಿ ಯಾವ ದಾರಿ ಹಿಡಿದಿದೆಯೆಂದು ಅವಳು ನೋಡಲಿಲ್ಲ. ನೋಡುತ್ತಿದ್ದರೆ ಗೊತ್ತಾಗುತ್ತಿದ್ದುದೂ ಕಷ್ಟ. ರಸ್ತೆಯ ಪರಿಜ್ಞಾನ ಅವಳಿಗಿಲ್ಲ. ಎಲ್ಲೋ ಒಂದೆರಡು ಸಲ ಮಾತ್ರ ತೆರಳಿದ್ದಳು. ಅಲ್ಲದೆ ಈಗ ಕತ್ತಲೆಯೂ ಆಗಿದೆ. ಮೋಟಾರ್ ವೇಗವಾಗಿ ಓಡುತ್ತಿರುವದರಿಂದ ಯಾವುದರ ಸ್ಪಷ್ಟ ಚಿತ್ರವೂ ಕಣ್ಣಿಗೆ ಬೀಳುವದಿಲ್ಲ. ಗಾಳಿ ರುಮುರುಮು ಒಳಗೆ ಬೀಸುತ್ತಿದ್ದುದರಿಂದ ಟ್ಯಾಕ್ಸಿಯ ಬಾಗಿಲೆಡೆಯಿದ್ದ ಕನ್ನಡಿ ಪರದೆಯನ್ನು ಏರಿಸಿರುವರು. ಹಿಂದಿನ ಸೀಟಿನಲ್ಲಿ ಅವಳೊಬ್ಬಳೇ ಮೈಮುದುಡಿ ಕುಳಿತಿರುವಳು. ಇದಿರಿನಲ್ಲಿ ಡ್ರಾಯವರನೊತ್ತಿಗೆ ನಾರಾಯಣ ಗುಮ್ಮನಂತೆ ಕುಳಿತಿದ್ದಾನೆ.

ಆದರೆ ಚಾರ್ಮಾಡಿ ಗಟ್ಟವನ್ನೇರಿದಾಗ ವಾಸಂತಿಗೆ ಸ್ವಲ್ಪ ಸಂದೇಹ

ವಾಯಿತು. "ಇಷ್ಟರೊಳಗೆ ಊರಿಗೆ ಮುಟ್ಟಬೇಕಾಗಿತ್ತು. ಪ್ರಯಾಣ ಇನ್ನೂ ಮುಗಿದ ಹಾಗೆ ತೋರುವದಿಲ್ಲ. ಉಡುಪಿಯ ದಾರಿಯಲ್ಲಿ ಈ ಗಟ್ಟ ಇಲ್ಲವಲ್ಲ'' ಎಂದು ಅವಳು ಫಕ್ಕನೇ ಕಂಡುಕೊಂಡಳು. ಗಟ್ಟದ ಮಧ್ಯೆ ಡ್ರೈವರ್ ಟ್ಯಾಕ್ಸಿ ನಿಲ್ಲಿಸಿ, ರಸ್ತೆಯ ಅಂಚಿನಲ್ಲಿ ಹರಿಯುತ್ತಿದ್ದ ತೊರೆ ನೀರನ್ನು ಸಣ್ಣ ಟಿನ್‌ನಲ್ಲಿ ತಂದು ಸುರಿಯತೊಡಗಿದ. ಆಗ ವಾಸಂತಿ "ನಾರಾಯಣ" ಎಂದು ಕರೆದಳು. ಅವನು ಇಳಿದು ಹೊರಗೆ ಬಂದು ಹಣಕಿ "ಏನು ?'' ಎಂದ.

"ಉಡುಪಿಗೆ ಇನ್ನೆಷ್ಟು ದೂರ ?''

"ಉಡುಪಿ !'' ಎಂದಂದು ಅವನು ನಕ್ಕು ಹೇಳಿದ : "ಉಡುಪಿಗೆ ಇಲ್ಲಿಂದ, ಇಲ್ಲಿಂ....ದ, ಇದೆ ಅರುವತ್ತರ ಮೇಲೆ !"

ವಾಸಂತಿ ತಳಮಳಿಸಿ "ಇದು ಯಾವ ಊರು ?'' ಎಂದು ಕೇಳಿದಳು.

"ಇದೋ ? ಇದು ನನಗೂ ಗೊತ್ತಿಲ್ಲ''

"ನೀನು ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತಿದ್ದೀ ?"

"ನನ್ನ ಮನೆಗೆ'' ಎಂದವನು ಉತ್ತರವಿತ್ತ ಹೊರತು ಊರಿನ ಹೆಸರನ್ನು ಹೇಳಲಿಲ್ಲ.

"ನೀನು ನನಗೆ ಮೊದಲೇ ಯಾಕೆ ಹೇಳಲಿಲ್ಲ ?"

"ಹೇಳಿದರೆ ನೀನು ಬರುತ್ತಿದ್ದಿಯೇನು ? ಸಾಮ ದಾನ ಭೇದ ಕೊನೆಗೆ ದಂಡ ! ನಯದಿಂದ ನುಡಿದೆ; ಪ್ರೀತಿಯಿಂದ ಕರೆದೆ; ಒಂದಲ್ಲ ಎರಡಲ್ಲ ಅನೇಕ ಸಲ. ನೀನು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ಆ ನಾಯಿ ನಸೆ ಹಚ್ಚಿದೆ; ನೆಕ್ಕಿಕೊಂಡು ಬಿದ್ದಿರುತ್ತೀ. ನನ್ನ ಮಾತಿನ ಮೇಲೆ ನಿನಗೇನು ಲಕ್ಷ? ಅದಕ್ಕೆ ಈ ಸಲ ಹೀಗೆ ಮಾಡಬೇಕಾಯ್ತು".

"ಈ ಸುಳ್ಳು, ಮೋಸ ಯಾಕೆ ?''

"ಸುಳ್ಳು ! ಮೋಸ !'' ಎಂದು ಅವನು ವ್ಯಂಗ್ಯವಾಗಿ, ನಾಲಿಗೆ ತಿರುಗಿಸಿ, "ನೀನು ಸಾಕ್ಷಾತ್ ಸಾಧ್ವೀಶಿರೋಮಣಿ! ಪ್ಪು!'' ಎಂದು ಹಂಗಿಸಿ, "ಇನ್ನಾದರೂ ನಾನು ಹೇಳಿದ ಹಾಗೆ ಕೇಳು. ನಿನ್ನ ಉದ್ಧಾರವಾಗುತ್ತದೆ. ಸುಮ್ಮನೆ ಅವನ ಬೆನ್ನಹಿಂದೆ ಹುಚ್ಚುಕಟ್ಟಿ ಹಾಳಾದೆ'' ಎಂದು ನುಡಿದು ತನ್ನ ಸೀಟಿಗೆ ತೆರಳಿ ಕುಳಿತುಕೊಂಡ.

ವಾಸಂತಿ ಹಣೆಗೆ ಕೈಯಿಟ್ಟುಕೊಂಡಳು. ಅವಳ ಮನಸ್ಸಿನಲ್ಲಾದ ಹೊಯ್ದಾಟ ಅಷ್ಟಿಷ್ಟಲ್ಲ. ಆನಂದರಾಯ ಆ ದಿನ ಮನೆ ತ್ಯಜಿಸಿ ಹೋದವನು ಒಂದೆರಡು ದಿನ ಹಿಂತಿರುಗಲಿಲ್ಲ. ಆಗ ಈ ಮನೆಯಲ್ಲಿ ನಾನು ಯಾಕೆ ಇರ ಬೇಕು ಎಂದು ಅವಳು ಬೇಸರಪಟ್ಟುದುದೂ ಉಂಟು. ಒಂದು ದಿನ ಅವಳು ಊಟವನ್ನು ಮಾಡಲಿಲ್ಲ. ತನ್ನ ವಿಧಿಯನ್ನು ನೆನಸಿಕೊಂಡು ಅತ್ತಳು. ಎಲ್ಲಾದರೂ ಓಡಿಹೋಗಿ ಬಿಡೋಣ ಎಂದನಿಸಿತ್ತು ಅವಳಿಗೆ. ಆದರೆ " ಎಲ್ಲಿಗೆ ?'' ಎಂದು ಪುನಃ ಅವಳು ಯೋಚಿಸಿದ್ದಳು. ತಾಯಿಗೂ ತನ್ನ ಮೇಲೆ ಸಿಟ್ಟು. ಅಲ್ಲಿಗೆ ಹೋದರೆ ಮತ್ತೆ ವೇಶ್ಯಾಜೀವನವನ್ನೇ ಆರಂಭಿಸ ಬೇಕು ! ಬೊಂಬಾಯಿಯ ಅಕ್ಕನ ಮನೆಗೆ ತೆರಳೋಣವೇ ? ಅವರಿಗೆ ನನ್ನಿಂದ ಕಷ್ಟ ! ನಾರಾಯಣ ಬರಲಿಲ್ಲ; ಈ ಸಲ ಹೊರಟು ಬಿಡುತ್ತೇನೆ ಎಂದು ನಿಶ್ಚಯಿಸಿದ್ದುದೂ ಉಂಟು. ಆದರೆ ಅದೇ ನಾರಾಯಣ ಈಗ ತನ್ನ ಊರಿಗೆ ಕರೆದುಕೊಂಡು ಹೊರಟಿರುವನೆಂದು ಕೇಳಿ ಅವಳಿಗೆ ಸಂತೋಷ ವಾಗಲಿಲ್ಲ. ಊರಿಂದ ಪರವೂರಿಗೆ ಹೋಗಬೇಕಲ್ಲ ಎಂಬ ದುಃಖವಲ್ಲ; ಆನಂದರಾಯನಿಂದ ತನ್ನನ್ನು ಬಿಡಿಸಿದನಲ್ಲ ಎಂಬ ವ್ಯಾಮೋಹವಲ್ಲ; ಅವನ ಸುಳ್ಳು, ಮೋಸ, ತಾತ್ಸಾರ ಬುದ್ಧಿ ಕಂಡು ಅವಳಿಗೆ ವ್ಯಸನವಾಗಿದೆ. ಅವನ ಮೇಲಿದ್ದ ಅಲ್ಪಸ್ವಲ್ಪ ವಿಶ್ವಾಸವೂ ಹಾರಿಹೋಗಿದೆ. ಅವನು ಏನು ಮಾಡಲೂ ಈಗ ಹೇಸುವವನಲ್ಲ ಎಂಬ ಭೀತಿ ಕರುಳೊಳಗೆ ಹೊಕ್ಕಿದೆ. ಇಂಥ ಮನುಷ್ಯನೊಡನೆ ಹೇಗಿರಲಿ ಎಂಬ ಚಿಂತೆ ಮನವನ್ನಾವರಿಸಿದೆ. ವಾಸಂತಿ ಅಳತೊಡಗಿದಳು.

ಮಧ್ಯರಾತ್ರಿ. ಒರಗಿ ತೂಕಡಿಸುತ್ತಿದ್ದ ವಾಸಂತಿಯನ್ನು ನಾರಾಯಣ ಕರೆದೆಬ್ಬಿಸಿದ. "ಇಳಿ, ಇಳಿ, ಊರು ಬಂತು" ಎಂದ. ಅವಳು ಇಳಿದಳು. ಸಹಿಸಲಾರದ ಚಳಿ. ಜಿಟ್ಟೆ ಹುಳಗಳು ಸುತ್ತುಮುತ್ತಲಿನಿಂದ ಕೂಗುತ್ತಿವೆ. ಗಾಳಿಯಲ್ಲಿ ಏನೋ ಒಂದು ಹೂವಿನ ವಾಸನೆ. ನಾರಾಯಣ ಬೇಗನೇ ತೆರಳಿ ಮನೆಯ ಬೀಗವನ್ನು ತೆಗೆದು ದೀಪ ಹಚ್ಚಿದ. ಪುನಃ ಟ್ಯಾಕ್ಸಿ ಇದ್ದಲ್ಲಿ ಬಂದು ಹಾಸಿಗೆಯನ್ನು ತಂದ. ಡ್ರೈವರ್ ಟ್ರಂಕನ್ನು ಹೊತ್ತು ತಂದು "ನಾನು ಹೋಗುತ್ತೇನೆ" ಎಂದ. "ಹೋಗು. ಹೋದ ಕೆಲಸ ಆಯಿತು ಎಂದು ಸಾವುಕಾರರಿಗೆ ಹೇಳು" ಎಂದು ತಿಳಿಸಿ ಕಳಿಸಿದ. ವಾಸಂ

ತಿಯ ಹಾಸಿಗೆಯನ್ನು ಒಳಕೋಣೆಗೆ ಎತ್ತಿ ಎಸೆದು ತಾನು ಮತ್ತೊಂದರಲ್ಲಿ ಮಲಗಿಕೊಂಡ. ದೇಹಾಯಾಸದಿಂದ ವಾಸಂತಿ ತನ್ನ ಹಾಸಿಗೆ ಬಿಡಿಸಿ ಬಿದ್ದುಕೊಂಡಳು.

ಬೆಳಿಗ್ಗೆ ಅವಳಿಗೆ ಎಚ್ಚರವಾದಾಗ ಹೊತ್ತಾಗಿತ್ತು. ಮನೆಯಲ್ಲಿ ನಾರಾಯಣ ಇರಲಿಲ್ಲ. ಮನೆಯೆಲ್ಲವನ್ನೊಮ್ಮೆ ನೋಡಿದಳು. ಇರುವುದು ಮೂರು ಕೋಣೆ. ನೆಲಕ್ಕೆ ಸಿಮೆಂಟಿನ ನೆಲ. ಮೇಲೆ ಬಿದಿರು ಹಾಕಿ ಹಂಚು ಹೊದೆಸಿರುವರು. ಸ್ನಾನಕ್ಕೆ ಮನೆಯ ಹಿಂದೆ ಒಲೆ ಹೂಡಿ ಮೇಲೆ ತಗಡು ಇಳಿಸಿರುವರು. ಬದಿಗೆ ಮರಗಳ ರೆಂಬೆಗಳನ್ನು ಅಡ್ಡ ಕಟ್ಟಲಾಗಿದೆ. ಹಿಂಬದಿ ಒಂದು ಗೋಣಿಯನ್ನು ತೂಗಹಾಕಲಾಗಿದೆ. ಬಾಗಿಲಿಲ್ಲ. ಒಲೆಯ ಮೇಲೊಂದು ಮಣ್ಣಿನ ಹಂಡೆಯಿದೆ. ಹತ್ತಿರ ಬಾವಿ ಇರಲಿಲ್ಲ. ಆದರೆ ಹಂಡೆಯಲ್ಲಿ ನೀರಿದ್ದುದರಿಂದ ವಾಸಂತಿ ಮುಸಿ ತುಂಡಿನಿಂದ ಹಲ್ಲು ತಿಕ್ಕಿಕೊಂಡಳು. ಈಗ ಅವಳಿಗೆ ಹಸಿವೆಯಾಗಿದೆ. ರಾತ್ರಿಯೂ ಅವಳು ಊಟ ಮಾಡಿರಲಿಲ್ಲ. ದಾರಿಮಧ್ಯೆ ನಾರಾಯಣ ಎರಡು ಮೂರು ಬಾಳೆಹಣ್ಣುಗಳನ್ನು ಕೊಟ್ಟಿದ್ದ. ಅದು ಹಸಿವೆಯ ಒಂದು ಹಲ್ಲಿಗೂ ಸಾಲಲಿಲ್ಲ. ಈಗ ಅದರ ಬಾಧೆ ಜಾಸ್ತಿಯಾಗಿದೆ. ಮನೆಯಲ್ಲಿ ಏನಿದೆ, ಏನಿಲ್ಲವೆಂದು ಅವಳಿಗೆ ಗೊತ್ತಿಲ್ಲ. ಹುಡುಕಿ, ತಯಾರಿಸಿಕೊಳ್ಳಲು ಅವಳಿಗೆ ಬೇಸರವೂ ಆಗಿದೆ. ಆದುದರಿಂದ ಅವಳು ಸುಮ್ಮನೆ ಅತ್ತಿತ್ತ ಓಡಾಡಿದಳು. ಕಿಟಕಿಗಳೆಡೆಯಿಂದ ಮನೆಯ ಆಚೆ ಹಣಿಕಿ ನೋಡಲಾರಂಭಿಸಿದಳು.

ಜಗಲಿಯಲ್ಲಿ ಕಾಲಸಪ್ಪಳ! ಅವಳು ಬಂದು ಬಾಗಿಲು ಓರೆ ಮಾಡಿದಳು. ಹೋಟೇಲಿನ ಹುಡುಗ. ಕೈಯಲ್ಲಿ ಕಪ್ ಬಸಿ, ಅವಲಕ್ಕಿ ತಟ್ಟೆ. "ವೈದ್ಯರು ಕಳಿಸಿದ್ದಾರೆ'' ಎಂದು ಅವನು ಅವಳಿಗೆ ಕೊಡಲು ಬಂದ.

"ಯಾವ ವೈದ್ಯರು?''

"ನಾರಾಯಣ ವೈದ್ಯರು! ಯಾಕ್ರೀ ಅವರ ಹೆಂಡತಿಯಾಗಿ ನಿಮಗೆ ಗೊತ್ತಿಲ್ವಾ?" ಎಂದವ ಕೇಳಿದ.

ವಾಸಂತಿಗೆ ಸಿಟ್ಟುಬಂತು. ಆ ಹುಡುಗನ ಕೆನ್ನೆಗೊಂದು ಏಟು ಕೊಡಬೇಕೆಂದನಿಸಿತು. ಮತ್ತೆ ಅವನಿಗೆ ಗೊತ್ತಿರಲಿಕ್ಕಿಲ್ಲವೆಂದು ಸಿಟ್ಟನ್ನು ನುಂಗಿಕೊಂಡಳು. ಅದನ್ನು ತೆಗೆದುಕೊಂಡ ಕೂಡಲೇ ಅವನು ಹೊರಟು

ಹೋಗಲು ಹೊರಳಿದ. "ನಿಲ್ಲು, ನಿಲ್ಲು. ಈಗ ಇದನ್ನು ಕೊಟ್ಟುಬಿಡು ತ್ತೇನೆ" ಎಂದವಳು ಹೇಳಿ ಒಳಗೆ ಬಂದು ಅದನ್ನು ಬೇರೆ ತಟ್ಟೆ, ಲೋಟ ಗಳಿಗೆ ಸುರಿದಳು. ಪುನಃ ಅವನಿದ್ದೆಡೆಗೆ ಬಂದಾಗ "ಇದು ಯಾವ ಊರು?" ಎಂದು ಕೇಳಿದಳು. "ಇದು ಮೂಡುಗೆರೆ'' ಎಂದವನು ಹೇಳಿ ಅಲ್ಲಿಂದ ಒಂದೇ ಉಸಿರಿಗೆ ಓಡಿಹೋದ. ಇವಳು ವೈದ್ಯರ ಹೆಂಡತಿಯಲ್ಲವೆಂದು ಆ ಹುಡುಗನಿಗೆ ಹೇಗೆ ಗೊತ್ತಾಯಿತೋ! ವೈದ್ಯರು ಯಾವಾಕೆಯನ್ನೋ, ಎಲ್ಲಿಂದಲೋ ಹೊಡೆದುಕೊಂಡು ಬಂದಿದ್ದಾರೆಂದು ಹೋಟೇಲಿನಲ್ಲಿ ಹುಡು ಗರು ಗುಜುಗುಜು ಮಾತನಾಡಿಕೊಳ್ಳಲಾರಂಭಿಸಿದರು.

ಸಾಧಾರಣ ಹತ್ತು ಗಂಟೆಗೆ ನಾರಾಯಣ ತರಕಾರಿ ತೆಗೆದುಕೊಂಡು ಬಂದ. ವಾಸಂತಿಯನ್ನು ಕಂಡು "ಚಹಾ ಕಳಿಸಿದ್ದೆ; ಬಂತೇನು?" ಎಂದು ಕೇಳುತ್ತ ಪ್ರವೇಶಿಸಿದ. ಅವಳು ಉತ್ತರವನ್ನೀಯದೆ ಒಳಕೋಣೆಗೆ ಹೋದಳು. ಅವನು ಕೋಟು, ಅಂಗಿ ತೆಗೆದು ಸಣ್ಣ ಪಂಚೆ ಉಟ್ಟುಕೊಂಡು ಹೊರಗಿನ ಬಾವಿಯಿಂದ ನೀರನ್ನು ಹೊತ್ತುತಂದು ಬಿಸಿನೀರಿನ ಹಂಡೆ ತುಂಬಿ ಸಿದ. ಆ ಮೇಲೆ ಒಳಗೆ ಬಂದು ಕೊಡ ನೀರು ಸುರಿದು, ಮತ್ತೊಂದು ತುಂಬಿದ ಕೊಡವನ್ನು ಅಡಿಗೆ ಮನೆಯಲ್ಲಿಟ್ಟ. ಸುಮ್ಮನೆ ಕುಳಿತಿದ್ದ ವಾಸಂತಿಯನ್ನು ಕಂಡು "ಮೈಮೇಲೆ ದೆವ್ವ ಬಂದಂತೆ ತೋರುತ್ತದಲ್ಲ'' ಎಂದು ಗೊಣಗಿದ.

"ದೆವ್ವ ಬಂದದ್ದು ನಿನಗೆ. ಕಾಂತಾವರ ಪಂಜುರ್ಲಿ'' ಎಂದವಳು ಪ್ರತಿನುಡಿದಳು.

"ಓಹೋ, ನುಡಿಕಟ್ಟು ಆಯಿತು ಹಾಗಾದರೆ! ಹಂಡೆಗೆ ಉರಿಹಾಕಿ ಅಡಿಗೆಗಿಡಿಗೆ ಮಾಡುವದನ್ನು ಬಿಟ್ಟು ಕೈಕಟ್ಟಿ ಕುಳಿತಿದ್ದಾಳೆ! ಮಧ್ಯಾಹ್ನ ತಿನ್ನಲು ಏನಾದರೂ ಬೇಕಲ್ಲ''

"ಬೇಡ ನನಗೆ. ನಿನ್ನೆ ಸಾಯಂಕಾಲ ಊಟ ಮಾಡಿದ್ದೇನೇನು?"

"ಒಪ್ಪತ್ತು ಊಟ ಬಿಟ್ಟರೆ ಮನುಷ್ಯ ಸಾಯುವದಿಲ್ಲ".

"ಒಪ್ಪತ್ತು ಯಾಕೆ, ಎರಡು ಹೊತ್ತು ಉಪವಾಸ ಮಾಡಿದರೂ ಸಾಯುವದಿಲ್ಲ".

"ನೀನು ಸಾಯಲಿಕ್ಕಿಲ್ಲ. ಆದರೆ ನನಗೆ ಬೇಕಲ್ಲ!''

"ನಿನಗೆ ಮಾಡಿಹಾಕಲು ನಾನು ನಿನ್ನ ಆಳೇನು?"

"ಆಳಲ್ಲ. ಆಳಾಗಿರುತ್ತಿದ್ದರೆ ಹೀಗೆ ಹೇಳುತ್ತಿದ್ದಿಲ್ಲ. ಹೇಳಿದರೆ ಬಾಯಿ ಗುದ್ದಿಬಿಡುತ್ತಿದ್ದೆ. ಬಾಯಿಯಲ್ಲಿ ಒಂದೇ ಒಂದು ಹಲ್ಲು ಉಳಿಸುತ್ತಿದ್ದಿಲ್ಲ. ಆಳಲ್ಲವೆಂದೇ ಇಷ್ಟು ಧೈರ್ಯದಿಂದ ಮಾತನಾಡುತ್ತಿದ್ದೀ. ಅಡಿಗೆ ಮಾಡುವವರೆಲ್ಲ ಆಳುಗಳೇನು ? ಆಳೆಂದು ನಿನ್ನನ್ನು ಕರೆದುಕೊಂಡು ಬಂದಿಲ್ಲ ನಾನು. ಆ ಪರಮ ನೀಚನ ಕೈಗೆ ಸಿಕ್ಕಿ ಹಾಳಾಗಿ ಹೋಗುತ್ತಾಳಲ್ಲ, ಜನ್ಮ ವ್ಯರ್ಥವಾಗುವದಲ್ಲ, ಇಷ್ಟು ವರುಷಗಳಾದರೂ ಬುದ್ಧಿ ಇಲ್ಲಲ್ಲ ಎಂದು ಮನಕರಗಿ, ಪಾಪ ಪುಣ್ಯ ನೋಡಿ ಕರೆದು ತಂದಿರುತ್ತೇನೆ. ಅದಕ್ಕೆ ನಿನ್ನ ಪ್ರತ್ಯುಪಕಾರ ಇದು! ನೀನು ಆಡುವ ಮಾತು ಇದು. ಆಗಲಿ, ಆಗಲಿ. ಅನ್ನ. ಬೈ. ಅನ್ನ ಮಾಡಬೇಡ. ಬೇಕಾದರೆ ಚಾಪೆ ಬಿಡಿಸಿ ಮಲಗಿಕೋ. ನನಗೇನೂ ಆಗುವದಿಲ್ಲ. ನನಗೇನೂ ಬೇಸರವಿಲ್ಲ. ನನ್ನ ಪಾಡು ನಾನು ನೋಡಿಕೊಳ್ಳುತ್ತೇನೆ. ಇಷ್ಟು ಕಾಲ ನೀನಿಲ್ಲದೆ ನಾನು ಬದುಕಿಲ್ಲವೇನು? ನಾನು ಒಂದು ಗಂಜಿ ಬೇಯಿಸಿಕೊಳ್ಳುತ್ತೇನೆ. ಆಗದಿದ್ದರೆ ಅದೂ ನನಗೆ ಬೇಕಾಗುವದಿಲ್ಲ. ನನಗಾಗಿ ನೀನು ಕಷ್ಟಪಡುವುದೂ ಬೇಡ. ನಿನ್ನ ಆಳೇನೆಂದು ಹಂಗಿಸುವದೂ ಬೇಡ. ನಿನ್ನ ಇಷ್ಟವಿದ್ದಂತೆ ಇರು'' ಎಂದು ಹೇಳಿ ನಾರಾಯಣ ವೈದ್ಯಶಾಲೆಗೆ ಹೊರಟು ಹೋದ.

ವಾಸಂತಿಗೆ ತನ್ನ ಬಾಳನ್ನು ನೆನಸಿ ಅಳು ಬಂದಿತು. ಆದರೆ ಮನುಷ್ಯ ಎಷ್ಟು ಹೊತ್ತು ಅಳಬಲ್ಲ? ಎಷ್ಟು ಹೊತ್ತು ಅನ್ನ ಆಹಾರವಿಲ್ಲದೆ ಇರಬಲ್ಲ? ಆದುದರಿಂದ ಅವಳು ಎದ್ದು ಹಂಡೆಗೆ ಬೆಂಕಿ ಹಾಕಿದಳು. ಸ್ನಾನಮಾಡಿ ಅನ್ನ, ಗೊಜ್ಜು ಮಾಡಿದಳು. ನಾರಾಯಣ ಈಗ ಬರುತ್ತಾನೆ, ಮತ್ತೆ ಬರುತ್ತಾನೆ ಎಂದು ಕಾದಳು. ಅವನು ಬರಲಿಲ್ಲ. ಆದುದರಿಂದ ಅವಳೂ ಊಟ ಮಾಡಲಿಲ್ಲ. ಚಾಪೆ ಬಿಡಿಸಿ ಮಲಗಿಕೊಂಡಳು. ಎಚ್ಚರವಾದಾಗ ಮುಸ್ಸಂಜೆಯಾಗಿತ್ತು. ರಾತ್ರಿ ನಾರಾಯಣನೂ ಬಂದ. ಇಬ್ಬರ ಸಿಟ್ಟೂ ಸ್ವಲ್ಪ ಇಳಿದಿತ್ತು. ಮೊದಲು ಮಾಡಿದುದನ್ನೇ ಅವನಿಗೆ ಬಡಿಸಿದಳು. "ಇದು ತಂಪು ರಾಜ್ಯ. ಮಧ್ಯಾಹ್ನದ್ದು ಸಂಜೆ ತಿನ್ನಬಾರದು. ಬಿಸಿಬಿಸಿ ಇರಬೇಕು'' ಎಂದು ಅವನು ಹೇಳಿ "ಮನೆಯಲ್ಲಿ ಅಕ್ಕಿ, ಸಕ್ಕರೆ, ಎಣ್ಣೆ, ಬೆಣ್ಣೆ ಎಲ್ಲ ಎಷ್ಟು ಎಷ್ಟು ಬೇಕು! ಒಂದು ಪಟ್ಟಿ ಮಾಡಿಕೊಡು" ಎಂದು

ಹೇಳಿದ. ಊಟವಾದ ಮೇಲೆ ಮತ್ತೆ ತಾನೇ ಅವಳನ್ನು ಕೇಳಿ ಬರೆದು ಕೊಂಡು "ಈಗ ಬರುತ್ತೇನೆ" ಎಂದು ಹೇಳಿ ಹೊರಟ. ಅದೇ ದಿನ ರಾತ್ರಿ ಇಬ್ಬರು ಆಳುಗಳು ಅರ್ಧಚೀಲ ಅಕ್ಕಿ, ಒಂದು ಚಿಮುಣಿಎಣ್ಣೆ ಡಬ್ಬಿ ತಂದರು. ಇನ್ನೊಂದು ರಾತ್ರಿ ಮನೆಗೆ ಕಾಫಿ ಬೀಜ ಬಂತು. ಹೂ ಹಣ್ಣು ಹಸುರುವಾಣಿ ಕೂಡ ಆಗಾಗ ಕೆಲವರು ಕೊಟ್ಟು ಹೋದರು. ಒಂದು ದಿನ ನಾರಾಯಣನಿದ್ದಾಗಲೆ ಒಬ್ಬನು ದೊಡ್ಡ ರಸಬಾಳೆ ಗೊನೆ ಹೊತ್ತು ತಂದು "ಧನಿಯರು ಕಳಿಸಿದ್ದಾರೆ" ಎಂದು ಹೇಳಿದ. ಅದನ್ನು ಕೇಳಿ ವಾಸಂತಿ ಯೋಚನಾಪರಳಾದಳು. ನಾರಾಯಣನೇ ಪೇಟೆಯಿಂದ ಹೊರೆಗಳನ್ನೆಲ್ಲ ಕಳಿಸುತ್ತಿದ್ದಾನೆಂದು ಅವಳು ಇಷ್ಟರವರೆಗೆ ನಂಬಿದ್ದಳು. ಆದರೆ ಅವನಲ್ಲವೆಂದು ಅವಳು ಈಗ ಅರಿತುಕೊಂಡಳು ಮತ್ತು "ಯಾರು ಧನಿಯರು ನಾರಾಯಣ?" ಎಂದು ಕುತೂಹಲಭರಿತಳಾಗಿ ಕೇಳಿದಳು.

"ನಮ್ಮ ಧನಿ ಬೋರೇಗೌಡರು! ಒಂದು ಸಲ ಮಂಗಳೂರಿಗೆ ಬಂದಾಗ ನಾನು ಚಹಾಕ್ಕೆ ಕರೆದುಕೊಂಡು ಬಂದಿದ್ದೆನಲ್ಲ; ಅವರು. ಈ ಊರಿನ ಕುಬೇರರು. ಭಾರೀ ಒಳ್ಳೆ ಜನ.''

"ಎಲ್ಲರೂ ಒಳ್ಳೇ ಜನ!" ಎಂದು ಅವಳು ವಟಗುಟ್ಟಿದಳು.

ಅವಳ ಮಾತುಗಳಲ್ಲಡಗಿದ ವ್ಯಂಗ್ಯ ರಾಗ ನಾರಾಯಣನಿಗೆ ಸರಿದೋರಲಿಲ್ಲ. ಆದರೆ ಮಾತಿಗೆ ಮಾತು ಆಡಿ ಕೆಡಿಸಿಕೊಳ್ಳುವುದು ಬೇಡವೆಂದು ಅವನು ಯೋಚಿಸಿದ. "ಇವಳಿಗೇನು ಗೊತ್ತಿದೆ ಧನಿಯ ವಿಚಾರ?" ಎಂದಂದುಕೊಂಡ. ಅವರ ಸಿರಿಸಂಪತ್ತು, ಆಳುಕಾಳು, ರಾಜದರ್ಬಾರ್, ದಾನಧರ್ಮಗಳೆಲ್ಲವನ್ನು ಅವನು ನೆನಸಿಕೊಂಡು "ಅವರು ಕೈಕೊಟ್ಟುದುದರಿಂದಲೇ ನಾನು ಮೇಲಕ್ಕೆ ಬಂದೆ. ಮುಂದೆ ಅವಳಿಗೆ ತಿಳಿದೀತು" ಎಂದು ಭಾವಿಸಿದ.

ಮುಂದೆ ಒಂದೆರಡು ದಿನಗಳ ಮೇಲೆ ಬೋರೇ ಗೌಡರು ಧನ್ವಂತರಿ ವೈದ್ಯಶಾಲೆಗೆ ಬಂದರು. "ನಿಮ್ಮ ಬಳಗದವರನ್ನು ಕರೆದುಕೊಂಡು ಬಂದಿರಂತೆ!" ಎಂದು ಅವರು ಮಾತನಾಡಿಸಿದರು. ನಾರಾಯಣ ಎದ್ದು "ಎಲ್ಲ ತಮ್ಮ ಉಪಕಾರ ಸ್ವಾಮಿ" ಎಂದು ಕರಜೋಡಿಸಿದ.

"ಎಲ್ಲ ಈಗ ಸರಿಯಾಗಿ ನಡೆದಿದೆಯಲ್ಲ!" ಎಂದವರು ನಕ್ಕರು. ಆ ನಗುವಿನ ರಹಸ್ಯ ನಾರಾಯಣನಿಗೆ ತಿಳಿಯಲಿಲ್ಲ. ಅದು ಬೋರೇಗೌಡರ

ಮನಸಿನೊಳಗಿನ ವಿಚಾರದ ಪ್ರತಿಬಿಂಬ. ವಾಸಂತಿ ತನ್ನ ಅಕ್ಕ ಎಂದು ಮೊದಲೇ ಅವನು ತಿಳಿಸುತಿದ್ದರೆ ಅದು ಗೌಡರ ಮನಸ್ಸಿನೊಳಗೆ ಹೊಕ್ಕು ತಿದ್ದಿಲ್ಲ. ಈಗ ಅವನು ಹೇಳುವಂತೆಯೂ ಇಲ್ಲ. ಆದುದರಿಂದ ಸೌಂದರ್ಯವತಿ ಯಾದ ವಾಸಂತಿಯ ಮೇಲಿನ ಮೋಹದಿಂದಲೇ ನಾರಾಯಣ ಇಲ್ಲಿಗೆ ಅವಳನ್ನು ಎಬ್ಬಿಸಿಕೊಂಡು ಬಂದಿರುವನೆಂದು ಅವರ ತಿಳುವಳಿಕೆ. ಅವಳು ಅವನಿಗಿಂತ ಸ್ವಲ್ಪ ವಯಸ್ಸಾದವಳು ನಿಜ. ಆದರೆ ಸುಂದರಿಯಾದ ಹೆಣ್ಣು ಸಣ್ಣವಳಾದರೇನು, ದೊಡ್ಡವಳಾದರೇನು? ಏನೋ ಅವರೊಳಗೆ ಸಂಬಂಧ ಕೂಡಿದೆ ಎಂದವರ ಗ್ರಹಿಕೆ. ಆದರೆ ಅವನು ಅಲ್ಪೇಶಿ, ಪಿಸನಾಶಿ, ಭಿಕ ನಾಶಿ! ಮಂಗನ ಕೈಯಲ್ಲಿ ಮಾಣಿಕ್ಯವಿದ್ದ ಹಾಗೆ! ಅದು ಎಲ್ಲಿರಬೇಕೋ ಅಲ್ಲಿದ್ದರೇ ಚಂದ. ನನ್ನಂತೆ ಅವಳಾದರೂ ಇದನ್ನು ಬಯಸಿರಲು ಸಾಕು. ಅವಳನ್ನು ಒಲಿಸಿಕೊಳ್ಳಲು ಕಷ್ಟವಾಗದು ಎಂದು ಬೋರೇಗೌಡರು ಮನ ಗಂಡರು. ಅವಳನ್ನು ನೋಡುವ ಆತುರವೂ ಆಯಿತು ಅವರಿಗೆ. ಆದುದ ರಿಂದ ನಾರಾಯಣನೊಡನೆ ನುಡಿದರು :

"ಕಾರ್ಯಸಾಧಿಸಿದಿರಿ; ಮತ್ತೆ ನಮಗೆ ಒಂದು ಕಪ್ ಕಾಫಿ ಕೂಡ ಇಲ್ಲವಲ್ಲ."

"ಒಂದು ಕಪ್ ಯಾಕೆ ಸ್ವಾಮಿ, ಒಂದು ಗ್ಯಾಲನ್ ಕೊಡಿಸುತ್ತೇನೆ! ಏಳಿ, ಹೋಗೋಣ."

"ಬೇಡ ವೈದ್ಯರೇ. ಬೇಡ. ಹೋಟೇಲಿಗೆ ಕಾಫಿ ಕುಡಿಯಲು ನಾನು ಹೋಗುವುದೇ ಇಲ್ಲ."

"ಹೋಟೇಲಿಗೆ ಯಾಕೆ ಹೋಗಬೇಕು? ಇಲ್ಲೇ ತರಿಸಲು ಆಗುವು ದಿಲ್ವಾ? ಹೋಟೇಲಿಗಲ್ಲಾ, ಮನೆಗೆ. ಏಳಿ" ಎಂದು ನಾರಾಯಣ ಅವ ರನ್ನು ಮನೆಗೆ ಕರೆದುಕೊಂಡು ಬಂದ. ಅವರನ್ನು ಹೊರಗೆ ಕೂತುಕೊಳ್ಳಿಸಿ ಒಳಗೆ ನುಸುಳಿ ಹೇಳಿದ : "ನಮ್ಮ ಧನಿ ಬಂದಿದ್ದಾರೆ. ಫಸ್ಟ್‌ಕ್ಲಾಸ್ ಕಾಫಿ ಮಾಡು."

ಬೋರೇಗೌಡರು ಮನೆ, ನೆಲ, ಗೋಡೆ, ಅಟ್ಟಗಳನ್ನೆಲ್ಲ ತಿರುತಿರುಗಿ ನೋಡುತಿದ್ದರು. ನಾರಾಯಣ ಹೊರಬಂದ ಬಳಿಕ ಅವನ ಕಡೆ ಹೊರಳಿ ಹೇಳಿದರು : "ವೈದ್ಯರೇ! ಈ ಮನೆ ನಾನು ನೋಡಿಯೇ ಇಲ್ಲ. ಬಿದಿರಿನ

ಮೇಲೆ ಹಂಚು ಹಾಕಿದ್ದಾರೆ. ಎರಡು ಮೂರು ಕೋಣೆಗಳಾದರೂ ಇವೆಯಾ ?"

"ನಮಗೆ ಸಾಕು ಸ್ವಾಮೀ. ಬನ್ನಿ ಒಳಗೆ ಬನ್ನಿ. ನೀವೇ ನೋಡಿ" ಎಂದು ನಾರಾಯಣ ಅವರಿಗೆ ಮನೆ ತೋರಿಸಿದ. ಅಡಿಗೆ ಕೋಣೆಗೆ ಬಂದಾಗ ಹೊಸ್ತಿಲ ಬಳಿ ಬೋರೇಗೌಡರು ನಿಂತು ವಾಸಂತಿಯನ್ನು ದಿಟ್ಟಿಸಿದರು. ಅವಳು ಬಗ್ಗಿ ಊದುಗೊಳವೆಯಿಂದ ಬೆಂಕಿ ಊದುತಿದ್ದಳು. ಅವಳ ಜಡೆ ಬಿಳಿ ರವಕೆಯ ಮೇಲೆ ಕಾಳಿಂಗನಂತೆ ಬಿದ್ದಿದೆ. ಕೆನ್ನೆಯ ಮೇಲೆ ಕೆಲವು ಕೂದಲುಗಳು ಹಾರುತಿದ್ದವು. ಪಾದ, ಮೊಣಗಂಟಿನ ವರೆಗಿನ ಕಾಲು ಅವರಿಗೆ ಕಂಡಿತು. ಕಲ್ಲನ್ನೂ ಮಾತನಾಡಿಸುವ ಸ್ವಭಾವ ಅವರದು. ಅದರಂತೆ ಈಗಲೂ ಅವರು ನುಡಿದರು: "ನಮಸ್ಕಾರ್ರೀ! ಹೋದ ಸಲ ಮಂಗಳೂರಿಗೆ ಬಂದಾಗ ನಿಮ್ಮ ಮನೆಗೆ ಬಂದು ಚಹಾ ಕುಡಿದೆವು. ಈಗ ನೀವು ನಮ್ಮೂರಿಗೆ ಬಂದಿರುವಾಗ ನಾವು ಕೊಡಬೇಕು."

ವಾಸಂತಿ ಎದ್ದು ಕೈಜೋಡಿಸಿ "ಕಾಫಿ ಯಾರು ಕೊಟ್ಟರೇನು ?" ಎಂದಳು.

"ಹಾಗೆಂದರೆ ಆಗುವುದಿಲ್ಲ. ನೀವು ನಮ್ಮ ಮನೆಗೆ ಬರಲೇ ಬೇಕು. ನಾವು ಬೇರೆಯಲ್ಲ, ನಿಮ್ಮ ವೈದ್ಯರು ಬೇರೆಯಲ್ಲ."

"ಆಗಲಿ ಬರುತ್ತೇವೆ. ಇಲ್ಲೇ ಇರುತ್ತೇವೆಂದಾದ ಮೇಲೆ ಯಾವಾಗಲಾದರೊಮ್ಮೆ ಬಂದ."

"ಯಾವಾಗಲಾದರೊಮ್ಮೆ ಅಲ್ಲ. ಯಾವಾಗಲೂ ಎಂದು ಹೇಳಿ. ಏನು ಮುಸಲ್ಮಾನ ಸ್ತ್ರೀಯರ ಹಾಗೆ ಒಳಗೇ ಇರುವವರೇನು ನೀವು ?"

ಅದನ್ನು ಕೇಳಿ ನಾರಾಯನಿಗೂ ನಗು ಬಂದಿತು. "ಅಲ್ಲ ಸ್ವಾಮೀ! ನೀವು ಹೇಳಿದ ಹಾಗೆ ಈ ಮುಸ್ಲಿಂ ಹೆಂಗಸರಿಗೆ ಅದೊಂದು ಜೈಲಲ್ವಾ!" ಎಂದ ನಾರಾಯಣ.

"ಕೇಳುತ್ತೀರಾ ಅದನ್ನ! ಜೈಲೆಂದರೆ ಮತ್ತೆ ಒಂದು ವರುಷ, ಎರಡು ವರುಷವಲ್ಲ; ಜೀವಾವಧಿ ವರೆಗಿನ ಜೈಲು. ಕಾಳಾಪಾಣಿ!" ಎಂದು ಅವರು ವಿವರಿಸಿದರು. ಬಿಸಿನೀರಿನ ಕೊಟ್ಟಿಗೆ ನೋಡಿ ಅಡ್ಡ ತೂಗಿಸಲು ನಾಲ್ಕು ತಗಡುಗಳನ್ನು ಕಳಿಸುವುದಾಗಿ ತಿಳಿಸಿ ಹೋದರು.

ಒಂದೆರಡು ದಿನಗಳ ಮೇಲೆ ನಾರಾಯಣನೇ "ಅವರು ಅಷ್ಟು ಕರೆದಿದ್ದಾರೆ. ಒಮ್ಮೆ ಅವರ ಮನೆಗೆ ಹೋಗಿ ಬರಬಾರದೇ? ಅವರ ಉಪ್ಪನ್ನು ಉಣ್ಣುವವರು ನಾವು" ಎಂದು ಆಗ್ರಹ ಪಡಿಸಿದ. "ಒಬ್ಬಳೇ ಹೇಗೆ ಹೋಗಲಿ?'' ಎಂದು ಅವಳೂ ಜಾರಿಕೊಂಡಳು. ಹೀಗಾಗಿ ನಾರಾಯಣನೇ ಹೇಳಿ ಕಳಿಸಿದ ಮೇರೆಗೆ ಬೋರೇಗೌಡರ ಸಣ್ಣ ಹುಡುಗರಿಬ್ಬರು ಬಂದು ಕರೆದರು. ಈಗ ತಪ್ಪಿಸಿಕೊಳ್ಳಲು ಅವಳಿಂದಾಗಲಿಲ್ಲ. ಮನೆಯಲ್ಲಿ ಗೌಡರಿರಲಿಲ್ಲ. ಆದರೆ ಆ ಮನೆಯಲ್ಲಿ ವೈದ್ಯರ ಹೆಂಡತಿಯಂತೆ ಅವಳನ್ನು ನಡೆಸಿಕೊಂಡುದುದನ್ನು ನೋಡಿ ಅವಳಿಗೆ ಖೇದವಾಯಿತು. ಹುಟ್ಟಿದ ಊರು, ತಾಯಿ, ತಂದೆ, ಆಸ್ತಿಪಾಸ್ತಿ, ಜಾತಿಯನ್ನೂ ಅವರು ಕೇಳಿದರು. ವಾಸಂತಿ ಸುಳ್ಳು ಸಂಗತಿಗಳನ್ನು ಹೇಳಿದಳು. ಆದರೆ ಅವಳ ಮೋರೆ ವಿವರ್ಣವಾದುದು ಗೌಡರ ಹೆಂಡತಿಯ ಗಮನಕ್ಕೆ ಬಾರದಿರಲಿಲ್ಲ. "ಯಾಕ್ರೀ, ಮೋರೆ ನಿಸ್ತೇಜವಾಗಿದೆ? ಮೈ ಚನ್ನಾಗಿಲ್ವಾ?" ಎಂದು ಅವರು ಎರಡು ಮೂರು ಸಲ ಕೇಳಿಯೇ ಕೇಳಿದರು.

"ನಿನ್ನೆಯಿಂದ ಸ್ವಲ್ಪ ತಲೆ ನೋಯುತ್ತದೆ.''

"ಹೊಸ ಊರು. ಹೊಸ ನೀರು. ಒಮ್ಮೆ ನೀವು ಮಲಗುತ್ತೀರೆಂದು ತೋರುತ್ತದೆ.''

"ಬಂದುದನ್ನು ಅನುಭವಿಸಬೇಕಲ್ಲ'' ಎಂದವಳು ಹೇಳಿ ಬೇಗನೇ ಮನೆಗೆ ಮರಳಿದಳು. ಬಾಗಿಲಿಕ್ಕಿಕೊಂಡು ತನ್ನ ದುಃಖವನ್ನೆಲ್ಲ ಕಣ್ಣೀರಾಗಿ ಹರಿಸಿದಳು.

ಮರುದಿನ ಸಾಯಂಕಾಲ ಬೋರೇಗೌಡರು ವಾಸಂತಿಯ ಮನೆ ಮುಂದೆ ಹಾಯ್ದರು. ವೈದ್ಯರಿಲ್ಲವೆಂದು ಅವರು ಬಲ್ಲರು. ಏಕೆಂದರೆ ವೈದ್ಯಶಾಲೆಯ ಮಾರ್ಗವಾಗಿಯೇ ಅವರು ಬಂದಿದ್ದರು. ಹಾಗಿದ್ದರೂ "ವೈದ್ಯರೇ! ವೈದ್ಯರೇ!" ಎಂದು ಕರೆದರು. ಒಳಗಿದ್ದ ವಾಸಂತಿ ವೈದ್ಯರಿಲ್ಲವೆಂದು ಹೇಳಲು ಹೊರಗೋಡಿ ಬಂದಾಗ ಗೌಡರು ಜಗಲಿಯೇರಿದ್ದರು. ಅವಳನ್ನು ಕಂಡು "ವೈದ್ಯರಿದ್ದಾರಾ?'' ಎಂದು ಪುನಃ ಕೇಳಿದರು. ಅವಳು ಉತ್ತರ ಕೊಡುವ ಮೊದಲೇ ಹೇಳಿದರು: ''ನಿನ್ನೆ ಮನೆಗೆ ಬಂದಿದ್ದಿರಂತೆ. ನಾನಿರಲಿಲ್ಲ. ನನಗೆ ಗೊತ್ತೇ ಇರಲಿಲ್ಲ. ಆ ಮೇಸ್ತ್ರಿಯೊಬ್ಬ ಗಂಟು ಬಿದ್ದಿದ್ದ. ತೋಟಕ್ಕೆ ಹೋದೆ"

ಎಂದು ಹೇಳುತ್ತ ಒಳಗೆ ಬಂದು ಕುರ್ಚಿಯಲ್ಲಿ ಕುಳಿತುಕೊಂಡರು. ವಾಸಂತಿ ಹಿಂದೆ ಸರಿದು ಹೊಸ್ತಿಲಲ್ಲಿ ನಿಂತಳು. ಅವಳಿಗೆ ಸ್ವಲ್ಪ ಅಂಜಿಕೆಯಾಯಿತು.

"ಮನೆಗೆ ಹೋದಾಗ ಕಾಫಿ ಗೀಫಿ ಕೊಟ್ಟರೋ ಇಲ್ಲವೋ ?'' ಎಂದು ಅವರು ವಿಚಾರಿಸಿದರು.

"ಕಾಫಿ ಒಂದೇ ಯಾಕೆ, ತಿಂದು ತಿಂದು ಹೊಟ್ಟೆ ಒಡೆಯಿತು'' ಎಂದು ಅವಳು ಉತ್ತರವಿತ್ತು ''ಮನೆಗೆ ಬಂದಿರುವ ಗೌಡರಿಗೆ ಕಾಫಿ ಕೊಡ ಬೇಕಾಗಿ ಬಂತಲ್ಲ'' ಎಂದು ಚಿಂತಿಸಿ ಒಳಗೆ ಹೋಗಲು ತಿರುಗಿದಳು.

''ಬಾಯಿ, ನೀವೀಗ ಕಾಫಿ ಮಾಡುವುದು ಬೇಡ. ಈಗ ಆಗಿ ಬಂದಿದ್ದೇನೆ. ನೀವು ಹಾಗೆಲ್ಲ ಮಾಡುವುದಾದರೆ ನಾನು ಹೊರಟೆ ''

''ಛೇ, ಛೇ. ಮನೆಗೆ ಬಂದ ಮೇಲೆ ಹಾಗೆಯೇ ಕಳಿಸುವುದು ಸರಿಯಲ್ಲ" ಎಂದು ಅವಳು ಉಪಚಾರಕ್ಕಂದಳು. ಈ ಶನಿ ಯಾವಾಗ ಹೋದೀತೆಂದು ಅವಳ ಮನಸ್ಸಿನೊಳಗಿತ್ತು. ಆದರೆ ಅವಳು ಅಷ್ಟು ಹೇಳುವುದೇ ತಡ ಗೌಡರು ಗಕ್ಕನೆ ಪವಡಿಸಿದರು. ವಾಸಂತಿ ಅಡಿಗೆ ಕೋಣೆಯಲ್ಲಿದ್ದಾಗ ಹೊಕ್ಕು ಮಾತನಾಡಿಸಬೇಕೆಂದು ಅವರ ಮನದಾಸೆ. ಆದರೆ ಮುಂದಿನ ಮತ್ತು ಹಿಂದಿನ ಬಾಗಿಲುಗಳು ತೆರೆದಿವೆ. ಇನ್ನೂ ಕತ್ತಲಾಗಿಲ್ಲ. ಮನೆಯ ಆಚೆ ಈಚೆ ಜನಸಂಚಾರವಿದೆ. ಎಲ್ಲಾದರೂ ಒಲ್ಲದೆ ಅವಳು ಕೂಗಿಕೊಂಡರೆ ಮರ್ಯಾದೆ ಹೋಗುವ ಪ್ರಸಂಗ. ಉಪಾಯದಿಂದ ಕಾರ್ಯ ಸಾಧಿಸುವುದು ಉತ್ತಮವೆಂದು ಬಗೆದು ಚಾಪಲ್ಯವನ್ನು ಬಿಗಿಹಿಡಿದು ಕೊಂಡರು. ವಾಸಂತಿ ಕಾಫಿ ಕೊಡಲು ಬಂದಾಗ ಆ ಕಪ್ ಮತ್ತು ಬಸಿ ತೆಗೆದುಕೊಳ್ಳುವಾಗ ಅವಳ ಬೆರಳುಗಳನ್ನು ಹಿಡಿದು ಒತ್ತಿದರು. ಮತ್ತು ಅದೇ ಕಾಲಕ್ಕೆ ಅವಳ ಕಡೆ ನೋಡಿ ಕಾಮುದ ಕಣ್ಸನ್ನೆ ಮಾಡಿದರು.

ವಾಸಂತಿ ಕೈ ಕೊಸರಿಕೊಂಡಳು. ಅವರು ಕಾಮುಕನ ನಗೆ ಬೀರಿ ಅವಳ ಎಡಪಾದದ ಮೇಲೆ ತನ್ನ ಬಲಪಾದದ ಬೆರಳುಗಳಿಂದ ಅಮುಕಿ ಭೋಗಸುಖಕ್ಕೆ ಅವಳನ್ನು ಆಮಂತ್ರಿಸುವಂತೆ ಸನ್ನೆ ಮಾಡಿದರು. ವಾಸಂತಿಯ ದೇಹದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಆದರೆ ಈ ಸಲ ಅದು ಕಾಮನೆಗಳ ನರಸಂವೇದನೆಗಳಲ್ಲ. ರೋಷದ ಉರಿ. ಅವಳು ಅವರನ್ನು ದುರದುರನೆ ನೋಡಿ ಹಿಂತಿರುಗಿದಳು. ವಾಸಂತಿ ಅಡಿಗೆ ಕೋಣೆಗೆ ಹೊಕ್ಕು

ಹಿಂತಿರುಗಿನೋಡುತ್ತಾಳೆ-ಅದರ ಹೊಸ್ತಿಲಲ್ಲಿ ಬೋರೇಗೌಡರು ನಿಂತಿದ್ದಾರೆ. ತಮ್ಮ ತೋರು ಬೆರಳನ್ನು ತಮ್ಮ ತುಟಿಗಳಿಗೊತ್ತಿಟ್ಟುಕೊಂಡು "ಶ್! ಶ್!" ಎಂದು ಗುಲ್ಲೆಬ್ಬಿಸದಂತೆ ಅವಳಿಗೆ ಮುನ್ನೆಚ್ಚರಿಕೆಯನ್ನಿತ್ತರು. ಆ ಮೇಲೆ ತಮ್ಮ ಕೋಟಿನ ಕಿಸೆಯಿಂದ ನೋಟುಗಳ ಕಟ್ಟನ್ನು ತೆಗೆದು ಅವಳ ಎದೆ ಗೆಸೆದರು. ಸ್ತನಗಳಿಗೆ ರಪ್ ಎಂದು ಬಡಿದಾಗ ಕಟ್ಟಿದ ನೂಲು ತುಂಡಾಗಿ ನೋಟುಗಳು ಒಂದೊಂದಾಗಿ ಕೆಳಗೆ ಉದುರಿದುವು. ವಾಸಂತಿಗೆ ಕೋಪ ವನ್ನು ಸಹಿಸಲಾಗಲಿಲ್ಲ. ಅಲ್ಲೇ ಇದ್ದ ಒಂದು ಸೌದೆಯನ್ನು ಎಳೆದು "ಹೋಗುತ್ತೀರೋ ಇಲ್ಲವೋ ಇಲ್ಲಿಂದ'' ಎಂದು ಕೂಗುತ್ತ ಅವರೆಡೆಗೆ ಬಂದಳು. ಅದೇ ಕಾಲಕ್ಕೆ ಮನೆಯ ಹಿಂಬದಿ ಮುಂಬದಿ ಮನುಷ್ಯರ ಮಾತು ಕೇಳಿ ಬಂತು. ಬೋರೇಗೌಡರು ನಿರ್ವಿಣ್ಣರಾದರು. ಧೈರ್ಯವಾಗಲಿಲ್ಲ. ಮತ್ತು ಅಲ್ಲಿಂದ ಹೊರಳಿದರು. ಅವರ ಮುಖ ಕೆಂಪಡರಿತು. ಮೂಗಿನಲ್ಲಿ ಹೊಗೆಯಾಡಿತು. ಕ್ರಾಫಿನ ಕೂದಲು ನೆಟ್ಟಗಾಯಿತು. ಕಾಲುಗಳು ಥರಥರ ನಡುಗಿದವು. ಪಾದಗಳಿಗೆ ಚಪ್ಪಲಿ ಸಿಕ್ಕಿಸಿಕೊಂಡು ಅವರು ಹೊರಟರು. "ಬೇಗ ದಯಮಾಡ್ಸಿ. ದೊಡ್ಡವರು !" ಎಂದು ವಾಸಂತಿ ಬಾಗಿಲಿನ ವರೆಗೆ ಬಂದು ಹಂಗಿಸಿದಳು. ಬೋರೇಗೌಡರು ಜಗಲಿಯಿಂದ ಇಳಿಯುತ್ತ ಅವಳ ಕಡೆ ಕೈತೋರಿಸಿ "ನಿನ್ನನ್ನು ನಾಲ್ಕು ಜನ ಮಾರಿಮಣ್ಣರ (ಮಾದಿಗರ) ಕೈಗೆ ಕೊಡದಿದ್ದರೆ ನಾನು ಬೋರೇಗೌಡನಲ್ಲ !'' ಎಂದು ಗರ್ಜಿಸಿದರು.

ವಾಸಂತಿ ಬಾಗಿಲಿಕ್ಕಿಕೊಂಡಳು. ಆದರೆ ಅದರಿಂದ ಭಯವನ್ನು ತಡೆ ಯಲಿಕ್ಕಾಗುವುದಿಲ್ಲ. ಈ ಭೀತಿ ಕ್ಷಣಿಕವೂ ಅಲ್ಲ. ಆದುದರಿಂದ ಅವಳು ಕಂಗಾಲಾಗಿ ರಾತ್ರಿ ನಾರಾಯಣ ಊಟಕ್ಕೆ ಬಂದಾಗ ಎಲ್ಲವನ್ನೂ ಹೇಳಿ ಅತ್ತಳು. ಕೈಯಲ್ಲಿ ಹಿಡಿದಿದ್ದ ತುತ್ತು ನಾರಾಯಣನ ಬಾಯಿಗೆ ಹೋಗಲಿಲ್ಲ. ಅವನು ವಾಸಂತಿಯ ಮೇಲೆಯೇ ತಿರುಗಿ ಬಿದ್ದ. "ಹುಂ ಎಂದನ್ನುತಿದ್ದರೆ ನಿನಗೇನಾಗುತ್ತಿತ್ತು ! ನೀನು ದೊಡ್ಡ ಪತಿವ್ರತಾ ಶಿರೋಮಣಿಯಾಗಿರುವದು ಅಷ್ಟರಲ್ಲೇ ಇದೆ ! ಆ ಆನಂದರಾಯನೊಡನೆ ಹಗಲೂ ಇರುಳೂ ಬಿದ್ದು ಕೊಳ್ಳುತಿದ್ದೀ. ಈ ಗೌಡರು ನಿನಗೆ ಆಗುವುದಿಲ್ಲವೇನು ? ಆ........ದುಷ್ಟ ನಿನಗೆ ಕೊಟ್ಟ ಸೀರೆ ಆಭರಣಗಳು ಹೇಳುವ ಹಾಗಿಲ್ಲ. ಅವರಂತಲ್ಲ ಇವರು. ಬಯಸಿದರೆ ನೀನು ಬೇಡಿದ್ದನ್ನು ಕೊಟ್ಟಾರು. ಇಂಥವರ ಮರ್ಜಿ ಹಿಡಿಯ

ಬೇಕೋ ಅವನಂಥ ಬೇವರ್ಸಿಗಳ ಬೆನ್ನು ಹತ್ತಬೇಕೋ! ನಿನ್ನ ಬುದ್ಧಿ ಎಲ್ಲಿಟ್ಟಿರುತ್ತೀ? ಅವರಿಗೂ ನಿನಗೂ ತಾಗಿಸಿ ಹಾಕೋಣ ಎಂದೇ ನಾನು ನಿನ್ನನ್ನು ಇಲ್ಲಿಗೆ ಕರೆದುಕೊಂಡು ಬಂದೆ."

ನಾರಾಯಣನ ಈ ದುರ್ನುಡಿಗಳನ್ನು ಕೇಳಿ ವಾಸಂತಿಗೆ ಅಚ್ಚರಿಯೂ ಸಿಟ್ಟೂ ಬಂದಿತು. "ನೀನು ಮೊದಲೇ ನನಗೆ ಯಾಕೆ ಹೇಳಲಿಲ್ಲ? ಹಾಗಿದ್ದರೆ ನಾನು ಬರುತ್ತಿದ್ದೇ ಇಲ್ಲ. ನನಗೆ ಇಷ್ಟವಿಲ್ಲ. ನಾನೊಲ್ಲೆ.''

"ಆಯಿತಲ್ಲ ಈಗ. ಅವರನ್ನು ನಿರಾಕರಿಸಿಯಾಯಿತಲ್ಲ. ಅದರ ಫಲವನ್ನು ಉಣ್ಣಬೇಕಾದೀತು. ನಿನ್ನನ್ನು ಹೀಗೆಯೇ ಇರಬಿಡುತ್ತಾರೆಂದು ತಿಳಿಯಬೇಡ.''

"ನಾನು ಇಲ್ಲಿ ಇರುವುದಿಲ್ಲ. ನಾಳೆ ಬೆಳಿಗ್ಗೆ ನನ್ನನ್ನು ಕಳಿಸಿಕೊಡು."

"ಎಲ್ಲಿಗೆ ಹೋಗುವವಳು?"

"ಎಲ್ಲಾದರೂ".

"ಎಲ್ಲಾದರೂ ಹೋಗಿ ಏನು ಮಾಡುವವಳು? ಮತ್ತೆ ಆ ಅಯೋಗ್ಯನ ಬೆನ್ನು ಬೀಳುತ್ತೀ?''

"ಇಲ್ಲ.''

"ಹಾಗಾದರೆ ಅಂಗಡಿ ತೆರೆಯುತ್ತೀ?''

"ಏನಾದರೂ ಮಾಡುತ್ತೇನೆ. ನಿನಗೇಕೆ ಅದು? ಮೊದಲು ನೀನು ನನ್ನನ್ನು ಕಳಿಸು".

"ನಾನು ಕಳಿಸುವುದಿಲ್ಲ"

"ಬೇಡ. ನಾನೊಬ್ಬಳೇ ಹೋಗುತ್ತೇನೆ".

"ಹೋದರೆ ಕಾಲು ಮುರಿದು ಹಾಕಿಯೇನು?"

"ಹೌದು. ಕಾಲು ಮುರಿಯುತ್ತೀ. ಅದು ಕೋಳಿ ಮರಿಯ ಕಾಲಲ್ಲ ಹಾಗೆ".

"ಏನಂದೆ?'' ಎಂದ ನಾರಾಯಣ ಒಲೆಗಿಡುವ ಕಟ್ಟಿಗೆಯನ್ನೇ ಎಳೆದ.

"ಹೊಡೆಯುತ್ತೀ. ಇಕೋ ಹೊಡೆ. ನಿನ್ನ ಕೈಯಿಂದಲೂ ಪೆಟ್ಟು ತಿಂದಂತಾಗಲಿ" ಎಂದವಳು ಮುಂದೆ ಬಂದಳು. ಮತ್ತು ಅದನ್ನು ಸರಕ್ಕನೆ

ಸೆಳೆದುಕೊಂಡು "ಹೊಡೆಯುತ್ತೀ! ಅದು ಗಂಜಿಯಲ್ಲ. ಅಕ್ಕನಿಗೆ ಹೊಡೆಯಲು ನಿನಗೆ ಕೈ ಬರುತ್ತದೆ! ಸ್ವಂತ ಒಡಹುಟ್ಟಿದವಳನ್ನು ದುಡ್ಡಿನ ಆಶೆಗಾಗಿ ಮಾರಲು ನಾಚಿಕೆಯಾಗುವುದಿಲ್ವಾ ನಿನಗೆ? ಆ ಗೌಡನಿಗೆ ನನ್ನನ್ನು ತಾಗಿಸಿ ಹಾಕಲು ಕರೆದು ತಂದನಂತೆ! ಅವನಿಗೆ ನನ್ನನ್ನು ಬಲಿಕೊಟ್ಟು ತಾನು ಮೆರೆಯುವವನು. ಮಾನ, ಮರ್ಯಾದೆ ಎಲ್ಲ ಬಿಟ್ಟು ನಿಂತಿರುತ್ತೀ! ಈಗ ನಿನ್ನನ್ನು ನಾನು ಹೊಡೆದು ಕೈಕಾಲು ಮುರಿದು ಹಾಕಿದರೆ ಪಾಪ ಬರುವದಿಲ್ಲ. ಅಕ್ಕನಾದ ನನಗೆ ಅಷ್ಟು ಅಧಿಕಾರ ಇದೆ. ಆದರೆ ನಾನು ನಿನ್ನಂತೆ ಅಲ್ಲ. ಕಣ್ಣು ಕೈಕಾಲು ಸರಿಯಾಗಿದ್ದರೆ ಎಲ್ಲಾವರೂ ಬೇಡಿ ಬದುಕಬಹುದು. ಅದನ್ನು ಊನ ಮಾಡಿಡಬೇಕೆಂದು ಬಯಸುತ್ತೀಯೇನು? ಈ ಜೀವ ಇಷ್ಟರ ವರೆಗೆ ಕಷ್ಟಗಳನ್ನನುಭವಿಸಿದುದು ಸಾಲದೆಂದು ನಿನ್ನ ಇಚ್ಛೆ! ನನ್ನ ಜೀವಕ್ಕೆ ನೀನು ಸುತ್ತುತರಬೇಡ. ನನ್ನ ಪಾಲಿಗೆ ನಾನು ಹಾಳಾಗಿ ಹೋಗುತ್ತೇನೆ. ನಿನ್ನುಪಕಾರ ಬೇಡ. ನೀನು ಉಪದ್ರ ಕೊಡದಿದ್ದರೆ ಸಾಕು."

ನಾರಾಯಣ ಹೊರ ಕೋಣೆಗೆ ಹೋಗಿ ತನ್ನ ಚಾಪೆ ಬಿಡಿಸಿಕೊಂಡ. ಒಂದು ದಿನ ಅವನು ಮನೆ ಬಿಟ್ಟು ಹೊರಗೆ ಹೋಗಲಿಲ್ಲ. ಎರಡನೆಯ ದಿನ ರಾತ್ರಿ ನೀರು ತರಲು ಬಾವಿಗೆ ತೆರಳಿದ ವಾಸಂತಿ ಹಿಂತಿರುಗಲಿಲ್ಲ.

## ೨೦ನೇಯ ಅಧ್ಯಾಯ

ಜಲಜಮ್ಮನವರಿಗೆ ಕಾವೇರಿಯ ಕಥೆ ಕೇಳಿ ಕಡು ದುಃಖವಾಗಿದೆ. ಮಕ್ಕಳು ಹುಟ್ಟಿ ಹುಟ್ಟಿ ಸತ್ತು ಸತ್ತು ಹೋದುವು. ಕೊನೆಗೆ ಉಳಿದವೆಂದರೆ ಎರಡೇ. ಹುಡುಗಿ ಇವಳೊಬ್ಬಳೇ. ನಯಭಯದಿಂದ ಅವಳನ್ನು ಬೆಳೆಸಿದರು. ಕೆಲಸ ಬೊಗಸೆಗಳನ್ನು ಕಲಿಸಿದರು. ದೊಡ್ಡದಾದ ಮೇಲೆ ಹಿರಿಯರ ಧರ್ಮದಂತೆ ಧಾರೆಯೆರೆದು ಕೊಟ್ಟರು. ಒಂದು ಬಳ್ಳಿಗೆ ಒಂದು ಮರದ ಆಸರೆಯಾಯಿತು ಎಂದವರು ಸಂತೋಷ ತಾಳಿದ್ದರು. ಆದರೆ ಬರಬರುತ್ತ ಬೇಸಿಗೆಯ ಕೆರೆಯಂತೆ ನೀರು ಬತ್ತಿತು. ಮತ್ತು ಜಲಜಮ್ಮನವರ ಮೋರೆಯೂ ಜಲಜದಂತೆ ಒಣಗಿ ಹೋಯಿತು. ಚಿಂತೆಯ ಹುಳು ಅವರ ಮಾತೃಹೃದಯ

ವನ್ನು ಕೊರೆಯುತೊಡಗಿದೆ. "ನನ್ನ ಮಗಳ ಗತಿ ಹೀಗಾಯಿತಲ್ಲ, ನಮ್ಮ ಕುಟುಂಬದಲ್ಲಿ ಇಷ್ಟುರವರೆಗೆ ಹೀಗಾಗಿರಲಿಲ್ಲ; ಇದರಿಂದ ಒಂದು ಕೆಟ್ಟ ಹೆಸರು ಬಂತು; ನಮಗೂ ಅಪಮಾನ; ನಮ್ಮ ಸಂಗತಿ ಹೇಗೂ ಇರಲಿ. ನಾವಿನ್ನು ಎಷ್ಟು ವರುಷ ಈ ಜಗತ್ತಿನಲ್ಲಿ ಬಾಳಿ ಬದುಕಲುಂಟು; ಅವಳ ಗತಿಯೇನು?'' ಎಂದು ಅವರು ಹಗಲಿರುಳು ಪರಿತಪಿಸಿದರು.

ಆ ರಾಮಗೌಡ ಮತ್ತು ಅವನಂತಹ ಅನೇಕ ಊರಿನವರ ಸಂಸಾರ ಚಿತ್ರ ಅವರ ಕಣ್ಣಮುಂದೆ ಹಾಯುತ್ತದೆ. ಚಾಲಗೇಣಿ ಒಕ್ಕಲುಗಳಿಗೆ ಸ್ವಂತ ಮನೆಯಿಲ್ಲ. ಅವರದು ಮುಳಿ ಅಥವಾ ಒಣ ಹುಲ್ಲಿನ ಗುಡಿಸಲುಗಳು. ಬೇಸಿಗೆಯಲ್ಲಿ ಗಾಳಿಗೆ ಹುಲ್ಲು ಕೆದರಿ ಒಳಗೆ ಸೂರ್ಯನ ಬೆಳಕು ಬೀಳುತ್ತದೆ. ಮಳೆಗಾಲದಲ್ಲಿ ಅಲ್ಲಲ್ಲಿ ತಟಪಟ ತಟಪಟ ಹಸಿಯಪ್ಪ ಬೀಳುತ್ತಾನೆ. ಮನೆಯಲ್ಲಿ ನಾಲ್ಕು ಹಿತ್ತಾಳಿ, ತಾಮ್ರದ ಪಾತ್ರೆಗಳಿಲ್ಲ. ಎಲ್ಲ ಮಣ್ಣಿನ ಗಡಿಗೆಗಳು. ದುಡಿದರೆ ಪಡಿ ಅಕ್ಕಿ. ಆ ದುಡಿಮೆಗೂ ಚಳಿ ಮಳೆ ಬಿಸಿಲು ಹಗಲು ಇರುಳುಗಳೆಂದಿಲ್ಲ. ಮಳೆಗಾಲದ ಬೇಸಾಯದ ಹೊತ್ತು ಮೊಣಗಂಟಿನ ವರೆಗೆ ಕೆಸರು ನೀರಿನ ಗದ್ದೆಯಲ್ಲಿ ಹೆಂಗಸರಿಗೆ ಕೆಲಸ. ನೇಜಿ ಕೀಳುವ, ಹೊರುವ, ನೆಡುವ, ಕೆಲಸದಲ್ಲಿ ಬಿಡುವಿಲ್ಲ. ಒಗ್ಗಿ ಒಗ್ಗಿ ಸೊಂಟ ಸೋಭಾನೆಯಾಗುವುದುಂಟು. ಗಂಡಸರಿಗೆ ಉಳುವ, ಗೊಬ್ಬರ ಹೊರುವ, ಬಿತ್ತುವ ಕಾರ್ಯವಿದೆ. ಮುಂದೆ ಕೊಯ್ಲು, ಕಟ್ಟಿಗೆ ಸಂಗ್ರಹ, ಧನಿಯ ಬಿಟ್ಟಿಬೇಗಾರಿ ಇದ್ದದ್ದೇ. ದಿನ ದಿನ ದುಡಿದು ಬರುವಾಗ ಕೂಲಿ ಅಕ್ಕಿ ಸೆರಗಿನಲ್ಲಿ ಕಟ್ಟಿಕೊಂಡು ಬಂದು ಒಲೆಯೂದುವರು. ಹೊಳೆಹಳ್ಳದ ಬದಿಯಲ್ಲೇ ಮೂರು ಕಲ್ಲು ಗೂರಿ ಮಣ್ಣಿನ ಹಂಡೆಯಿಟ್ಟು ನೀರು ಕಾಯಿಸಿ ಸ್ನಾನ ಮಾಡಿ ಗಂಜಿ ಕುಡಿವರು. ಕೋಳಿ ಕೂಗುವ ಹೊತ್ತಿಗೆದ್ದರೆ ಚಾಪೆಯ ಮೇಲೆ "ಹಾ" ಎಂದು ಬಿದ್ದುಕೊಳ್ಳುವಾಗ ರಾತ್ರಿಯಾಗುತ್ತದೆ. ನೋಡಿದರೆ ನಿರಕ್ಷರರು! ವಿದ್ಯಾ ಬುದ್ಧಿಯಿಲ್ಲದ ಜನ ಎಂದನ್ನುತ್ತೇವೆ. ಆದರೆ ಅವರೆಷ್ಟು ಪ್ರೀತಿಯಿಂದ ನಡೆದುಕೊಳ್ಳುತ್ತಾರೆ! ಹೆಂಡತಿಯ ಮೇಲೆ ಗಂಡನಿಗೆಷ್ಟು ಪ್ರೀತಿ! ಅವನು ಕೊಟ್ಟದ್ದು ಅವಳು ತೆಗೆದುಕೊಂಡದ್ದು ಅವರವರಿಗೇ ಗೊತ್ತು! ವರುಷಕ್ಕೊಮ್ಮೆ ಕೊಲ್ಲಿ ಜಾತ್ರೆಗೆ ಒಂದು ನಿತ್ಯ ಉಡುವ ತುಂಡು ಸೀರೆ ಕೊಂಡು ಕೊಡಿಸಿದರೆ ತೊಡಿಸಿದರೆ ಪುಣ್ಯ. ಮೈಮೇಲೆ ಒಂದು ಮೂಗುತಿ, ಕರಿಮಣಿ,

ಬೆಂಡೋಲೆ ಬಿಟ್ಟರೆ ಬೇರೆ ಏನೂ ಇಲ್ಲ. ಆದರೂ ಎಷ್ಟು ಅನ್ಯೋನ್ಯದಿಂದ ಇದ್ದಾರೆ !

ಇವನಿಗೇನಾಗಿದೆ ? ಎಷ್ಟು ಸುಖದಿಂದ ಸಂಸಾರ ಸಾಗಿಸಬಹುದಿತ್ತು! ಕೇಳಿದರೆ ದೊಡ್ಡ ಡಾಕ್ಟರ್ ! ದುಡ್ಡಿಲ್ಲ ಎನಲೇ ? ಹೊಟ್ಟೆ ಬಟ್ಟೆಗೆ ದೇವರು ಕೊಟ್ಟಿದ್ದಾನೆ. ಅವನ ಆಸ್ತಿಪಾಸ್ತಿ ಐಶ್ವರ್ಯ ನೋಡಿ ಹುಡುಗಿ ಕೊಟ್ಟಿಲ್ಲ. ಹುಡುಗ ಚೆನ್ನಾಗಿದ್ದಾನೆ. ಅನುರೂಪ. ! ನಾಲ್ಕು ಅಕ್ಷರ ಕಲಿತಿದ್ದಾನೆ. ಎಲ್ಲಿ ಹೋದರೂ ಹೊಟ್ಟೆ ಬಟ್ಟೆ ನಡೆದೀತು. ತಾನು ಗಂಜಿ ತಿಂದಾಗ ಹೆಂಡತಿಗೆ ಅದರ ನೀರಾದರೂ ಸುರಿದಾನಲ್ಲ ಎಂದು ಬಗೆದೆವು. ದುಡಿಯ ಲಾರದ ಮುದುಕನಲ್ಲ. ಅಂಗಾಂಗ ಊನ ಜೀವಿಯಲ್ಲ. ಸಾಕು ಎಂದಂದು ಕೊಂಡೆವು. ಆದರೆ ಇವನಿಗೆ ಈ ದುರ್ಬುದ್ಧಿ ಇದೆಯೆಂದು ಯಾರು ಬಲ್ಲರು ? ಯಾರಿಗೆ ಆ ಕನಸು ಬಿದ್ದಿತ್ತು ? ಲಗ್ನವಾಗುವ ಮೊದಲು ಏನೋ ಹುಡುಗ ಬುದ್ಧಿಯಿಂದ ಜಾರಿ ಬಿದ್ದನೆಂದನ್ನೋಣ. ಆ ಮೇಲೆ ಕೂಡ ದುರ್ವ್ಯಸನ ಬಿಡಲಿಲ್ಲ. ಇದು ಅವಳ ಪೂರ್ವಜನ್ಮದ ಕರ್ಮವೋ, ನಮ್ಮ ದುರಾದೃಷ್ಟವೋ ! ಕೆಲವರು ಹೊಟ್ಟೆಗೆ ಔಷಧ ಹಾಕುತ್ತಾರಂತೆ. ತಲೆಗೆ ಎಣ್ಣೆ ಹಾಕಿ ತಿಕ್ಕುತ್ತಾರಂತೆ. ಅವನನ್ನು ಹಾಗೆ ಸಂಪೂರ್ಣ ವಶ ಪಡಿಸಿಕೊಂಡಿರಲಿಕ್ಕೇ ಬೇಕು. ಇಲ್ಲದಿದ್ದರೆ ರತ್ನದಂತಹ ಹೆಂಡತಿಯನ್ನು ಬಿಟ್ಟು ಆ ಮೂರು ಕಾಸಿನವಳಿಗೇ ಗಂಟು ಬೀಳಬೇಕಂದರೆ ಇದರರ್ಥವೇನು?

ಜಲಜಮ್ಮನವರು ಮಗಳ ಗುಣ ದೋಷಗಳನ್ನೂ ಚಿಂತಿಸುತ್ತಾರೆ. ಕಾವೇರಿ ಮಂಗಳೂರಿಗೆ ತೆರಳಿ ಮರಳಿದ ಬಳಿಕ ಅವರು ಬಹಳ ನೊಂದು ಕೊಂಡರು. ಅವಳು ಹಿಂತಿರುಗಿದುದೇ ಅವರಿಗೆ ಸರಿಯನ್ನಿಸಲಿಲ್ಲ. ತಲೆ ಯೊಳಗೆ ಅವಳು ಏನೇನೋ ಹೊಸ ವಿಚಾರಗಳನ್ನು ತುಂಬಿಕೊಂಡು ಬಂದಿ ದ್ದಳು. ಟೀಚರ್, ಡಾಕ್ಟರ್ ಆಗುವ ಈ ವಿಚಾರಗಳೆಲ್ಲ ಹುಚ್ಚೇ ಸರಿ. ಅವ ಳಿಗೆ ಈ ವಿಚಾರ ಹೇಗೆ ಹೊಳೆಯಿತೋ ಇವರಿಗೆ ಅರ್ಥವಾಗುವುದಿಲ್ಲ. ಅರ ವಿಂದ ತುಂಬಿರಲೂ ಸಾಕೆಂದು ಅವರ ಸಂಶಯ. ಆದರೆ ತಂದೆಯೂ ಮಗಳ ಮಾತಿನಂತೆ ಕುಣಿಯುತ್ತಿರುವುದನ್ನು ಕಂಡು ಅವರಿಗೆ ಸಖೇದಾಶ್ಚರ್ಯ ವಾಗಿದೆ. ಇನ್ನೂ ಅವಳು ಎಳೆ ಬಾಳೆ. ಗಂಡನಿದ್ದಾನೆ. ದಿಕ್ಕು ದಾತಾರರಿಲ್ಲ ದವರು"ಮಿಟ್ರೆಸ್"ಆಗುವುದರಲ್ಲಿ ಒಂದು ಅರ್ಥವಿದೆ.ಉದರಂಭರಣಕ್ಕೆಏನಾ

ದರೂ ಬೇಕಲ್ಲ! ನಮಗೆ ಅಷ್ಟರ ಮಟ್ಟಿನ ದುರ್ಗತಿ ಬಂದಿಲ್ಲ. ಕಲಿತು ಇವಳು ಮಾಡುವ ಶತಕೃತ್ಯಗಳಾದರೂ ಯಾವುವು? ಕಲಿಯಬೇಕಾದರೆ ಊರು ಬಿಟ್ಟು ಪರವೂರಿನಲ್ಲಿ ನೆಲೆಸಬೇಕು. ಹೋಟೇಲಿನಲ್ಲಿ ಇರುವಂತಿಲ್ಲ. ಅದಕ್ಕಾಗಿ ಬೇರೆ ಬಿಡಾರ ಮಾಡಬೇಕು. ಅಣ್ಣ ತಂಗಿ ಇಬ್ಬರನ್ನೇ ಆ ಮಂಗಳೂರು ಪಟ್ಟಣದಲ್ಲಿ ಅವರಿಚ್ಛಾನುಸಾರವಾಗಿ ಇರಲು ಬಿಡುವುದೂ ಉಚಿತವಲ್ಲ. ಅವರೊಂದಿಗೆ ನೆಲೆಸುವವರು ಯಾರು? ತಾವು ಹೋದರೆ ಈ ಮನೆ, ಆಸ್ತಿಪಾಸ್ತಿಯನ್ನು ನೋಡಿಕೊಳ್ಳುವವರಿಲ್ಲ. ಒಂದು ವೇಳೆ ಹಾಸ್ಟೆಲಿನಲ್ಲಿದ್ದು ಕಲಿತಳೆಂದನ್ನೋಣ. ಅವಳು ಸಂಪಾದಿಸಿ ಯಾರ ಹೊಟ್ಟೆ ಹೊರಬೇಕಾಗಿದೆ? ತನ್ನದೊಂದು ಹೊಟ್ಟೆ ತುಂಬಿಸಲು ಅಷ್ಟೆಲ್ಲ ಕಷ್ಟಗಳನ್ನು ಅನುಭವಿಸಬೇಕು ಯಾಕೆ? ಅದೂ ಕೆಲಸವೆಂದಾದ ಮೇಲೆ ಒಂದೇ ಊರಲ್ಲಿ ಖಾಯಂ ಇರುವಂತಿಲ್ಲ. ಒಂದೊಂದು ಊರಿನಲ್ಲಿ ಒಳ್ಳೆಯವರಿರುತ್ತಾರೆ, ಕೆಟ್ಟವರಿರುತ್ತಾರೆ. ಕಾಗೆಗಳ ಮಧ್ಯ ಸಿಲುಕಿದ ಕೋಗಿಲೆಯ ಮರಿಯ ಹಾಗೆ ಅವಳ ಸ್ಥಿತಿಯಾದೀತು. ಅವಳು ಸತಿ ಸಾವಿತ್ರಿಯ ಹಾಗಿದ್ದರೂ ಜನ ಹೆಸರು ಕೊಡದೆ ಬಿಡುವದಿಲ್ಲ. ಅವರು ಏನೇ ಹೇಳಲಿ, ಅದಕ್ಕೆ ಕಿವಿಗೊಡುವವಳಲ್ಲ ಎಂದು ಗಟ್ಟಿ ಮನಸ್ಸು ಮಾಡಿಕೊಂಡರೆ ಮಾತು ಬೇರೆ. ಆದರೆ ಮನುಷ್ಯರಾಗಿ ಹುಟ್ಟಿ ಈ ಉಪ್ಪು ಹುಳಿ ತಿಂದುಂಡ ಬಳಿಕ ಮನಸ್ಸು ಯಾವಾಗಲೂ ನಮ್ಮ ಕೈಯಲ್ಲೇ ಇರುತ್ತದೆಂದು ಹೇಳುವದೂ ಕಠಿನ. ಮನುಷ್ಯ ಸ್ವಭಾವವೇ ಹಾಗಿದೆ. ಆಗ ಏನು ಅಡ್ಡ ದಾರಿ ಹಿಡಿಯುವುದೇ? ಮತ್ತೊಬ್ಬ ಗಂಡನನ್ನು ಮಾಡಿಕೊಳ್ಳುವುದೇ? ದುರಾದೃಷ್ಟದಿಂದ ಅವನು ಇವನಿಗಿಂತಲೂ ಕೆಟ್ಟವನಾದರೆ?

ಹೌದು. ಸೇವೆ. ಟೀಚರಾದರೆ ಮಕ್ಕಳಿಗೆ ವಿದ್ಯಾಬುದ್ಧಿ ಕಲಿಸಿದಂತಾಗುತ್ತದೆ, ನಿಜ. ಡಾಕ್ಟರರಾದರೆ ರೋಗಿಗಳ ಸೇವೆ ಮಾಡಿದಂತಾಗುತ್ತದೆ. ಇದು ಪುಣ್ಯ ಕಾರ್ಯವೇನೋ ಖರೆ. ಆದರೆ ಗಂಡನ ಸೇವೆಯೂ ಒಂದು ದೊಡ್ಡ ಸೇವೆಯೇ ಆಗಿದೆ. ಅವನೂ ಒಂದು ಮಗು, ಅಥವಾ ಮೂರ್ಖ! ಅಡ್ಡ ದಾರಿ ಹಿಡಿದಿದ್ದಾನೆ. ಹಿತಮಾತುಗಳನ್ನು ಕೇಳುವುದಿಲ್ಲ. ಕೆಟ್ಟು ಹೋಗಿದ್ದಾನೆ. ಅವನನ್ನು ತಿದ್ದುವುದು ಒಂದು ದೊಡ್ಡ ಕೆಲಸ. ಅವನಲ್ಲಿ ಸುಬುದ್ಧಿಯನ್ನು ಅಂಕುರಿಸುವುದು ಸಾಹಸದ ಕಾರ್ಯ. ಇದೂ ಒಂದು ಸೇವೆ.

ಇದೂ ಒಂದು ಪುಣ್ಯ ಕಾರ್ಯ. ಪಶು ಪಕ್ಷಿಗಳಿಗೂ ತಂತಮ್ಮ ಪತಿ, ಪತ್ನಿ, ಮಕ್ಕಳು, ಬಳಗಗಳೆಂಬ ಪ್ರೀತಿ ವಾತ್ಸಲ್ಯ ಇದೆ. ಹಾಗಿರುವಾಗ ಮನುಷ್ಯರಾದವರಿಗೆ ಇಲ್ಲದಿದ್ದರೆ ಹೇಗೆ ? ಒಂದು ಮಾತಿಗೆ ಸಿಟ್ಟಾಗುವುದಲ್ಲ. ಮಾತನಾಡಿಸಲಿಲ್ಲವೆಂದು ಮುನಿಸು ತೋರಿಸುವುದಲ್ಲ. ಒಂದು ಜಗಳಕ್ಕೆ ಸಂಬಂಧ ಕಡಿದುಕೊಳ್ಳುವುದಲ್ಲ. ಬಂಧುಗಳಾದವರು ಬಡಿದಾಡುವುದಲ್ಲ. ಒಬ್ಬರಾದರೂ ಶಾಂತಗುಣ ತಾಳಬೇಕು. ತಾಳಬೇಕು ! ತಾಳಿದವನು ಬಾಳಿಯಾನು ಎಂಬ ಗಾದೆಯೇ ಇದೆಯಲ್ಲ.

ಆದುದರಿಂದ ಜಲಜಮ್ಮನವರು ತಾಳು ಎಂದು ಮಗಳಿಗೆ ಬೋಧಿಸುತ್ತಾರೆ. "ಸಹಿಸಿಕೋ. ಕಾಲ ಹೀಗೆಯೇ ಇರಲಾರದು. ಅವಳಿಗೆ ಬೇರೊಬ್ಬ ಗಂಟು ಬೀಳಬಹುದು. ಕೊನೆಕೊನೆಗೆ ನಿನ್ನ ಗಂಡನಿಗೂ ತಾತ್ಸಾರವಾದೀತು. ರೋಗರುಜೆಗಳು ಬಾರದೇ ಇರುವುದಿಲ್ಲ. ಸಂಸಾರದಲ್ಲಿ ಒಮ್ಮೊಮ್ಮೆ ಸಣ್ಣ ಪುಟ್ಟ ಜಗಳಗಳು ದೀರ್ಘಕ್ಕೆ ಹೋಗುವ ಸಂಭವವೂ ಇದೆ. ಆದುದರಿಂದ ಇಂದಲ್ಲದಿದ್ದರೆ ನಾಳೆ ಶುಭ ದಿನ ಉದಯವಾಗಬಹುದು. ಮೊದಲು ಕಷ್ಟ ಪಟ್ಟವರಿಗೆ ದೇವರು ಕೊನೆಗೆ ಇಷ್ಟಕೊಡುತ್ತಾನಂತೆ. ಎಲ್ಲವನ್ನೂ ನೋಡುವವನು ಅವನು ಇದ್ದಾನಲ್ಲ. ಅವನಿಗೆ ಸಮಸ್ತ ಸಂಗತಿಗಳೂ ಗೊತ್ತಾಗುತ್ತವೆ. ನೀನು ಸದಾ ಅವನನ್ನು ಸ್ಮರಿಸುತ್ತಿರು."

ಜಲಜಮ್ಮನವರು ಗಿಳಿಗೆ ಪಾಠ ಕಲಿಸುವಂತೆ ಕಾವೇರಿಗೆ ಪದೇಪದೇ ಹೇಳುವ ಈ ಹಿತೋಪದೇಶವನ್ನು ಗೋಪಾಲರಾಯರೂ ಆಲಿಸುತ್ತಾರೆ. ಆಗ ಅದು ನಿಜ ನಿಜ ಎಂದು ಅವರಿಗೂ ಅನ್ನಿಸುತ್ತದೆ: "ಅರವಿಂದನ ಹಾಗೆ ನೀನು ಒಬ್ಬ ಹುಡುಗನೆಂದೇ ಭಾವಿಸಿ ಕಲಿಸುತ್ತೇನೆ'' ಎಂದು ಅವರು ಹಿಂದೆ ನುಡಿದಿದ್ದರೂ ಅದು ಸರಿಯಾದ ಮಾರ್ಗವಲ್ಲವೆಂದು ಅವರ ಎದೆಯೊಳಗೊಂದು ವಿಚಾರ ಕೊರೆಯುತ್ತಿದೆ. ಪೇಟೆಯೊಳಗೆ ಹುಟ್ಟಿ ಬೆಳೆದ, ಮೊದಲಿನಿಂದಲೂ ಆ ವಿಚಾರ ಪ್ರವೃತ್ತಿಯ ಹುಡುಗಿಯರಿಗೆ ಅದು ಸಾಧ್ಯ. ಕಾವೇರಿಯಿಂದಾಗಲಾರದು. ಎಷ್ಟಾದರೂ ಹೆಣ್ಣು ಹೆಣ್ಣೇ ! ಪ್ರಕೃತಿ ಸ್ವಭಾವ ತಪ್ಪುವುದಿಲ್ಲ. . ಇವಳು ಸಣ್ಣವಳೂ ಅಲ್ಲ. ಇಷ್ಟು ದೊಡ್ಡವಳನ್ನು ಪೇಟೆಯಲ್ಲಿ ಸ್ವಚ್ಛಂದ ಬಿಡುವಂತೆಯೂ ಇಲ್ಲ" ಎಂದವರು ಚಿಂತಿಸುವರು. ಜಲಜಮ್ಮ ಹೇಳುತಿದ್ದಾಗ ಮೌನವಾಗಿ ಕೇಳುವರು. ಓದುಬರಹ

ವಿಲ್ಲದ ಅವಳು ತನಗಿಂತಲೂ ಹೆಚ್ಚು ಸಾರಾಸಾರ ವಿಚಾರ ಬಲ್ಲಳೆಂದು ಭಾವಿಸಿ ಒಮ್ಮೊಮ್ಮೆ ಅವರು ಆಶ್ಚರ್ಯ ಪಡುವುದುಂಟು. ಅಂಥ ಸಂದರ್ಭ ಗಳಲ್ಲಿ ಅವರು ಜಲಜಮ್ಮನವರೊಂದಿಗೆ ಬಾಳಿದ ಸುಖ ಸಂಸಾರದ ಸಾವಿರ ಸವಿ ದಿನಗಳನ್ನು ನೆನಸಿಕೊಳ್ಳುತ್ತಾರೆ. ಯೋಚನೆ ಒಂದು ಮೆಟ್ಟಲಿನಿಂದ ಇನ್ನೊಂದಕ್ಕೆ ಏರುತ್ತದೆ. ಸುತೆ, ಸತಿ, ಮಾತೃಶ್ರೀಯಾಗಿ ಹೆಣ್ಣು, ಜೀವ ನದ ಅನೇಕ ರಂಗಗಳಲ್ಲಿ ಕುಣಿಯುವುದನ್ನು ಅವರು ಕಾಣುತ್ತಾರೆ. ಈ ಸ್ತ್ರೀ ಆದಿಮಾಯೆಯ ಅವತಾರವೆಂಬ ಅರಿವುಂಟಾಗುತ್ತದೆ. ತನ್ನ ಹೆಂಡತಿ ಯ ಮೇಲೆ ಕೂಡ ಬಹಳ ಪೂಜನೀಯ ಭಾವ ಬರುತ್ತದೆ.

ಆದರೆ ಇದು ಒಂದು ಕ್ಷಣ. ಇನ್ನೊಂದು ಕ್ಷಣ ಅಧೈರ್ಯವಾಗುತ್ತದೆ. ಸುಖದ ಕಾಲವನ್ನು ಕಾವೇರಿ ಎಷ್ಟರ ವರೆಗೆ ನಿರೀಕ್ಷಿಸಬೇಕು? ಕೊನೆಗಾ ದರೂ ಅದು ಒದಗಿ ಬಂದೀತೇ? ಕೇವಲ ಕಲ್ಪನೆಯ ಕುದುರೆಯ ಬೆನ್ನೇ ರಿದಂತಾಗಲಾರದೇ? ಅವಳಲ್ಲದಿದ್ದರೆ ಇನ್ನೊಬ್ಬಳು. ಹತ್ತು ರೂಪಾಯಿಯ ನೋಟು ಎಸೆದರೆ ಬೆನ್ನು ಹತ್ತುವ ಹಾತೆಗಳಿಗೆ ಪೇಟೆಯಲ್ಲೇನು ಕಡಿಮೆ ಯಿಲ್ಲ. ಅವನ ಒಲವು ಈ ಕಡೆ ಹರಿದೀತೆಂಬ ನಿಯಮವಿಲ್ಲ. ಜೀವನದ ರಂಗದಲ್ಲಿ ಅನೇಕ ವರುಷಗಳ ವರೆಗೆ ಅನಂತ ಪೆಟ್ಟುಗಳನ್ನು ತಿಂದು, ರೋಗ ರುಜೆಗಳಿಂದ ನರಳಿ, ಕೈಕಾಲು ಬಿದ್ದು, ತಲೆ ಹಣ್ಣಾಗಿ, ಜೀವ ಹಣ್ಣಾದಾಗ, ಕೈಯಲ್ಲಿದ್ದ ಹಣ ಮಣ್ಣುಗೂಡಿದಾಗ ಕೈಹಿಡಿದವಳ ಸೇವಾಕಾಂಕ್ಷೆಯಾಗ ಬಹುದೋ ಏನೋ! ಈ ಯೌವನ, ಈ ಕಾಂಚನ, ಈ ದುರ್ವ್ಯಸನಗಳ ಕೊಬ್ಬು ಮಬ್ಬಿನಲ್ಲಿ ಪಶ್ಚಾತ್ತಾಪದ ಸಂದರ್ಭ ಸಂಭವಗಳು ಕಡಿಮೆಯೇ ಸರಿ. ದುರಾಚಾರಿಗಳ ಹಣೆಬರಹ ಅಷ್ಟು. ದೇವರೇ ಅವರನ್ನು ಸುಲಿದು ಸೋಲಿಸಿ ಹೆಂಡತಿಯನ್ನು ಪ್ರೀತಿಸುವಂತೆ ಪ್ರೇರೇಪಿಸಬೇಕಲ್ಲದೆ ಅನ್ಯತ್ರ ಗತಿ ಇಲ್ಲ.

ಹೀಗೆ ಗೋಪಾಲರಾಯರು ದೇವರ ಮೇಲೆ ಭಾರ ಹಾಕಿದರೇನೋ ನಿಜ. ಆದರೆ ದೇವರ ಪೂಜೆ ಮಾಡುವಾಗಲೂ ಮಂತ್ರ ಮರೆತು ಕಾವೇರಿಯ ನೆನಪಾಗುತ್ತದೆ. ಹೂ ತುಳಸಿ ಏರಿಸುವ ಕೈ ಅರ್ಧದಲ್ಲೇ ನಿಲ್ಲುತ್ತದೆ. ಬೆಳಿಗ್ಗೆ ಉದಯರಾಗ ಹೇಳಲು ಹಾಸಿಗೆಯ ಮೇಲೆ ಕುಳಿತವರು ಹಾಡುತ್ತ ಹಾಡುತ್ತ ಆ ಸೊಲ್ಲು ಪಲ್ಲವಿಗಳನ್ನು ನಿಲ್ಲಿಸಿ ಬಿಡುವರು. ತನ್ಮಧ್ಯ ಮಗಳ

ಚಿಂತೆಯಾಗುತ್ತದೆ. ಸಾಯಂಕಾಲ ರಾಮನಾಮ ಪಠನ ನಡೆದಾಗಲೂ ಥಕ್ಕನೇ ಧ್ಯಾನ ಕಾವೇರಿಯದಾಗುತ್ತದೆ. ಒಮ್ಮೊಮ್ಮೆ ಮನೆಯ ಚಾವಡಿ ಯಲ್ಲಿ ಕುಳಿತು ಆ ಇದಿರಿಗಿರುವ "ಬಲ್ಲಾಳರಾಯನ ದುರ್ಗ" ಗಟ್ಟವನ್ನು ದಿಟ್ಟಿಸುವರು. ಆಗ ಅವರಿಗೆ ಥಕ್ಕನೇ ಗೋವರ್ಧನ ಗಿರಿಯು ನೆನಪಾಗು ತ್ತದೆ. ಗಿರಿಯ ತಳದಲ್ಲಿರುವ ತಾವೂ ಗೋವು ಸಮಾನ. ಸಂಕಟಕ್ಕೊಳ ಗಾದವರು. ಆದುದರಿಂದ "ಗಿರಿಧರನೆ ರಕ್ಷಿಸಯ್ಯಾ" ಎಂದು ಅವರು ಮೊರೆ ಯಿಡುವರು. ಕಂಬನಿಯ ಹನಿಗಳು ಕಡೆಗಣ್ಣಿನಿಂದ ಇಳಿದು ಹೋಗುತ್ತದೆ.

ಗೋಪಾಲರಾಯರು ಈ ರೀತಿ ದುಃಖಾಂಬುಧಿಯಲ್ಲಿ ತೊಳಲಾಡುತಿ ದ್ದಾಗಲೇ ಒಂದು ದಿನ ಅರವಿಂದನ ಪತ್ರ ಬಂದಿತು. ಅದರಲ್ಲಿ ಆನಂದ ರಾಯನ ವೃತ್ತಾಂತವಿತ್ತು.

ಆನಂದರಾಯ ಒಂದು ವಾರ ವಾಸಂತಿಯ ದಾರಿ ನೋಡಿದ; ಎರಡು ವಾರ ನೋಡಿದ. ಆದರೆ ಅವಳ ಸುಳಿವಿಲ್ಲ. ಅವಳು ಸಿಟ್ಟಾಗಿಯೇ ಹೋದ ಳೆಂದು ಅವನಿಗೆ ಖಚಿತವಾಯ್ತು. ಹೋದಮೇಲೆ ಒಂದು ಪತ್ರವನ್ನೂ ಬರೆ ಯಲಿಲ್ಲವೆಂದು ಅವನು ಚಿಂತಿಸಿದಾಗ ಚಂದ್ರಾವತಿಯ ಒಂದು ಕಾರ್ಡು ಬಂತು. ಅದರಲ್ಲಿ ಊರಿಗೆ ಬಂದು ಹೋಗಲು ತಾಯಿ ಮಗಳಿಗೆ ಬರೆದಿ ದ್ದಳು. ಅದನ್ನೋದಿ, ವಾಸಂತಿ ಉಡುಪಿಗೆ ಹಿಂತೆರಳಿಲ್ಲವೆಂದು ಆನಂದ ರಾಯ ಕಂಡುಕೊಂಡ. ಹಾಗಿದ್ದರೆ ನೆರಮನೆಯವರು ಹೇಳಿದುದು ಅಸ ತ್ಯವೇ ? ಇರಲಿಕ್ಕಿಲ್ಲ. ವಾಸಂತಿ ಆ ರೀತಿ ಸುಳ್ಳಾಡಿದಳೇ ? ಸುಳ್ಳು ಹೇಳಿ ಇಲ್ಲಿಂದ ಹೋದಳಾದರೂ ಎಲ್ಲಿಗೆ ? ಅವಳನ್ನು ಕರೆದೊಯ್ಯಲು ಬಂದವರು ಯಾರು ? ಹೀಗೆ ಯೋಚಿಸಿದ ಆನಂದರಾಯನಿಗೆ ವಾಸಂತಿಯ ಮೇಲೆ ಒಮ್ಮೆ ದ್ರೋಹದ ಅಪನಂಬಿಕೆಯೂ ಉಂಟಾಯಿತು. " ಈ ಮಂಗಳೂರು ನಗರದಲ್ಲಿ ಅವಳು ವಾಸಿಸಲಾರಂಭಿಸಿ ಬಹಳ ಕಾಲವಾಯ್ತು. ಸ್ವಲ್ಪ ಸಮಯ ಒಬ್ಬಳೇ ಇರುತಿದ್ದಳು. ನಾನು ಬೆಳ್ತಂಗಡಿಯಲ್ಲಿದ್ದಾಗ ಅಪರೂ ಪಕ್ಕೊಮ್ಮೆ ಬರುತಿದ್ದೆ. ಆದುದರಿಂದ ಬೇರೆ ಯಾರಾದರೂ ಗಂಟು ಬಿದ್ದಿ ರಲೂ ಸಾಕು. ಅದು ಅಸಂಭವವೇನೂ ಅಲ್ಲ. ಹೇಳಿ ಕೇಳಿ ಸೂಳೆ. ಸ್ವತಃ ನನ್ನ ಕೈಗೆ ಬರುವ ಮೊದಲು ಎಷ್ಟು ಜನರ ಕೈಗೆ ಹೋಗಿತ್ತೋ ! ಹಾಗಾ ದುದರಿಂದಲೇ ಡಾಕ್ಟರನ ಸಹಾಯಕ್ಕೆಂದು ಅವಳ ತಾಯಿ ಬಂದಳು. ವಾರಿ

ಧಿಯಂತೆಯಂತೆ ಈ ನಾರೀ ಹೃದಯದ ಆಳವನ್ನು ಹೇಳುವುದು ಅಶಕ್ಯ!"

ಎದೆಯೊಡೆದ ಆನಂದರಾಯ ಒಮ್ಮೆ ಹೀಗೆ ಆಲೋಚಿಸಿದರೆ ಇನ್ನೊಮ್ಮೆ ತನ್ನ ಮಾವನ ಮೇಲೆ ಸಂಶಯ ಬೇರೂರಿತು. "ಅದೇ ಸಮಯಕ್ಕೆ ಅವರು ಇಲ್ಲಿದ್ದರು. ವಾಸಂತಿಯನ್ನು ಹಾರಿಸಿದರೆ ಕಾವೇರಿಯ ಕಂಟಕ ಹೋಯಿತೆಂದು ಬಗೆದಿರಲು ಸಾಕು. ತಂದೆ ಮಗ ಕೂಡಿ ಆ ಸುಳ್ಳು ನೆವ ಹೇಳಿ ಅಪಹರಿಸಿರಬಹುದು. ಮೋಟಾರ್ ಕಾರಿನಲ್ಲಿ ರಾತ್ರಿ ಬಂಗಾಡಿಗೆ ಕರೆದೊಯ್ದಿದ್ದರೆ ಯಾರಿಗೆ ಗೊತ್ತಾಗುತ್ತದೆ? ಕುತ್ತಿಗೆ ಹಿಚುಕಿ ಮುಲೆಯಲ್ಲಿ ಒಗೆದರೆ ಕೇಳುವವರಿಲ್ಲ. ಹುಗಿದು ಮೇಲೆ ಒಂದು ತೆಂಗಿನ ಸಸಿ ನೆಟ್ಟರೆ ಗಂಧಗಾಳಿಯೂ ಬೇರೆಯವರ ಮೂಗಿಗೆ ಬೀಸಲಾರದು. ಗೋಪಾಲರಾಯರು ಅಂದು ತೋರಿದ ರಾಪು ನೋಡಿದರೆ ಹಾಗಿತ್ತು. ಮೋರೆ ಕೆಂಪಗಾಗಿತ್ತು. ಏನು ಸಿಟ್‌ಸಿಟ್ಟು ಮಾತನಾಡಿದರು!'' ಎಂದು ಅವನು ಅವರಾಡಿದ್ದ ಮಾತುಗಳೊಂದಂದನ್ನೇ ಪರಿಭಾವಿಸಿದ. ಆಗ "ಆ ರಂಭೆಯೊಂದಿಗೆ ನೀವು ಮೆರೆಯುವುದನ್ನು ನೋಡಿಯೇ ಬಿಡುತ್ತೇವೆ" ಎಂದು ಗೋಪಾಲರಾಯರು ಗರ್ಜಿಸಿದ್ದುದನ್ನು ನೆನಸಿ ಇದು ಅವರದೇ ಕಾರ್ಬಾರ್ ಎಂದು ಖಚಿತಮಾಡಿಕೊಂಡ.

ಸಿಟ್ಟು ನೆತ್ತಿಗೇರಿದ ಒಂದು ದಿನ ಅವನು ಅರವಿಂದನ ಹಾಸ್ಟೆಲ್ ಹುಡುಕಿಕೊಂಡು ಬಂದ. ಮತ್ತು ಅಲ್ಲಿ ಭಾವ ಮೈದುನರೊಳಗೆ ದೊಡ್ಡ ಜಗಳವೇ ಆಯಿತು.

"ಪೋಲೀಸರಿಗೆ ಅರ್ಜಿ ಮಾಡುತ್ತೇನೆ. ನನ್ನ ಸರ್ವಸ್ವ ಹೋದರೂ ಪರವಾ ಇಲ್ಲ. ನಿನ್ನನ್ನೂ ನಿನ್ನ ಅಪ್ಪನನ್ನೂ ಜೈಲಿಗೆ ಕಳಿಸುತ್ತೇನೆ'' ಎಂದು ಕೂಗಿದ.

"ನೀವು, ತಾವು" ಬಹುವಚನದ ಮಾತು "ನೀನು, ಅವನು" ಏಕವಚನಕ್ಕೆ ಇಳಿಯಿತು.

"ಓಹೋ! ಅರ್ಜಿ ಮಾಡು. ಅಗತ್ಯ. ನಾವೂ ಒಂದು ಕೈ ನೋಡುತ್ತೇವೆ. ನಾವೇ ಜೈಲಿಗೆ ಹೋಗುತ್ತೇವೋ, ನಿನ್ನನ್ನೇ ಕಳಿಸುತ್ತೇವೋ ನೋಡೋಣ!"

"ನನ್ನನ್ನು ಏನು ಕಳಿಸುತ್ತೀರಿ, ಅಮಟೆ ಕಾಯಲ್ಲ ಅದು!''

"ನಮ್ಮನ್ನು ಕಳಿಸುವುದೂ ಮಾವಿನ ಗೊರಟಲ್ಲ. ತಾನೇ ಅವಳನ್ನು ಕೊಂದು ಡೋಂಗಿ ಮಾಡುತ್ತಾನೆಂದು ಸಾಧಿಸುತ್ತೇವೆ. ಆಗ ನಿನ್ನ ತುರುಬು ಔಟಾಗುತ್ತದೆ!"

"ಆಗಲಿ"

"ಆಗಲಿ, ನಾವೂ ಚಳಿ ಬಿಟ್ಟು ನಿಂತಿದ್ದೇವೆ. ಇಡೀ ಮುಳುಗಿದವರಿಗೆ ಚಳಿಯೇನೂಂತ?''

ಮಾತಿಗೆ ಮಾತು ಸೇರಿ ಅದು ಕೈಗೆ ಕೈ ಹತ್ತುವ ಪ್ರಸಂಗ. ಆದರೆ ಹಾಸ್ಟೆಲಿನ ಇನ್ನಿತರ ಹುಡುಗರೇ ಆ ಪರಿಸ್ಥಿತಿ ಕೈಮೀರಿ ಹೋಗಲು ಬಿಡ ಲಿಲ್ಲ. ಅರವಿಂದನನ್ನು ಬೇರೊಂದು ಕೋಣೆಗೆ ಕರೆದೊಯ್ದರು. "ಇದು ಹಾಸ್ಟೆಲ್. ಇಲ್ಲಿ ಬಂದು ಜಗಳ ಮಾಡಬೇಡಿರಿ. ಅಸಹ್ಯವಾಗುತ್ತದೆ'' ಎಂದು ಹೇಳಿ ಆನಂದರಾಯನನ್ನು ಮೆಲ್ಲಗೆ ಗೇಟಿನ ವರೆಗೆ ಕರೆತಂದು ಹೊರಗೆ ನೂಕಿದರು.

ಅರವಿಂದ ತನ್ನ ಪತ್ರದಲ್ಲಿ ಇದರ ವಿವರವೆಲ್ಲವನ್ನೂ ಕೊಟ್ಟು ಬಂಗಾಡಿಗೂ ಆನಂದರಾಯ ಬರಬಹುದೆಂದು ಕಾಣಿಸಿದ್ದ. ಅವನ ಊಹೆ ಯಂತೆ ಆನಂದರಾಯ ನೋಡಿ ಬರಲು ಬಂಗಾಡಿಗೆ ಹೊರಟನೇನೋ ನಿಜ. ಆದರೆ ಬೆಳ್ತಂಗಡಿಯ ಆಚೆ ಕಾಲು ಚಾಚಲು ಧೈರ್ಯವಾಗಲಿಲ್ಲ. ಬೆಳ್ತಂಗಡಿ ಯಲ್ಲಿ ಒಂದು ರಾತ್ರಿ ಅವನು ಉಳಿದು ಆದಷ್ಟು ಬಂಗಾಡಿಯ ಸುದ್ದಿ ಸಮಾಚಾರಗಳನ್ನು ಸಂಗ್ರಹಿಸಲೆತ್ನಿಸಿದ. ಆದರೆ ವಾಸಂತಿ ಅಥವಾ ಇನ್ನಾವ ಅಂತಹ ಸ್ತ್ರೀಯ ಸುಳುವು ಹೊಳವು ಹತ್ತಲಿಲ್ಲ. ''ಪತ್ತೇದಾರಿ ಕಾದಂಬರಿಯೊಳಗಿನ ಗೂಢ ಘಟನೆಯಂತಾಯಿತಲ್ಲ, ಇದು'' ಎಂದವನು ಚಿಂತಾತುರದಿಂದ ಕಾಲಹರಣ ಮಾಡುತಿದ್ದಾಗಲೇ ಒಂದು ದಿನ ಸಾಯಂ ಕಾಲ ತಂತಿ ಬಂತು.

"ವಾಸಂತಿಗೆ ಪ್ರಾಣಸಂಕಟ. ಮೂಡುಗೆರೆಗೆ ಕಾರು ತಾ. ತಕ್ಷಣ ಬಾ. –ನಾರಾಯಣ."

ಆನಂದರಾಯ ತಂತಿಯನ್ನು ಎರಡು ಸಲ ಕೂಡ ಓದಲಿಲ್ಲ. ಭಾವ ನಾವೇಶದಿಂದ ತೊಟ್ಟ ಬಟ್ಟೆಯಲ್ಲಿಯೇ ಮೋಟಾರ್ ನಿಲ್ದಾಣಕ್ಕೆ ಹೋದ. ಬಾಡಿಗೆ ಮೋಟಾರ್ ಕಾರಿನಲ್ಲಿ ಕುಳಿತ ಮೇಲೆ ಕಿಸೆಯಲ್ಲಿದ್ದ ತಂತಿಯನ್ನು

ತೆಗೆದು ಪುನಃ ಪುನಃ ಓದಿದ. ವಾಸಂತಿ ಬಾವಿಗೆ ಹಾರಿದಳೇ? ವಿಷಪಾನ ಮಾಡಿದಳೇ?

ವಾಸಂತಿ ನೀರು ತರಲು ಕತ್ತಲೆಯಾದ ಮೇಲೆ ಬಾವಿಕಟ್ಟೆಗೆ ಹೋಗುತಿದ್ದಾಗ ನಾಲ್ವರು ಬಂದು ಅವಳನ್ನು ಮುತ್ತಿದರು. ಒಬ್ಬನು ಅವಳ ಬಾಯಿ ಬಿಗಿಹಿಡಿದು ವಸ್ತ್ರವನ್ನು ತುರುಕಿದ. ಹೀಗಾಗಿ ಅವಳಿಗೆ ಕೂಗಲು ಆಗಲಿಲ್ಲ. ಆ ಮೇಲೆ ಅವರು ಒಂದು ಕಂಬಳಿ ಸುತ್ತಿ ಅವಳನ್ನು ಹೊತ್ತುಕೊಂಡು ಹೋದರು. ನಸು ಬೆಳಿಗ್ಗೆ ವಾಸಂತಿ ಬಾವಿಕಟ್ಟೆಯ ಬಳಿ ಬಿದ್ದುಕೊಂಡಿದ್ದಳು. ಹೆಚ್ಚಿನವರಿಗೆ ಅವಳು ಯಾರೆಂಬೂ ತಿಳಿದಿರಲಿಲ್ಲ. ನಾರಾಯಣ ವೈದ್ಯರಿಗೆ ಸುದ್ದಿ ಮುಟ್ಟಿದುದರಿಂದ ಅವರೂ ಧಾವಿಸಿದರು.

ವಾಸಂತಿಯನ್ನು ಕಂಡು ನಾರಾಯಣ ಸ್ತಂಭೀ ಭೂತನಾದ. ಮೈ ಮೇಲಿನ ಸೀರೆ ಹರಿದಿದೆ. ಕರಿಮಣಿಯನ್ನು ಕಡಿದು ಸೆಳೆದುಕೊಂಡಿರು ವರು. ಕೈಯ್ಯ ಬಳೆಗಳೂ ಒಡೆದಿವೆ. ಅವಳ ದೇಹದ ಕೆಳಭಾಗ ರಕುತಮ ಯವಾಗಿದೆ. ಇನ್ನೂ ಟುಕು ಟುಕು ಜೀವ ಇದೆ. ಆದುದರಿಂದ ನಾರಾಯಣ ಬೇಗನೇ ಅವಳನ್ನು ಮನೆಗೆ ಹೊರಿಸಿಕೊಂಡು ಬಂದು ಉಪಚಾರ ಮಾಡಿದ ಮತ್ತು ಆನಂದರಾಯನಿಗೆ ತಂತಿ ಕೊಟ್ಟ.

ಆನಂದರಾಯ ಕತ್ತಲೆ ಕತ್ತಲೆಯಾದಾಗ ಮೂಡುಗೆರೆ ಮುಟ್ಟಿದ. ವಿಚಾರಿಸಿಕೊಂಡು ಅವನು ನಾರಾಯಣನ ಮನೆಗೆ ಬಂದ. ಕೋಣೆಯಲ್ಲಿ ಒಂದು ದೀಪವನ್ನು ಹಚ್ಚಿಡಲಾಗಿತ್ತು. ಹಾಸಿಗೆಯಲ್ಲಿ ವಾಸಂತಿ ಮಲಗಿದ್ದಳು. ಅವಳ ಕುತ್ತಿಗೆಯ ವರೆಗೆ ಕಂಬಳಿ ಹೊದೆಸಲಾಗಿದೆ. ಆನಂದರಾಯ ಬಂದೊ ಡನೆ ಮೋರೆಯನ್ನು ಅವನ ಕಡೆ ಬಾಗಿಸಿದಳು. ಅವನು ಅವಳ ಕೈಯನ್ನು ಹಿಡಿದು ನಾಡಿ ಬಡಿತ ಪರೀಕ್ಷಿಸಿದ. ಆ ಮೇಲೆ ಅವಳ ಬಳಿಯಲ್ಲೇ ತಲೆ ತಗ್ಗಿಸಿ ಕುಳಿತುಕೊಂಡ. ಅವಳು ಸಂಜ್ಞೆಯಿಂದ ಅವನನ್ನು ಇನ್ನೂ ಹತ್ತಿರ ಕರೆದು ಪಿಸುಗುಟ್ಟಿದಳು.

"ನಾನು ಸಾಯುತ್ತೇನೆಯೇ, ಬದುಕುತ್ತೇನೆಯೇ ?"

ಅವಳ ಪ್ರಶ್ನೆಯಿಂದ ಆನಂದರಾಯನಿಗೆ ದುಃಖವಾಯಿತು. "ನೀನು ಬದುಕುತ್ತೀ" ಎಂದು ಅವನು ಹೇಳಿದ.

"ಸುಳ್ಳು ಹೇಳುತ್ತೀರಿ. ನಾನು ಬದುಕುವುದಿಲ್ಲ. ನನಗೆ ಇಷ್ಟವೂ

ಇಲ್ಲ."

"ಯಾಕೆ ಹೀಗನ್ನುತ್ತೀ?"

ವಾಸಂತಿಯ ಕಡೆಗಣ್ಣಿನಿಂದ ನೀರಿಳಿಯ ತೊಡಗಿತು. ಆನಂದರಾಯ ತನ್ನ ಕರವಸ್ತ್ರದಿಂದ ಅದನ್ನು ಒರಸಿದ.ಆಗ ಅವಳು ಅವನ ಕೈಯನ್ನು ಒತ್ತಿ ಹಿಡಿದು ಹೇಳಿದಳು: "ನನ್ನನ್ನು ಇಲ್ಲಿಂದ ಕರೆದುಕೊಂಡು ಹೋಗಿರಿ. ನಾನು ಇಲ್ಲಿರಲಾರೆ. ದಮ್ಮಯ್ಯ !"

"ಆಗಲಿ" ಎಂದು ಆನಂದರಾಯ ಹೇಳಿ ಎದ್ದು ಬಂದು ನಾರಾಯಣ ನೊಡನೆ "ಕರೆದೊಯ್ಯೋಣವೇ ?" ಎಂದು ಕೇಳಿದ.

"ನನ್ನ ಅಡ್ಡಿ ಏನೂ ಇಲ್ಲ"--ಅವನು ಉತ್ತರವಿತ್ತ.

ಆನಂದರಾಯ ಮತ್ತೊಮ್ಮೆ ಅವಳ ದೇಹ ಪರೀಕ್ಷೆ ನಡೆಸಿ ಕರೆದೊಯ್ಯಲು ನಿರ್ಧರಿಸಿದ. ಮೋಟಾರ್ ಕಾರಿನಲ್ಲಿ ಅಷ್ಟು ತೊಂದರೆ ಆಗಲಾರದೆಂದು ಅವನೆಣಿಕೆ. ಅದರ ಹಿಂಬದಿಯಲ್ಲಿ ಹಾಸಿಗೆ ಹಾಸಿ ವಾಸಂತಿಯನ್ನು ಮಲಗಿಸಿದರು. ನಾರಾಯಣ ಅವಳ ಟ್ರಂಕು ಮತ್ತು ಇನ್ನಿತರ ಸಾಮಾನುಗಳನ್ನೂ ತಂದಿರಿಸಿದ. ವಾಸಂತಿ ಅವನನ್ನು ಹತ್ತಿರ ಕರೆಸಿ ಹೇಳಿದಳು: "ನೀನೂ ಬಾ."

ನಾರಾಯಣನ ಕಣ್ಣುಗಳಲ್ಲಿ ನೀರು ಬಂದಿತು. ಅವನು ಕಾರಿನ ಹೊರಗೆ ಬಂದು ಅದಕ್ಕೆ ಬೆನ್ನು ಹಾಕಿ ಕತ್ತಲೆಯ ಕಡೆ ನೋಡುತ್ತ ನಿಂತ. ಮೋಟಾರು ಹೊರಟು ಹೋದ ಮೇಲೆಯೂ ಅವನು ಸ್ವಲ್ಪ ಹೊತ್ತಿನ ವರೆಗೆ ಅಲ್ಲೇ ಕಂಭದಂತೆ ನಿಂತ. ಅವನು ಆ ಸ್ಥಳದಲ್ಲಿ ಕರಗಿ ನೀರಾಗಿ ಭೂಮಿಯೊಳಗೆ ಇಂಗಿಹೋದನೇ, ಕತ್ತಲೆಯಲ್ಲಿ ಕೂಡಿಕೊಂಡನೇ, ಯಾರಿಗೂ ಗೊತ್ತಾಗಲಿಲ್ಲ. ಅವನೂ ಕಾರಿನಲ್ಲಿ ಹೊರಟು ಹೋದನೆಂದು ಕೆಲವರು ಹೇಳಿದರು. ಲಾರಿ ಹತ್ತಿದನೆಂದು ಆಡಿಕೊಳ್ಳುವವರೂ ಇದ್ದಾರೆ. ಅವನು ಜೀವಂತ ಇದ್ದರೆ ಮುಯ್ಯಿತೀರಿಸಿಕೊಳ್ಳಬಹುದೆಂದು "ಶತ್ರುಗಳು" ಕೊಂದು ಎಲ್ಲೋ "ಗಪ್" ಮಾಡಿದರೆಂದು ಗುಸುಗುಸು ಪಿಸುಗುಟ್ಟುವವರಿಗೂ ಕಡಿಮೆಯಿಲ್ಲ. ಅದೇನಿದ್ದರೂ ಮೂಡುಗೆರೆಯಲ್ಲಿ ಮತ್ತೆ ನಾರಾಯಣ ವೈದ್ಯರನ್ನು ಯಾರೂ ಕಾಣಲಿಲ್ಲ.

## ೨೧ನೇಯ ಅಧ್ಯಾಯ

ಆನಂದರಾಯ ವಾಸಂತಿಯನ್ನು ಮೋಟಾರಿನಲ್ಲಿ ಹಾಕಿಕೊಂಡು ಹೊರಟಿದ್ದಾನೆ. ಅವಳ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಕುಳಿತಿರುವನು ಅವಳ ಕೂದಲುಗಳು ಕೆದರಿವೆ. ಮೋರೆ ನಿಸ್ತೇಜವಾಗಿದೆ. ತೇಜಃಪುಂಜವಾದ ಕಣ್ಣಾಲಿಗಳು ಬಳಲಿವೆ. ತುಟಿ ಒಣಗಿದೆ. ಹಿಂದಿನ ವಾಸಂತಿಗೂ ಈ ವಾಸಂತಿಗೂ ಎಷ್ಟು ಭೇದ ಕಾಣುತ್ತದೆ! ಫಕ್ಕನೆ ನೋಡಿದವರಿಗೆ ಗುರುತು ಪರಿಚಯವೂ ಸಿಗಲಾರದು. ಇವಳು ಬದುಕಬಹುದೇ ಎಂದು ಅವನೂ ಚಿಂತಾಕ್ರಾಂತನಾಗಿದ್ದಾನೆ. ಎಲ್ಲಕ್ಕಿಂತಲೂ ಅವಳ ಮನಸ್ಸಿನ ಮೇಲೆ ಬಹಳ ಆಘಾತವಾದಂತಿದೆ. ಗಾಡಿ ಓಡುತ್ತಿರುವಾಗ ಮೈ ಅಲುಗುತ್ತಿರುವುದರಿಂದ ಪುನಃ ರಕುತಸ್ರಾವದ ಭಯವೂ ಇದೆ. ಹೃದಯ ವಿಕಾರದ ಸಂಭವವಿದೆ. "ಹೇಗಾದರೂ ಮಂಗಳೂರಿಗೆ ಹೋಗಿ ಮುಟ್ಟಿದರೆ ಸಾಕು. ಮತ್ತೇನಾದರೂ ಆಗಲಿ" ಎಂದು ಅವನು ಯೋಚಿಸುತಿದ್ದಾನೆ.

ಆದರೆ ಸ್ವಲ್ಪ ದೂರ ತೆರಳಿದ ಬಳಿಕ ವಾಸಂತಿ ಹೇಳಿದಳು: "ನನ್ನನ್ನು ಉಡುಪಿಗೆ ಕರೆದೊಯ್ಯಿರಿ. ತಾಯಿಯನ್ನು ಒಮ್ಮೆ ನೋಡಬೇಕೆಂಬಾಸೆ ಇದೆ".

ವಾಸಂತಿಯ ಈ ಮನದಾಸೆಯನ್ನು ಕೇಳಿ ಅವನಿಗೆ ಪರಿತಾಪವಾಯಿತು. ಉಡುಪಿಗೆ ಹೋಗಲು ಅವನಿಗೆ ಮೋರೆಯಿಲ್ಲ. ವಾಸಂತಿ ಚೆನ್ನಾಗಿದ್ದರೆ ಆ ಮಾತು ಬೇರೆ. ಈ ಅವಸ್ಥೆಯಲ್ಲಿ ಅವಳನ್ನು ಅಲ್ಲಿಗೆ ಮುಟ್ಟಿಸಲು ಅವನಿಗೆ ಇಷ್ಟವಿಲ್ಲ. ಚಂದ್ರಾವತಿ ಅವನನ್ನು ಸುರಕ್ಷಿತ ಹೋಗಗೊಡಲಿಕ್ಕಿಲ್ಲ. ಆದುದರಿಂದ ಅವನು ಇದಕ್ಕೇನುಪಾಯವೆಂದು ಹುಡುಕಿ ನುಡಿದ: "ಉಡುಪಿಗೆ ಬೇಡ. ಅಲ್ಲಿ ನಿನ್ನ ತಾಯಿ ಇಲ್ಲ. ಮುಂಬಯಿಗೆ ಹೋಗಿರುವಳಂತೆ. ಮಂಗಳೂರಿಗೆ ಹೋಗೋಣ. ಹೇಗೂ ಅಲ್ಲಿ ಮನೆಯಿದೆಯಲ್ಲ!"

ಆಗ ವಾಸಂತಿಗೆ ಕಾವೇರಿಯ ನೆನಪಾಯಿತು. "ಅಲ್ಲಿ ಕಾವೇರಿ ಇದ್ದಾಳೆಯೇ?" ಎಂದು ಕೇಳಿದಳು.

"ಇಲ್ಲ. ನೀನು ಏನೂ ಚಿಂತಿಸಬೇಡ. ಅವಳನ್ನು ಹತ್ತಿರ ಬರಗೊಡಿಸುವುದಿಲ್ಲ"

ಆ ಉತ್ತರದಿಂದ ಈಗ ವಾಸಂತಿಗೆ ಸ್ವಲ್ಪ ದುಃಖವೇ ಆಯಿತು. ವಾಸಂತಿ ಮೂಡುಗೆರೆಗೆ ಬಂದಂದಿನಿಂದ ತನ್ನ ಜೀವನವನ್ನೆಲ್ಲ ಪರಿಭಾವಿಸಿರುವಳು. ಆನಂದರಾಯನೂ ಅದರಲ್ಲಿ ಬಂದ. ಅವನ ನಡತೆಯೂ ಅವಳಿಗೆ ಹರುಷವನ್ನೀಯಲಿಲ್ಲ. ತಮ್ಮನಾದ ನಾರಾಯಣನ ಮೇಲಂತೂ ಅವಳಿಗೆ ಲವಲೇಷವೂ ಪ್ರೀತಿ ಉಳಿಯಲಿಲ್ಲ. ಅವನಿಂಥ ನಿರ್ಲಜ್ಜ, ನೀಚನೆಂದು ಅವಳು ಊಹಿಸಿಯೇ ಇರಲಿಲ್ಲ. ಬೋರೇಗೌಡರ ದುರಾಚಾರವೂ ಅವಳನ್ನು ಕೆಣಕಿತು. ಪುರುಷರ ಪ್ರೀತಿ ನೀತಿ ಗಳ ಮೇಲೆ ಅವಳಲ್ಲಿ ತಾತ್ಸಾರ ಮೂಡಿತು. ಸ್ತ್ರೀ ನಿಜವಾಗಿಯೂ ದೃಢ ಮನೋವೃತ್ತಿಯವಳೂ ಧೈರ್ಯವಂತಳೂ ಆಗಿರಬೇಕೆಂದು ಅವಳು ಕಂಡಳು. ಒಂದು ಕ್ಷಣವಾದರೂ ಚಿಂತಿಲ್ಲ, ಅವಳು ಆ ರೀತಿಯು ದಿಟ್ಟತನ ತೋರಿದುದರಿಂದಲೇ ಬೋರೇಗೌಡನ ಕೈಗೆ ಸಿಗಲಿಲ್ಲ. ಹೊಡೆಯಲು ಬಂದ ನಾರಾಯಣನ ಕೈಯಿಂದಲೂ ಉಳಿದುಕೊಂಡಳು. ಪುರುಷನ ಈ ಪಾಶವೀ ಶಕ್ತಿಯ ಗುಲಾಮರಾಗಬಾರದು. ಹೆಣ್ಣನ್ನು ಕೇವಲ ಒಂದು ಭೋಗ್ಯ ವಸ್ತುವಾಗಿ ಕಾಣುತ್ತಿರುವ ಪುರುಷನಿಗೆ ಮಣಿಯ ಬಾರದು. ಹಾಗಾದರೆ ಮಾತ್ರ ದಾರಿಗೆ ಬರುತ್ತಾರೆ; ಬಾಗುತ್ತಾರೆ.

ಹೀಗೆ ಯೋಚಿಸಿದ ವಾಸಂತಿಗೆ ಕಾವೇರಿಯ ಗುಣಶೀಲಗಳು ಸರಿ ಕಂಡುವು. ಪರಸ್ತ್ರೀ ಮೋಹಿತನಾದವನು ತನ್ನ ಪತಿಯಾಗಿದ್ದರೂ ಸರಿಯೆ ಅವನೊಡನೆ ಸಂಸಾರ ಸಾಗಿಸಲಾರೆನೆಂದು ಮೋರೆ ತಿರುವಿ ಹೋದ ಕಾವೇರಿ ಅನುಪಮ ಧೈರ್ಯ ಸಾಹಸಗಳ ಮೂರ್ತಿಯೇ ಆಗಿದ್ದಾಳೆ. ಒಂದು ವೇಳೆ ಬಗ್ಗಿ ಬಂದಿರುತಿದ್ದರೆ ನೆಲದ ವರೆಗೂ ಒಗ್ಗಿ ಬಿದ್ದು ಹೋಗುತಿದ್ದಳೇನೋ! ಅವಳ ಕೌಟುಂಬಿಕ ಜೀವನವೂ ಸುಖಕರವಾಗುತಿದ್ದಿಲ್ಲ. ಸ್ವತಃ ವಾಸಂತಿ ಮತ್ತು ಅವಳಿಗೆ ಒಂದೇ ಮನೆಯಲ್ಲಿ ಕೂಡಿ ಬರುತಿದ್ದಿಲ್ಲ. ಸಣ್ಣ ಸಣ್ಣ ವಿಷಯಗಳಲ್ಲಿ ಮುನಿಸು, ಮಾತುಗಳೇಳುತಿದ್ದುವು. ಕಾವೇರಿಯ ಮೇಲೆ ವಾಸಂತಿಗೆ ಗೌರವವುಂಟಾಗುತಿದ್ದಿಲ್ಲ.

ಆದರೆ ಈಗ ಅದೇ ಕಾವೇರಿ ವಾಸಂತಿಗೆ ಅಭಿಮಾನ ದೇವತೆಯಾಗಿದ್ದಾಳೆ. ಅವಳ ಮೇಲೆ ತುಂಬ ಪ್ರೀತಿ ಸಹಾನುಭೂತಿಗಳು ತಲೆದೋರಿದುವು. ಈ ಆನಂದರಾಯ ಅವಳ ಬಾಳನ್ನು ಕೂಡ ಹಾಳುಮಾಡಲೆತ್ನಿಸಿ

ದುದನ್ನು ನೆನಸಿ ನೊಂದಳು. ಅದಕ್ಕೆ ತಾನೂ ಒಬ್ಬಳು ಕಾರಣಳಾದೆನಲ್ಲ ಎಂದು ಅವಳು ಪಶ್ಚಾತ್ತಾಪದ ಬಿಸಿಯುಸಿರು ಬಿಟ್ಟಳು. "ನಾನೆಲ್ಲಾದರೂ ಹೋಗಿ ಬಿಡುತ್ತೇನೆ. ಆ ಮೇಲಾದರೂ ಅವಳ ಜೀವನದಲ್ಲಿ ಆನಂದದ ಸೆಲೆ ಹರಿದೀತು. ಆನಂದರಾಯ ಅವಳನ್ನು ಆದರಿಸದೇ ಇರಲಾರ" ಎಂದು ಅವಳು ಬಯಸಿದುದುಂಟು. ಒನ್ಮೊಮ್ಮೆ ಪ್ರಾಣತ್ಯಾಗದ ವಿಚಾರ ಹಾದುದುಂಟು. ಅದೃಷ್ಟದಿಂದ ಈಗ ಸಾವು ತಾನಾಗಿ ಬಂದಿತಲ್ಲ ಎಂದು ಅವಳು ಸ್ವಲ್ಪ ಸಂತುಷ್ಟಳೂ ಆಗಿದ್ದಾಳೆ. ಈ ವೇಳೆ ಕಾವೇರಿಯನ್ನು ಕಾಣುವ ಒಂದು ಅಭಿಲಾಷೆಯಾಯ್ತು ಅವಳಿಗೆ. ಆದುದರಿಂದಲೇ ಅವಳು ಕಾವೇರಿ ಮಂಗಳೂರಿನಲ್ಲಿದ್ದಾಳೆಯೇ ಎಂದು ವಿಚಾರಿಸಿದಳು ಹೊರತು ಸವತಿ ಮತ್ಸರದ ಕಿಡಿ, ಸಿಡಿಮಿಡಿಗಳಿಂದಲ್ಲ.

ಆದುದರಿಂದ "ಕಾವೇರಿ ಎಲ್ಲಿದ್ದಾಳೆ?" ಎಂದು ಪುನಃ ಅವಳು ಕೇಳಿದಳು.

"ಬಂಗಾಡಿಯಲ್ಲಿ."

"ನನ್ನನ್ನು ಅಲ್ಲಿಗೆ ಕರೆದೊಯ್ಯಿರಿ."

ಅವಳ ಈ ನಿರ್ಧಾರವನ್ನು ಅರಿತು ಆನಂದರಾಯ ಬೆರಗಾದ. ಮಂಗಳೂರಿಗೆ ಬಂದ ಕಾವೇರಿ ವಾಸಂತಿಯ ಮನೆಯಲ್ಲಿ ಇಳಿಯಲು, ಇರಲು ನಿರಾಕರಿಸಿ ಹೋಗಿದ್ದಳು. ಹಾಗಿರುವಾಗ ಈಗ ಈ ಅವಸ್ಥೆಯಲ್ಲಿ ಅವಳ ಕಾಲ ಬುಡಕ್ಕೆ ಹೋಗಿ ಬೀಳುವುದು ಲಜ್ಜೆಗೇಡಿತನವಲ್ಲವೇ? ಅವಳು ಅಂಗೀಕರಿಸದೆ ತುಚ್ಛೀಕರಿಸಬಹುದು. ಅಲ್ಲದೆ ಸ್ವತಃ ಅವನಿಗೂ ಅಲ್ಲಿಗೆ ತೆರಳಲು ಇಷ್ಟವಿಲ್ಲ. ಕಾವೇರಿ, ಅರವಿಂದ, ಗೋಪಾಲರಾಯರು ಎಲ್ಲರೂ ಅವನ ದೃಷ್ಟಿಯಲ್ಲಿ ಪರಮ ವೈರಿಗಳಾಗಿದ್ದಾರೆ! ತಾನು ಸೋತು ಅವರ ಮನೆ ಬಾಗಿಲಿಗೆ ಹೋದಂತಾಗುತ್ತದೆ. ಆಗ ಅವರು ತಿರಸ್ಕರಿಸಿದರೆ ಸಹಿಸುವುದು ಅಸಾಧ್ಯ. ಅದಕ್ಕಿಂತ ಅಪಮಾನ ಇನ್ನೊಂದಿಲ್ಲ. ಈ ಆಪತ್ಕಾಲದಲ್ಲಿ ಇವಳಿಗೆ ಈ ದುರ್ಬುದ್ಧಿ ಏಕೆ ಹುಟ್ಟಿತು? ಹೀಗೆ ಅವನು ಬಹು ಹೊತ್ತು ಚಂಚಲ ಮನಸ್ಕನಾಗಿ ವಿಚಾರದ ಒರೆಗಲ್ಲನ್ನು ತಿಕ್ಕಿದ. "ಬಂಗಾಡಿಗೆ ಹೋಗೋಣ" ಎಂದು ಪುನಃ ಪುನಃ ವಾಸಂತಿ ಆಗ್ರಹ ಹಿಡಿದುದರಿಂದ ಆನಂದರಾಯ ಕೊನೆಗೆ ಉಪಾಯವಿಲ್ಲದೆ ಒಪ್ಪಿದ.

ಬಂಗಾಡಿಗೆ ಮುಟ್ಟಿದಾಗ ಮಧ್ಯರಾತ್ರಿ ದಾಟಿತ್ತು. ಕಿಲ್ಲೂರು ಹೊಳೆಯಲ್ಲಿ ಬಹಳ ನೀರಿಲ್ಲದಿದ್ದರೂ ಅದರ ಆಚೆ ಕಾರು ತೆರಳುವಂತಿರಲಿಲ್ಲ. ಆದುದರಿಂದ ಆನಂದರಾಯ ಹೊಳೆ ಬದಿಯಲ್ಲಿದ್ದ ಒಂದು ಗುಡಿಸಲಿಗೆ ತೆರಳಿ "ಹೋ, ಹೋಜ್ಜಾ, ಹೋಯಿ, ಯಾರಿದ್ದೀರಿ?" ಎಂದು ಕರೆದ. ಬ್ಯಾರಿ ಎಚ್ಚತ್ತು ಬಂದ ಮೇಲೆ ತನ್ನ ಕೈಯಲ್ಲಿದ್ದ ಬ್ಯಾಟರಿಯನ್ನು ಕೊಟ್ಟು ಅವನನ್ನು ಗೋಪಾಲರಾಯರ ಮನೆಗೆ ಕಳಿಸಿದ. ಪ್ರಾಣಾಂತಿಕ ಸ್ಥಿತಿಯಲ್ಲಿದ್ದವರನ್ನು ಮೋಟಾರಿನಲ್ಲಿ ಕರೆದು ತರಲಾಗಿದೆಯೆಂದು ಆನಂದರಾಯ ಬ್ಯಾರಿಗೆ ತಿಳಿಸಿದನೇನೋ ನಿಜ. ಆದರೆ ಯಾರೆಂದು ಹೇಳಿರಲಿಲ್ಲ. ಹೀಗಾಗಿ ಗೋಪಾಲರಾಯರ ಮನೆಯಲ್ಲಿ ಕೋಲಾಹಲವೇ ಉಂಟಾಯಿತು. ಅಳಿಯನೇ ಜೀವಕ್ಕೇನಾದರೂ ಮಾಡಿಕೊಂಡಿರಬೇಕು. ಅರವಿಂದ ಕರೆದು ತಂದಿದ್ದಾನೆ ಎಂದವರೆಲ್ಲರೂ ಯೋಚಿಸಿದರು. ಹೊದ್ದ ಕಂಬಳಿಯನ್ನೇ ಮೈಮೇಲೆ ಹಾಕಿಕೊಂಡು ಅವರು ಬಂದರು. ಮೋಟಾರಿನ ಬಳಿ ಚೊಣ್ಣ ಹಾಕಿ ನಿಂತವನು ಅರವಿಂದನೇ ಎಂದು ಭ್ರಮಿಸಿ "ಅರವಿಂದ! ಏನಾಯ್ತು ಮಗನೇ?'' ಎಂದು ಅಷ್ಟು ದೂರದಿಂದಲೇ ಕೂಗಿದರು. "ಅರವಿಂದನಲ್ಲ. ನಾನು" ಎಂದು ಆನಂದರಾಯ ಉತ್ತರ ಕೊಟ್ಟಾಗ ಅವರಿಗೆ ಸಮಾಧಾನವಾಯಿತು. "ಏನಾಯಿತಪ್ಪಾ! ಯಾರಿಗೆ ಹುಷಾರಿಲ್ಲ?'' ಎಂದು ಅವರು ಕೇಳಿದರು. ಆನಂದರಾಯ ಸ್ವಲ್ಪ ದೂರ ಕರೆದು ಅವರಿಗೆ ನಡೆದ ಸಂಗತಿಯನ್ನು ತಿಳಿಸಿದ. "ಹೋ, ಹೋ! ಆಗಲಿ! ನಮ್ಮನೆಗೆ ಕರೆದುಕೊಂಡು ಹೋಗೋಣ. ಅವಳೂ ನನ್ನ ಒಬ್ಬಳು ಮಗಳು!" ಎಂದು ಅವರು ಒಪ್ಪಿ ಇಬ್ಬರು ಮೂವರನ್ನು ಕರೆದು ತರಲು ಆ ಬ್ಯಾರಿಗೆ ಆಜ್ಞಾಪಿಸಿದರು. ಅವರು ಬಂದ ಬಳಿಕ ಕಂಬಳಿಯ ಒಂದು "ಮಂಚಿಲ್" ತಯಾರಿಸಿದರು. ವಾಸಂತಿಯನ್ನು ಅದರ ಮೇಲೆ ಮಲಗಿಸಿ ಮನೆಗೆ ಹೊತ್ತು ತಂದರು. ಮಂಚಿಲಿನಲ್ಲಿ ಮಲಗಿದವನು ತನ್ನ ಪತಿಯೆಂದೇ ಗ್ರಹಿಸಿ ಕಾವೇರಿ ಮೂರ್ಛೆಹೋದಳು. ಆನಂದರಾಯ ಅವಳ ಉಪಚಾರ ಮಾಡಬೇಕಾಗಿ ಬಂದಿತು. ಸ್ವಲ್ಪಹೊತ್ತಿನ ಮೇಲೆ ಅವಳು ಚೇತರಿಸಿಕೊಂಡಳು. ಆದರೂ ಬೆಳಗಾದ ಮೇಲೆಯೇ ಅವಳಿಗೆ ಎಲ್ಲ ಹೆಚ್ಚು ವಿಶದವಾಗಿ ಗೋಚರವಾಯಿತು.

ಕಾವೇರಿ ಬೆಳಿಗ್ಗೆ ವಾಸಂತಿಯನ್ನು ಮಲಗಿಸಿದ್ದ ಕೋಣೆಗೆ ಬಂದಳು

ಬಾಗಿಲನ್ನು ದೂಡಿದ ಶಬ್ದಕ್ಕೆ ವಾಸಂತಿಯ ಕಣ್ಣೆವೆಗಳು ತೆರೆದುವು. ಕಾವೇರಿಯ ಮೋರೆಯಲ್ಲಿ ಸಿಟ್ಟು ಸಿಡುಕು ಯಾವುದೂ ಇರಲಿಲ್ಲ. ಅದರ ಬದಲು ತುಂಬ ಕರುಣೆ ಕಾಣಿಸಿತು. ಸನ್ನೆಯಿಂದ ವಾಸಂತಿ ಕರೆದುದರಿಂದ ಕಾವೇರಿ ಹತ್ತಿರ ತೆರಳಿ ಮೊಣಕಾಲೂರಿ ಅವಳ ಕೆನ್ನೆಯ ಹತ್ತಿರ ತನ್ನ ಮುಖವನ್ನಿರಿಸಿದಳು. "ನನ್ನ ಪೆಟ್ಟಿಗೆಯನ್ನು ತೆರೆ. ಅದರಲ್ಲಿ ನಿನಗಾಗಿ ಒಂದು ಪತ್ರವಿದೆ" ಎಂದು ಪಿಸುಗುಟ್ಟಿದಳು. ವಾಸಂತಿ ಮೂಡುಗೆರೆಗೆ ಬಂದ ಬಳಿಕ ಆ ಪತ್ರವನ್ನು ಬರೆದಿದ್ದಳು. ಅದರಲ್ಲಿ ತನ್ನ ಜೀವನದ ಆದ್ಯಂತ ಕಥೆಯನ್ನೆಲ್ಲ ಬರೆದಿದ್ದಳು ಮತ್ತು ತನ್ನ ಕೊನೆಯ ಬಯಕೆಯನ್ನು ಈಡೇರಿಸಬೇಕೆಂದು ಬೇಡಿಕೊಂಡಿದ್ದಳು. ಅದನ್ನು ಓದುತ್ತ ಹೋದಂತೆ ಕಾವೇರಿಯ ಕಣ್ಣುಗಳಿಂದ ನೀರು ಸುರಿಯಲಾರಂಭಿಸಿತು. ವೇಶ್ಯೆಯೆಂದು ಯಾರ ಮೇಲೆ ತಾತ್ಸಾರವಿದ್ದಿತೋ ಅವಳೇ ಈಗ ಪರಮ ಪೂಜನೀಯ ಸ್ತ್ರೀಯಾಗಿ ಕಾವೇರಿಗೆ ತೋರಿದಳು. ಅವಳ ಆ ಪ್ರೇಮ, ಸೇವೆಗಳಿಗೆ ಕೊನೆಗೆ ದೊರೆತ ಪ್ರಾಪ್ತಿ ಇದೆಯೇ ಎಂದು ಅವಳು ಹಲುಬಿದಳು. ಅವಳು ವಾಸಂತಿಯ ಹತ್ತಿರ ಬಂದು ಅವಳೆದೆಯ ಮೇಲೆ ತಲೆಯನ್ನಿಟ್ಟು "ಅಕ್ಕಾ ! ನೀನು ಅವರನ್ನು ಪ್ರೇಮಮಾಡುತ್ತಿರುವೆಯೆಂದು ನನಗೆ ಗೊತ್ತಾಗಿದ್ದರೆ ನಾನು ಲಗ್ನವಾಗಲು ಒಪ್ಪುತಿದ್ದಿಲ್ಲ. ನನ್ನ ತಪ್ಪನ್ನು ಕ್ಷಮಿಸು '' ಎಂದಳು.

"ಅಕ್ಕಾ" ಎಂದು ಕಾವೇರಿ ಸಂಭೋಧಿಸಿದುದರಿಂದ ವಾಸಂತಿಗೆ ತುಂಬ ಸಂತೋಷವಾಯಿತು. ಅವಳು ಕಾವೇರಿಯ ಮೇಲೆ ಪ್ರಸನ್ನಳಾದಳು. "ಇದರಲ್ಲಿ ನಿನ್ನ ತಪ್ಪಿಲ್ಲ'' ಎಂದು ಅವಳು ಹೇಳಿ "ಅವರನ್ನು ಕರೆ" ಎಂದು ಹೇಳಿ ಕಳಿಸಿದಳು. ಆನಂದರಾಯ ಬಂದ ಮೇಲೆ ವಾಸಂತಿಯ ಸೂಚನೆಯಂತೆ ಕಾವೇರಿ ಆ ಪತ್ರವನ್ನು ಅವನ ಕೈಗಿತ್ತಳು. ಅದನ್ನು ಓದಿದ ಆನಂದರಾಯನೂ ದುಃಖಿತನಾದ. ಅವಳ ಬಳಿ ನಿಂತು ಕಣ್ಣೊರಸಿಕೊಂಡ. ವಾಸಂತಿ ಕಾವೇರಿಯನ್ನು ಸನ್ನೆಯಿಂದಲೇ ಕರೆದಳು. ಮತ್ತು ಅವಳು ಬಂದ ಮೇಲೆ ತನ್ನೆಲ್ಲ ಶಕ್ತಿಯನ್ನೂ ಕೊನೆಗೊಮ್ಮೆ ಉಪಯೋಗಿಸಿ ಅವಳ ಕೈಯನ್ನು ಎತ್ತಿ ಅವನ ಕೈಗಿತ್ತಳು. ಇಬ್ಬರ ಕಣ್ಣುಗಳಿಂದಲೂ ಅಶ್ರುಧಾರೆ ಪ್ರವಹಿಸಿತು.

*****§§*****

# ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

ಸಂಪಾದಕರು ಮತ್ತು ಪ್ರಕಾಶಕರು : **ಎಂ. ಹರಿದಾಸರಾವ್**

ಈ ಗ್ರಂಥಮಾಲೆಯು ೧೯೪೮ನೇ ಅಗಸ್ಟ್ ೧೫ನೇ ತಾರೀಖಿನ ಶುಭ ದಿನ ಆರಂಭವಾಗಿದೆ. ಮತ್ತು ಅಂದಿನಿಂದ ತಪ್ಪದೇ ನಡೆಯುತ್ತ ಬಂದಿದೆ.

ಪ್ರತಿ ವರುಷದ ಅಗಸ್ಟ್, ನವಂಬರ್, ಫೆಬ್ರುವರಿ ಮತ್ತು ಮೇ ತಿಂಗಳಲ್ಲಿ ಹೀಗೆ ಮೂರು ತಿಂಗಳಿಗೊಂದರಂತೆ ಒಟ್ಟು ವರುಷಕ್ಕೆ ನಾಲ್ಕು ಗ್ರಂಥಗಳು ಅರಳುತ್ತವೆ.

ಪ್ರಕಟನೆಯ ತಾರೀಖಿನಲ್ಲಿ ಹೆಚ್ಚು ಕಡಿಮೆ ಆಗಬಹುದು. ಮತ್ತು ಎರಡು ಮೂರು ಪುಷ್ಪಗಳನ್ನು ಒಂದೇ ದೊಡ್ಡ ಗ್ರಂಥದಲ್ಲಿ ಕೂಡಿಸಿ ಕೊಡಬಹುದು.

ಈ ಗ್ರಂಥಮಾಲೆಯಲ್ಲಿ ಕತೆಗಳು, ಕಾದಂಬರಿಗಳು, ನಾಟಕಗಳು, ರಾಜಕೀಯ ಮತ್ತು ಆಧ್ಯಾತ್ಮಿಕ ಗ್ರಂಥಗಳು ಮೊದಲಾದವುಗಳನ್ನು ಪ್ರಕಟಿಸಲಾಗುತ್ತದೆ.

ಗ್ರಾಮ ಪಂಚ್ಯಾತ್ ಬೋರ್ಡ ಲೈಬ್ರರಿಗಳು, ಗ್ರಾಮಸಂಘ ಲೈಬ್ರರಿಗಳು, ಸಹಕಾರೀ ಸೊಸಾಯಿಟಿ ಲೈಬ್ರರಿಗಳು, ಡಿಸ್ಟ್ರಿಕ್ಟ್ ಮತ್ತು ಮುನಸಿಪಲ್ ಲೈಬ್ರರಿಗಳು, ಶಾಲೆ ಕಾಲೇಜುಗಳು, ವಿದ್ಯಾರ್ಥಿ ವಾಚನಾಲಯಗಳಿಗೆಲ್ಲ ಈ ಗ್ರಂಥಗಳು ಅತ್ಯುಪಯುಕ್ತವಾಗಿವೆ.

ವರುಷದ ಯಾವುದೇ ಸಮಯದಲ್ಲಿ ಗ್ರಂಥಮಾಲೆಯ ಚಂದಾದಾರರಾಗಬಹುದು. ಅವರಿಗೆ ಆ ವರುಷದ ಆರಂಭದಿಂದ ಪ್ರಕಟಿಸಿದ ಎಲ್ಲ ಗ್ರಂಥಗಳನ್ನು ಕೊಡಲಾಗುವದು. ಪುಸ್ತಕ ವ್ಯಾಪಾರಿಗಳಿಗೆ ಧಾರಾಳ ಕಮಿಶನ್

೧. **ವಾರ್ಷಿಕ ಚಂದಾ ರೂ. ೫** (ಅಂಚೆವೆಚ್ಚ ಕೂಡಿ)

೨. **ಪೋಷಕರು ರೂ. ೧೦** (ಅವರಿಗೆ ಮೂರು ವರುಷ ಗ್ರಂಥಗಳು)

೩. **ಹಿತಚಿಂತಕರು ರೂ. ೨೫** (ಅವರಿಗೆ ಏಳು ವರುಷ ಗ್ರಂಥಗಳು)

೪. **ಆಶ್ರಯದಾತರು ರೂ. ೫೦** (ಹದಿಮೂರು ವರುಷ ಗ್ರಂಥಗಳು)

೫. **ಆಜೀವ ಸದಸ್ಯರು ರೂ. ೧೦೦** (ಸದಾಗಾಲ ಗ್ರಂಥಗಳು)

Editor and Publisher : **M. Haridas Rao**

***SARVODAYA SAHITYAMALA, HUBLI***

# ಪ್ರಕಟವಾಗಿರುವ ಗ್ರಂಥಗಳು

೧. ಕ್ರಿಸ್ಮಸ್ ಕಾಣಿಕೆ ಮತ್ತು ಇತರ ಕಥೆಗಳು (ಪುನಃ ಅಚ್ಚಿನಲ್ಲಿ)
೨. ಬದುಕಿನ ದಾರಿ .... .... .... .... .... (ಕಾದಂಬರಿ)ಪುನಃ ಅಚ್ಚಿನಲ್ಲಿ
೩. ಮರುಭೂಮಿಯ ಆರಬರು.... .... (ರಾಜಕಾರಣ).... ೧—೮—೦
೪. ವಿಜಯ ಲಕ್ಷ್ಮಿ ಪಂಡಿತ್ .... .... (ಜೀವನ ಚರಿತ್ರೆ).... ೧—೪—೦
೫. ಅವರು ಯುದ್ಧಕ್ಕೆ ಹೋಗಲಿಲ್ಲ.... .... (ಕಥೆಗಳು)ಪುನಃ ಅಚ್ಚಿನಲ್ಲಿ
೬. ಬಾಳಿನ ಗಿಡ .... .... .... .... .... .... (ಕಾದಂಬರಿ).... ೨-೧೨—೦
೭. ರಾಧಸ್.... .... .... .... .... .... .... (ಪ್ರಬಂಧ)ಪುನಃ ಅಚ್ಚಿನಲ್ಲಿ
೮. ವಾಸನಾ .... .... .... .... .... .... (ಕಾದಂಬರಿ)ಪುನಃ ಅಚ್ಚಿನಲ್ಲಿ
೯. ಧಾರವಾಡದ ಹುಡುಗಿ.... .... .... .... (ಕಾದಂಬರಿ).... ೧—೮—೦
೧೦. ಉಕ್ಕಿನ ಮನುಷ್ಯ-ಸ್ಟಾಲಿನ್ .... (ಜೀವನ ಚರಿತ್ರೆ).... ೨—೦—೦
೧೧. ಬೇತಾಳಗಳ ಕುಣಿತ .... .... .... .... (ವಿಡಂಬನ).... ೧—೦—೦
೧೨. ಆ ಸುಂದರಿಯ ಗಂಡ.... .... .... .... (ಕಥೆಗಳು).... ೦-೧೨—೦
೧೩. ಹುಚ್ಚರ ಮನೆ .... .... .... .... .... (ಕಾದಂಬರಿ).... ೧—೮—೦
೧೪. ಸಿರಿಗನ್ನಡ ಮಹಾಭಾರತ.... (ವಚನ-ಸಂಪೂರ್ಣ).... ೩— ೦—೦
೧೫. ಇಂದಿನ ಪಿಲಿಪ್ಪಾಯಿನ್ಸ್ (ಬಿಡಿಪುಷ್ಪ-ರಾಜಕಾರಣ).... ೦—೩—೦
೧೬. ಎಚ್ಚತ್ತ ಆಗ್ನೇಯ ಏಶಿಯಾ (ಬಿಡಿಪುಷ್ಪ-ರಾಜಕಾರಣ) ೧—೮—೦
೧೭. ನವರತ್ನದ ಕಡಗ.... .... .... .... .... (ಕಥೆಗಳು).... ೧— ೦ — ೦
೧೮. ಮಾತೃಶ್ರೀ .... .... .... .... .... .... (ಕಾದಂಬರಿ).... ೧ — ೪—೦
೧೯. ಕಾವ್ಯದ ಕಾರಖಾನೆ .... .... .... .... ....(ನಾಟಕ).... ೧—೪—೦
೨೦. ಹಸಿದ ಹಂಬಲ .... .... .... .... .... (ಕಾದಂಬರಿ).... ೧--೮--೦
೨೧. ಸಚಿತ್ರ ಕಾಮಸೂತ್ರ .... .... .... .... .... .... .... .... ೧--೮--೦
೨೨. ಕೈಹಿಡಿದ ಕಾವೇರಿ .... .... .... .... (ಕಾದಂಬರಿ).... ೨—೦—೦
೨೩. ಉಳ್ಳಯ್ಯ .... .... .... .... .... .... (ಕಾದಂಬರಿ).... (ಅಚ್ಚಿನಲ್ಲಿ)